ಹಿರಿಯ ರಾಜಕಾರಣಿಯ ಬಿಚ್ಚು ನುಡಿಗಳು

ಮನೆ ಮಂದಿಗೆಲ್ಲ ಮುದ ನೀಡುವ ಮಾಸಿಕ

# ಕಸ್ತೂರಿ



ಫೆಬ್ರುವರಿ ೧೯೯೬

ಬೆಲೆ: ರೂ. ೬-೦೦

೧೫ ವಿಡಂಬನಾತ್ಮಕ ಮಿನಿ ಕಥೆಗಳು




# ಕಸ್ತೂರಿ

ಕನ್ನಡ ಡೈಜೆಸ್ಟ್

ಲೋಕ ಶಿಕ್ಷಣ ಟ್ರಸ್ಟಿನ
ಹೆಮ್ಮೆಯ ಕಾಣಿಕೆ

ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಎನ್.ವಿ. ಜೋಶಿ

ಸಹಸಂಪಾದಕ:
ವೆಂಕಟನಾರಾಯಣ

ನಿರ್ವಹಣೆ:
ಗೋಪಾಲ ವಾಜಪೇಯಿ
ಶ್ರೀಕಾಂತ ಮಳಗಿ

ಕಲೆ:
ಪಿ.ಆರ್. ಪಾಟೀಲ
ಎಂ.ಎಸ್. ಶಶಿಧರ

ಮುಖಪುಟ:
ಮಂದಸ್ಮಿತ
ವರ್ಣಛಾಯಾಚಿತ್ರ:
ಎಂ.ವಿಶ್ವನಾಥ್

ಕಸ್ತೂರಿ ಕಾರ್ಯಾಲಯ,
ಕೊಪ್ಪೀಕರ ರಸ್ತೆ,
ಹುಬ್ಬಳ್ಳಿ-೫೮೦ ೦೨೦.


## ಚಿಂತನ

ನಗೆ ಹೋಗಿ ಹೊಗೆ ಆಗುವುದು ಎಂಬ ನಾಣ್ಣುಡಿ ಮತ್ತೆ ಮತ್ತೆ ನಿಜವಾಗುತ್ತಿರುವುದಕ್ಕೇನು ಕಾರಣ? ನಲಿಯುತ್ತ ಹೊರಗೆ ಹೋದವರು ಆ ನಗುವಿನೊಂದಿಗೇ ಮನೆಗೆ ಮರಳಿಯಾರೆಂಬ ನಂಬಿಕೆಯೇ ಹೊರಟು ಹೋಗಿರುವ ಈ ದಿನಗಳಲ್ಲಿ ಹರ್ಯಾಣದ ದಬ್ವಾಲಿಯಲ್ಲಿ ನಡೆದಂಥ ಪ್ರಕರಣಗಳು ಖಂಡಿತಕ್ಕೂ ಎಚ್ಚರಿಕೆಯ ಗಂಟೆ ಆಗಬೇಕು.

ಊಹುಂ, ನಾವು ಇಂಥ ವಿಷಯಗಳಲ್ಲಿ ಕುರುಡರೂ ಹೌದು, ಕಿವುಡರೂ ಹೌದು. ಹದಿನೈದು ವರ್ಷಗಳ ಸಂಭವಿಸಿದ ವೀನಸ್ ಸರ್ಕಸ್ ದುರಂತವಿನ್ನೂ ಕಣ್ಣಿಗೆ ಕಟ್ಟಿದ ಹಾಗಿದೆ. ಮೊನ್ನೆ ಡಿಸೆಂಬರ್ ೨೩ ರಂದು ದಬ್ವಾಲಿಯಲ್ಲಿ ಆದ ದುರ್ಘಟನೆ ಆ ದುರಂತದ ಪ್ರತಿರೂಪ. ಎರಡೂ ಕಡೆ ಅಗ್ನಿ ಅನಾಹುತವೇ ಸಂಭವಿಸಿತು. ಪಾರಾಗಿ ಹೋದೇನೆಂದರೂ ಎರಡೂ ಕಡೆ ಇದ್ದವುಗಳು ಒಂದೊಂದೇ ಬಾಗಿಲು. ಗಾಬರಿ, ತುಳಿತ, ಅಗ್ನಿ ತಾಂಡವಗಳ ಫಲವಾಗಿ ಪ್ರೇಕ್ಷಕರಾಗಿ ಬಂದವರು ಪ್ರೇತಗಳಾಗಬೇಕಾಯಿತು.

ಸುರಕ್ಷತಾ ಕ್ರಮಗಳ ಬಗ್ಗೆ ಉದ್‌ಗ್ರಂಥಗಳಿಗಾಗುವಷ್ಟು ಭಾಷಣ-ಲೇಖನಗಳನ್ನೀಯುವವರಿಗೇನೂ ನಮ್ಮಲ್ಲಿ ಕೊರತೆಯಿಲ್ಲ. 'ಸುರಕ್ಷತಾ ಸಪ್ತಾಹ'ವೆಂದು ವರ್ಷದ ಯಾವುದೋ ಏಳುದಿನ ಹಗಲಿರುಳು ಅದೇ ಮಂತ್ರ ಜಪಿಸಿ, ಉಳಿದ ಅವಧಿಯಲ್ಲಿ ಜೋಂಪಿಗರಾಗಿ ಗೊರಕೆ ಹೊಡೆಯುವಂಥವರು ನಾವು. ಇಂಥ ದುರಂತಗಳು ಸಂಭವಿಸಿದಾಗ ತನಿಖೆ, ಅದಕ್ಕೊಂದು ಆಯೋಗ ಮುಂತಾದ ದ್ರಾವಿಡ ಪ್ರಾಣಾಯಾಮಗಳಾಗುತ್ತವೆಯೆ ವಿನಾ ಕಾಲಾಂತರದಲ್ಲಿ ಅದೆಲ್ಲ ಮರೆತು ಹೋದ ಕಥೆಯಾಗಿ ಬಿಡುತ್ತದೆ.

ಕೊನೇ ಪಕ್ಷ 'ಶೈಕ್ಷಣಿಕ' ಪ್ರವಾಸಕ್ಕೆಂದು ಮಕ್ಕಳು ಹೊರಡುವ ಮುನ್ನ ವಾಹನದ ಸುರಕ್ಷತೆಯ ಬಗ್ಗೆ, ರಸ್ತೆಯ ಸುಗಮತೆಯ ಬಗ್ಗೆ, ಹಾಗೂ ಇಂಥ ಸಮಾರಂಭ ಸಮಾವೇಶಗಳು ನಡೆಯುವ ಮುನ್ನ ಆಯಾ ಸಭಾಂಗಣದ ವಿದ್ಯುತ್ ವ್ಯವಸ್ಥೆಯ ಸಮರ್ಪಕತೆಯ ಬಗ್ಗೆ ಎಚ್ಚರಿಕೆ ವಹಿಸುವುದು ಮೊದಲ ಅವಶ್ಯಕತೆ. ಹಾಗೆಯೇ ಸಾಧ್ಯವಿದ್ದಷ್ಟು ಪಾರಾಗಿ ಹೋಗಬಹುದಾದಂಥ ಜಾಗಗಳನ್ನು ಇಂಥ ಕಾರ್ಯಕ್ರಮಗಳಿಗಾಗಿ ಆಯ್ದುಕೊಳ್ಳುವುದೂ ಸೂಕ್ತ.

ಮುನ್ನೆಚ್ಚರಿಕೆ ಎಂಬುದು ಯಾವುದಕ್ಕಾದರೂ ಅನ್ವಯವಾಗುವ ವಿಚಾರ ಅಲ್ಲವೆ?

• ವ್ಯವಸ್ಥಾಪಕ ಸಂಪಾದಕ



# ಸಹಚಿಂತನ

### ಶಂಬಾ ಸ್ಮರಣೆ

೧೯೯೬ ಸಂಚಿಕೆಯಲ್ಲಿ ಪ್ರಕಟವಾದ ಜಿ.ಎಂ. ಹೆಗಡೆಯವರ "ಶಂಬಾ ಸ್ಮರಣೆ" ತುಂಬಾ ಹಿಡಿಸಿತು. ಶಂಬಾ ಅವರ ಬಗೆಗೆ ಕೇಳಿ ತಿಳಿದವರಿಗೆ ಈ ಲೇಖನ ತುಂಬಾ ಸಂತೋಷ ಸಮಾಧಾನ ತಂದಿತು. ೯೬ ವರುಷ ತುಂಬು ಜೀವನ ಸಾರ್ಥಕ ಬದುಕನ್ನು ಬದುಕಿದ ಶಂಬಾ ಅವರ ಶತಮಾನೋತ್ಸವ ಅರ್ಥಪೂರ್ಣವಾಗಿ ನಡೆಯಬೇಕೆಂಬುದೇ ಅಭೀಪ್ಸೆ.

ತಿಕೋಟಾ — ದಾನಪ್ಪ ಜತ್ತಿ

ಶಂಬಾ ಜೋಶಿಯವರ ಚಿಂತನಶೀಲ ಹಾಗೂ ಸಂಶೋಧನಾತ್ಮಕ ವ್ಯಕ್ತಿತ್ವವನ್ನು ಡಾ. ಜಿ.ಎಂ. ಹೆಗಡೆಯವರು ಎಳೆಎಳೆಯಾಗಿ ಬಿಡಿಸಿ ಓದುಗರ ಮುಂದಿಟ್ಟಿದ್ದಾರೆ. ಶಂಬಾ ಬರಹ ಸಂಶೋಧನೆ ಕನ್ನಡ ಸಾರಸ್ವತಲೋಕಕ್ಕೆ ಚಿರಂತನ ಕೊಡುಗೆ. ಭಾಷಾಭಿಮಾನದ ಜೊತೆಗೆ ಸ್ಥಳನಾಮಗಳ ಹಾಗೂ ಶಬ್ದಗಳ ತುಲನಾತ್ಮಕ ಅಧ್ಯಯನದಿಂದ ಇಡೀ ಜನಾಂಗದ ಸಂಸ್ಕೃತಿಯನ್ನೇ ಶಂಬಾ ಜಾಲಾಡಿದ್ದಾರೆ.

ಗದಗ — ಕಟ್ಟಬಸಪ್ಪ ಬಾಲಪ್ಪ ಬಜಿ

ಶಂಬಾ ಜೋಶಿಯವರು ಕನ್ನಡ ನಾಡಿನ ದಿವ್ಯ ಮೂರ್ತಿ. ಕನ್ನಡದ ಬಗ್ಗೆ ಅಭಿಮಾನ ಉಳ್ಳವರು. ಮಹಾ ಸಂಶೋಧಕರು. ಕನ್ನಡ ಶಿಕ್ಷಕರಾಗಿಯೂ ಕನ್ನಡದ ಸೇವೆ ಮಾಡಿದವರು. ಆದರ್ಶವಾದಿಗಳು. ದೇಶಸೇವೆಗಾಗಿ ಪಣತೊಟ್ಟವರು. ಅನೇಕ ಗ್ರಂಥಗಳನ್ನು ರಚಿಸಿದವರು. ಚಳವಳಿಯಲ್ಲಿ ಭಾಗವಹಿಸಿ ಕನ್ನಡದ ಅಭಿಮಾನ ತೋರಿಸಿದವರು. ಅಂಥವರ ಬಗ್ಗೆ ವಿವರವಾದ ಲೇಖನ ಪ್ರಕಟಿಸಿದ್ದಕ್ಕಾಗಿ ಧನ್ಯವಾದಗಳು.

ರೋಣ — ಶಂಕರಗೌಡ ಆರ್. ಪಾಟೀಲ

### ನರಿಗಳ ಬೇಟೆ

ಜನವರಿ ಸಂಚಿಕೆಯಲ್ಲಿ ಪ್ರಕಟವಾದ "ನರಿಗಳ ಬೇಟೆ"ಯನ್ನೋದಿ ಮೂರ್ಖ ಮಾನವರಿಂದ ಪ್ರಾಣಿಗಳಿಗಾಗುವ ಕಷ್ಟ ಮನಸ್ಸಿಗೆ ತಾಗಿ ಕರುಳು ಹಿಂಡಿದಂತಾಯಿತು ಮತ್ತು "ಅಪವಿತ್ರ ಮೈತ್ರಿಯ ಅತಿರೇಕದ ಪ್ರಕರಣಗಳು" ಇಂದಿನ ಜನತೆಗೆ ದುಷ್ಟ ರಾಜಕಾರಣಿಗಳ ಬಗ್ಗೆ ಕಣ್ಣು ತೆರೆಸುವಂತಿದೆ.

ಕಾರವಾರ — ಶಶಿಧರ ಕುಮಟಾಕರ

### ಕಳ್ಳರ ಜಾಲಕ್ಕೆ ಕಂಪ್ಯೂಟರ್ ತಜ್ಞರು

ಡಿಸೆಂಬರ್ ತಿಂಗಳ ಕಸ್ತೂರಿ ಶ್ರೀಗಂಧದ ಸುವಾಸನೆಯನ್ನು ಬೀರಿದ ಹಾಗಿತ್ತು. ನಿವೇದಿತಾ ದೇಸಾಯಿ ಅವರ 'ಕಂಪ್ಯೂಟರ ಬಳಸಿ ಕೋಟ್ಯಂತರ ಕದ್ದ' ವಿಷಯ ತಿಳಿದ ನಂತರ ರಶಿಯನ್ 'ತಜ್ಞರು' ಅಂತಾರಾಷ್ಟ್ರೀಯ ಕಂಪ್ಯೂಟರ್ ಕಳ್ಳರ ಜಾಲದಲ್ಲಿ ಸೇರ್ಪಡೆಯಾಗುವುದರಲ್ಲಿ ಸಂಶಯವೇ ಉಳಿಯಲಿಲ್ಲ. ಎಚ್. ಲಕ್ಷ್ಮಣರವರು ಬರೆದ 'ಪ್ರಕೃತಿಯ ವರದಾನ ಕೇಸರಿ' ಉಪಯುಕ್ತವಾಗುವಂತಹ ಲೇಖನ.

ಕುಕನೂರು — ಬಿ. ಹನುಮಂತ ಭಟ್

### ಗೀಳು ಬಿಡಿಸಿದ ಬರಹ

ಡಿಸೆಂಬರ್ ಸಂಚಿಕೆಯ 'ನೆನಪು ನೆರಳಿನಲ್ಲಿ' ಮೋಹನ್ ಆರ್. ಭಟ್ ಅವರು ಬರೆದ ಲೇಖನ ಓದಿ ಅಗರಬತ್ತಿಯ ಬಂಪರ್ ಬಹುಮಾನದ ಹುಚ್ಚು ಬಿಟ್ಟುಹೋಯಿತು. ವಿಷಯ ತಿಳಿಸಿದ್ದಕ್ಕಾಗಿ ಅವರಿಗೆ ನನ್ನ ಧನ್ಯವಾದಗಳು.

ಮೈಸೂರು — ಶ್ರೀಮತಿ ಸ್ವರ್ಣ ಪ್ರಕಾಶ್

### ಚಿಂತನೆಗೆ ಆಹಾರ

ತಮ್ಮ 'ಚಿಂತನ' ಅತ್ಯುತ್ತಮವಾಗಿ ಮೂಡಿ

ಬರುತ್ತಿದೆ. ಕಸ್ತೂರಿಯ ಮುಖಪುಟ ಚಿತ್ರದೊಂದಿಗೆ ಮೊದಲು ನಮ್ಮ ಕಣ್ಣು ನೆಟ್ಟಿರುವುದು ತಮ್ಮ ಚಿಂತನದಲ್ಲಿ. ನಮಗೂ ಸಮಸ್ಯೆಗಳ ಬಗ್ಗೆ ಚಿಂತಿಸುವಂತೆ ಮಾಡುತ್ತಿದೆ. ಈ ಬರಹವನ್ನು ಎರಡು ಪುಟಕ್ಕೆ ವಿಸ್ತರಿಸಬೇಕೆಂದು ನನ್ನ ಅಪೇಕ್ಷೆ. ಕಸ್ತೂರಿ ಜ್ಞಾನದ ಆಗರವಾಗಿದ್ದು, ನಿಜಕ್ಕೂ ಮನೆ ಮಂದಿಗೆಲ್ಲ ಮುದ ನೀಡುವ ಮಾಸಿಕವಾಗಿದೆ.

**ಪಡುಮಾರ್ನಾಡು ಜ್ಯೋತಿ ಬಸು**

ಪ್ರಕೃತಿಯ ವರದಾನವಾದ ಕೇಸರಿಯ ಬಗ್ಗೆ ಇಲ್ಲಿಯವರೆಗೂ ಹೆಚ್ಚಿಗೆ ಮಾಹಿತಿಗಳು ಸಿಕ್ಕಿರಲಿಲ್ಲ. 'ಕಸ್ತೂರಿ'ಯು(ಡಿಸೆಂಬರ್ ೯೫) ಇದರ ಬಗ್ಗೆ ಹೆಚ್ಚು ಮಾಹಿತಿಯನ್ನು ತಿಳಿಸಿತು.

**ಕಲಾದಗಿ ಎ.ಜಿ. ಹಿರೇಮಠ**

**ಪ್ರಾಸಬಿಟ್ಟ ಪ್ರಥಮ ಕವಿ**

ಡಿಸೆಂಬರ್ ತಿಂಗಳ ಸಂಚಿಕೆಯಲ್ಲಿ ಶ್ರೀ ಬಸವರಾಜ ಪುರಾಣಿಕ ಅವರು ಬರೆದ 'ಖಾದಿ ಬಟ್ಟೆಯಂತೆ ಸಾದಾ ಕವಿ' ಆದ ಕನ್ನಡ ವಾಮನನ ಕುರಿತ ಲೇಖನವನ್ನು ಪ್ರಕಟಿಸಿದ್ದು ಬಹಳ ಸ್ತುತ್ಯ. ಕನ್ನಡ ಸಾಹಿತ್ಯ ಚರಿತ್ರೆಯನ್ನು ತುಂಬ ಅಲಕ್ಷಿಸಿರುವ ನಮಗೆ ನಮ್ಮ ಪಕ್ಕದಲ್ಲೇ ಜೀವಿಸಿದ ಕವಿಯ ಬಗೆಗೆ ಈ ಲೇಖನವನ್ನೋದುವವರೆಗೆ ಅವರ ಬಗ್ಗೆ ಹೆಚ್ಚು ಗೊತ್ತಿರಲಿಲ್ಲ. ಡಾ. ರಾ. ಯ. ಧಾರವಾಡಕರರ 'ಹೊಸ-ಗನ್ನಡ ಸಾಹಿತ್ಯದ ಉದಯಕಾಲ' ಎಂಬ ಪ್ರಬಂಧದಲ್ಲಿ ಈ ಕವಿಯ ಬಗ್ಗೆ ಸ್ವಲ್ಪ ಮಾಹಿತಿ ಮಾತ್ರ ಬಂದಿತ್ತು. ಈ ಕವಿಯನ್ನು ಕುರಿತಂತೆ ವಿಸ್ತೃತ ವಿವರ ನೀಡಿದ್ದು ಚೆನ್ನಾಗಿದೆ. ಅಲ್ಲದೇ ಪ್ರಾಸ ಬಿಡುವ ಬಗ್ಗೆ ತುಂಬ ಗೊಂದಲ ಉಂಟಾದ ಸಮಯದಲ್ಲಿ ಪ್ರಾಸ ಬಿಡುವ ತ್ರಾಸು ತೆಗೆದುಕೊಂಡ ಬಂಡಾಯ ಕವಿ ವಾಮನ ನಮ್ಮ ಬಾಗಲಕೋಟೆ ಸಮೀಪದ ತೋಳಮಟ್ಟಿ ಊರಿನವನು ಎಂಬುದೂ ನಮಗೆ ಅಭಿಮಾನದ ಸಂಗತಿ.

**ಬಾಗಲಕೋಟ ಚಿದಂಬರ ಇನಾಂದಾರ**

**ಅಭಿಮಾನದ ಶ್ರೀರಕ್ಷೆ**

೧೯೯೫ರ ಡಿಸೆಂಬರ್ ತಿಂಗಳ ಕಸ್ತೂರಿಯೂ ವರ್ಷದ ಬಂಪರ್ ಸಂಚಿಕೆಯಾಗಿ ಹೊರಬಂದಿದೆ. ಅದರ ಪ್ರತಿಯೊಂದು ಪುಟವೂ ಮಾಹಿತಿ ತುಂಬಿದ ರಸಜೇನು. ಜಾಹಿರಾತು ರಹಿತ ಪತ್ರಿಕೆ 'ಕಸ್ತೂರಿ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ನಿಜವಾಗಿಯೂ ಚತುಷ್ಕೋಟಿ ಕನ್ನಡಿಗರ ಹೆಮ್ಮೆಯ ಪತ್ರಿಕೆ ಚಿರಾಯುವಾಗಲಿ. ಈ ಸಂಚಿಕೆಯ "ಪುಸ್ತಕ ವಿಭಾಗ" ಮತ್ತು "ಆರೋಗ್ಯದಂಗಳ" ಲೇಖನಗಳು ಓದುಗರ ನೆನಪಲ್ಲಿ ಚಿರಕಾಲ ಉಳಿಯುವಂತಹವು.

**ಹೊನ್ನಳ್ಳಿ ನ್ಯಾಮತಬಾಶಾ ಎಂ. ಹುಣಚಾಳ**

ಇಡೀ ಕರ್ನಾಟಕದಲ್ಲೇ ಹೆಮ್ಮೆಯಿಂದ ಹೇಳಬೇಕಾದಂತಹ ಪತ್ರಿಕೆಯೆಂದರೆ ಕನ್ನಡದ 'ಕಸ್ತೂರಿ' ಅದು ನೀಡುವ ಅನೇಕ ರೀತಿಯ ಲೇಖನ, ಕಿರುಲೇಖನ, ಕಥೆಗಳು, ನೆನಪುನೆರಳಿನಲ್ಲಿ, ಪುಸ್ತಕ ವಿಭಾಗದಂತಹ ಸ್ಥಿರಶೀರ್ಷಿಕೆಗಳು ಮನಸ್ಸಿನಲ್ಲಿ ಸದಾ ಹಸಿರಾಗಿ ಉಳಿಯಬಲ್ಲಂತಹವು.

**ಚಿಟಗುಪ್ಪಾ ಆನಂದಕುಮಾರ ರಾ. ಸಿಂಪಿ**

**ಅರ್ಥಪೂರ್ಣ**

ಡಿಸೆಂಬರ್ ೧೯೯೫ರ 'ಕಸ್ತೂರಿ'ಯಲ್ಲಿ ಪ್ರಕಟವಾದ 'ಮುನಿಯಾಲ್ ಗಣೇಶ ಶೆಣೈ' ಅವರ 'ಮಿತ್ರ ಸಂದರ್ಶನ' ಕಥೆ ನೀತಿ ಬೋಧಕವಾಗಿತ್ತು. ವಿದ್ಯಾರ್ಥಿಗಳ ಮೆಚ್ಚುಗೆಗೆ ಅರ್ಹವಾಗಿತ್ತು. ಮಕ್ಕಳ ಮನವನ್ನು ಗೆಲ್ಲುವದರಲ್ಲಿ ಈ ಕಥೆಯು ಯಶಸ್ವಿಯಾಗಿದೆ. ಇಂತಹ ನೀತಿಬೋಧಕ ಕಥೆಗಳು ಇನ್ನೂ ಹೆಚ್ಚು ಸಂಖ್ಯೆಯಲ್ಲಿ ಮೂಡಿ ಬರಲಿ.

**ಧಾರವಾಡ ವಿ. ಎಸ್. ಅಂಟೀನ್**

**ಇನ್ನಷ್ಟು ಬೇಕು**

ತಿಂಗಳಿಂದ ತಿಂಗಳಿಗೆ ತುಂಬಾ ಕುತೂಹಲಕಾರಿಯಾಗಿ ಓದಿಸಿಕೊಂಡು ಹೋಗುವ 'ಮದನಕಾಮನ ಕಥೆಗಳು' ತುಂಬಾ ರೋಚಕ. ಇಂತಹ ಕಥೆಗಳನ್ನು ಕಸ್ತೂರಿ ಹೆಚ್ಚು ಹೆಚ್ಚು ಹೊತ್ತು ತರಲಿ.

**ಅರಹತೊಳಲು ಅ. ಮ. ಶಿವಮೂರ್ತಿ**

**ಪ್ರೇತಾತ್ಮ ಪ್ರಕರಣ**

ಸುಮಾರು ಮೂವತ್ತೈದು ವರ್ಷಗಳಿಂದಲೂ 'ಕಸ್ತೂರಿ'ಯ ಓದುಗಳು. ನಾನು ಅತ್ಯಂತ ಅಭಿಮಾನಿ ಕೂಡ. ಡಿಸೆಂಬರ್ ಸಂಚಿಕೆಯಲ್ಲಿ ಪ್ರಕಟವಾದ "ಬೋರ್ಲಿ ರೆಕ್ಟರಿಯ ಪ್ರೇತಾತ್ಮ ಪ್ರಕರಣ"

(ಆರನೇ ಪುಟಕ್ಕೆ)

# ಅಂತರಂಗ

## ಬೆಳಕಿಂಡಿ

ಮನುಷ್ಯನ ಹಿರಿಮೆ, ದೊಡ್ಡಿಸ್ತನಗಳೂ ಮುಂದಿನ ಜೀವನದ ಒಳಿತು-ಕೆಡಕುಗಳೂ ತಂದೆ-ತಾಯಿಗಳನ್ನೇ ಹೆಚ್ಚಾಗಿ ಅವಲಂಬಿಸಿರುತ್ತವೆ.

-ಸಾನೆ ಗುರೂಜಿ

ಮಹತ್ತಾದುದನ್ನು ಕಂಡರೂ ಕೇಳಿದರೂ ನಮ್ಮ ಮಹತ್ತಿನ ನೆನಪಾಗಿ ಸಂತೋಷದಿಂದ ಕಣ್ಣೀರು ಬರುತ್ತದೆ. ಅಂಥಾ ಕಣ್ಣೀರನ್ನು ಸುರಿಸಿದಷ್ಟೂ ನಾವು ಧನ್ಯರಾಗುತ್ತೇವೆ.

-ಕುವೆಂಪು

ಯಾವ ಜೀವವೇ ಆಗಲಿ ತನ್ನ ಕಾಲಮೇಲ ತಾನು ನಿಲ್ಲದೆ, ಮತ್ತೊಬ್ಬರ ಆಶ್ರಯದ ನೆರಳಿನಿಂದ ಮುಕ್ತವಾಗದೆ, ಪೂರ್ಣ ಸ್ವಾತಂತ್ರ್ಯವನ್ನು ಪಡೆದುಕೊಳ್ಳದೇ ತನ್ನ ವಿಶ್ವವನ್ನು ತಾನು ಕಾಣಲು ಸಾಧ್ಯವಿಲ್ಲ....

-ಜ. ಹೊ. ನಾರಾಯಣಸ್ವಾಮಿ

ದುಃಖದ ಪ್ರಸಂಗದಲ್ಲಿ ತನಗಿಂತ ಹೆಚ್ಚು ದುಃಖಕ್ಕೊಳಗಾದವರನ್ನು ನೋಡಬೇಕು. ಸುಖದಲ್ಲಿದ್ದಾಗ ಇನ್ನೂ ಹೆಚ್ಚು ಸುಖಿಗಳಾದವರನ್ನು ನೋಡಬೇಕು.

-ಸುಭಾಷಿತ

ದೇವರ ಕೃಪೆ ಪಡೆಯಲು ಕಾಡಿಗೆ ಹೋಗಿ ತಪಸ್ಸು ಮಾಡಬೇಕಾಗಿಲ್ಲ; ಯಜ್ಞ-ಯಾಗಾದಿಗಳನ್ನು ಮಾಡಿ ಬೆಂಕಿಯ ಮುಂದೆ ಮೈ ಸುಟ್ಟುಕೊಳ್ಳಬೇಕಾಗಿಲ್ಲ. ದೇವರ ನಾಮಸ್ಮರಣೆಯೊಂದೇ ಸಾಕು.

-ಕಬೀರದಾಸ

(ಮೂರನೇ ಪುಟದಿಂದ)

ತುಂಬಾ ರಂಜಿಸಿತು. ಕಸ್ತೂರಿ ಹೆಸರು ಪಡೆದಿರುವುದು ಇಂತಹ ಲೇಖನಗಳಿಂದಲೇ. 'ಪುಸ್ತಕ ವಿಭಾಗ'ದಲ್ಲಿ ಕಸ್ತೂರಿ ಅತ್ಯಂತ ಸುಂದರ ಕಾದಂಬರಿಗಳನ್ನು ಸಂಗ್ರಹ ರೂಪದಲ್ಲಿ ನೀಡಿದೆ. ಮುಂದೆ ಕೂಡ ಇಂತಹವುಗಳನ್ನು ನೀಡಲಿ ಎಂದು ಬಯಸುವೆ.

ತುಮಕೂರು. 'ತರಂಗಿಣಿ'

**ಪ್ರೇರಕ ಶಕ್ತಿ**

ಡಿಸೆಂಬರ್ ೯೫ರ 'ಕಸ್ತೂರಿ'ಯಲ್ಲಿ ಪ್ರಕಟವಾದ ಕಥೆ 'ಪರಾಜಿತ' ಮನಸೆಳೆಯುವಂತಿದೆ. ಶಾಕೀರಾಳೊಂದಿಗಿನ ದಾಂಪತ್ಯಕ್ಕೆ ವಿಮುಖನಾದ ಖಾಸಿಂ ತಪ್ಪು ಮಾಡಿದವನೆನ್ನಿಸುವುದಿಲ್ಲ. ಆಕೆಯ ರೋಗ ಅವನ ಆಶೋತ್ತರಗಳಿಗೆ, ಸವಿಗನಸುಗಳಿಗೆ ಅಡ್ಡಿಯೆ. ಆದರೆ ದಾಂಪತ್ಯವೆಂದರೆ ಇಷ್ಟೆಯೇ? ಅದರೊಳಗೆ ಅನನ್ಯವಾದ ಭಾವನಾತ್ಮಕ 'ಅರಿವು ಹಾಸುಹೊಕ್ಕಾಗಿರಬೇಡವೇ! ನಫೀಸಾ ಇಂತಹ ಮಹತ್ವದ ಪ್ರಶ್ನೆಗೆ ಧ್ವನಿಯಾಗುತ್ತಾಳೆ. ಬಟ್ಟೆ ಬದಲಾಯಿಸುವಂತೆ ಹೆಣ್ಣನ್ನು ಬದಲಾಯಿಸಿ, ತವರು ಮನೆಯ ಎಲ್ಲರನ್ನೂ ತೊರೆದು ಗಂಡನ ಆಸರೆಯನ್ನು ಬಯಸಿ ಬರುವ ಹೆಣ್ಣಿನ 'ಬಾಳ ಬಟ್ಟೆ'ಯನ್ನೇ ಬದಲಾಯಿಸುವ ಗಂಡಸರ ಪ್ರತೀಕ ಖಾಸಿಂ. ನಫೀಸಾಳ ಯೋಚನೆ, ವಿಚಿತ್ರ ಪ್ರತಿಭಟನೆ ಖಾಸಿಂನಂತಹ ಗಂಡಸರ ವಿರುದ್ಧ ಕ್ರೋಧೀಕರಣಗೊಳ್ಳಬೇಕಾಗಿದೆ. ಧ್ವನಿ ಪಡೆಯುತ್ತಿರುವ ಮುಸ್ಲಿಂ ಹೆಣ್ಣುಮಕ್ಕಳಿಗೆ ನಫೀಸಾ ಪ್ರೇರಕ ಶಕ್ತಿ.

ಸಂಪಾಜೆ (ದ.ಕ.) ಜಬ್ಬಾರ್‌ಸಮೊ

## ಲೇಖಕರಿಗೆ ಸೂಚನೆ

- 'ಕಸ್ತೂರಿ'ಗಾಗಿ ಕಳಿಸುವಂಥ ಲೇಖನಗಳು ಕಾಗದದ ಒಂದೇ ಮಗ್ಗುಲಲ್ಲಿ ಸ್ಫುಟವಾಗಿ ಬರೆದಂಥವಾಗಿರಲಿ. ನಿಮ್ಮ ಹೆಸರು-ವಿಳಾಸಗಳು ಸ್ಪಷ್ಟವಾಗಿರಲಿ. ಅನುವಾದ, ರೂಪಾಂತರ, ಆಧಾರಿತ ಲೇಖನಗಳಾದರೆ ಮೂಲ ಲೇಖಕ-ಪ್ರಕಾಶಕರ ವಿಳಾಸ, ಅನುಮತಿ ಪತ್ರಗಳನ್ನು ಜತೆಗೆ ಲಗತ್ತಿಸಿ.
- ಅಸ್ವೀಕೃತ ಲೇಖನಗಳನ್ನು ಮರಳಿ ಪಡೆಯಲಿಚ್ಛಿಸುವವರು ಲೇಖನಗಳ ಸಂಗಡವೆ ಅಗತ್ಯ ಅಂಚೆಚೀಟಿ ಲಗತ್ತಿಸಿದ ಲಕೋಟೆಯನ್ನಿಡಿ.
- ಚುಟುಕು, ಪುಟಕೊನೆಯ ಕಿರುಲೇಖನ, ನೆನಪು ನೆರಳಿನಲ್ಲಿ ಮುಂತಾದವುಗಳ ಕುರಿತು ಪತ್ರವ್ಯವಹಾರ ಮಾಡಲಾಗುವುದಿಲ್ಲ.
- ಲೇಖನದ ಕಾರ್ಬನ್ ಅಥವಾ ಝೆರಾಕ್ಸ್ ಪ್ರತಿಯನ್ನು ಕಳಿಸಲೇಬೇಡಿ.
- ಸ್ವೀಕೃತ ಲೇಖನಗಳನ್ನು ಯಥಾವಕಾಶ ಪ್ರಕಟಿಸಿ ಸೂಕ್ತ ಗೌರವಧನವನ್ನು ನೀಡಲಾಗುವುದು.

## ಚಂದಾದಾರರಿಗೆ ಸೂಚನೆ

- 'ಕಸ್ತೂರಿ' ಪ್ರತಿ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳಿನ ೨ನೆಯ ದಿನಾಂಕದೊಳಗೆ ನಿಮಗೆ ತಲುಪದಿದ್ದಲ್ಲಿ ಚಂದಾದಾರರು ತಮ್ಮ ಟಪ್ಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಈ ಸಂಬಂಧದಲ್ಲಿ ಪತ್ರವ್ಯವಹಾರ ಮಾಡುವಾಗ, ವಿಳಾಸ ಬದಲಾವಣೆಯ ಸಂದರ್ಭದಲ್ಲಿ ದಯವಿಟ್ಟು ಚಂದಾ ನಂಬರು ಸ್ಫುಟವಾಗಿ ನಮೂದಿಸಿರಬೇಕಾದ್ದು ಅತ್ಯವಶ್ಯಕ.

**ಪತ್ರವ್ಯವಹಾರ ವಿಳಾಸ:**
ಪ್ರಸಾರಾಂಗ ವ್ಯವಸ್ಥಾಪಕ,
ಕಸ್ತೂರಿ, ಪೊ.ಬಾ. ನಂ. ೩೦,
ಹುಬ್ಬಳ್ಳಿ-೫೮೦ ೦೨೦.

### ಚಂದಾ ದರಗಳು

| | |
|---|---|
| ಬಿಡಿ ಸಂಚಿಕೆ | ರೂ. ೬-೦೦ |
| ೬ ತಿಂಗಳಿಗೆ ಅಂಚೆ ವೆಚ್ಚ ಸೇರಿ | ರೂ. ೩೫-೦೦ |
| ೧ ವರ್ಷಕ್ಕೆ, ಅಂಚೆ ವೆಚ್ಚ ಸೇರಿ | ರೂ. ೭೦-೦೦ |
| ೨ ವರ್ಷಕ್ಕೆ, ಅಂಚೆ ವೆಚ್ಚ ಸೇರಿ | ರೂ. ೧೩೦-೦೦ |

ಕಸ್ತೂರಿ

ವರ್ಷ: ४೦ ಫೆಬ್ರುವರಿ ೧೯೯೬ ಸಂಚಿಕೆ: ೬

# ಎರಡು ಬಿಂದಿಗೆಗಳು

**ಒಂ**ದು ಬಿಂದಿಗೆ ಮಣ್ಣಿನಿಂದ ಮಾಡಲ್ಪಟ್ಟಿತ್ತು; ಇನ್ನೊಂದು ಹಿತ್ತಾಳೆಯಿಂದ.

ಇವೆರಡನ್ನೂ ಯಾರೋ ನದೀ ತೀರದಲ್ಲಿ ಇಟ್ಟಿದ್ದರು.

ಒಮ್ಮೆಲೇ ನದಿಯಲ್ಲಿ ಉಕ್ಕೇರಿ ಎರಡೂ ಬಿಂದಿಗೆಗಳು ತೇಲಿಕೊಂಡು ಹೊರಟವು.

ಮಣ್ಣಿನ ಮಡಕೆ ಹಿತ್ತಾಳೆಯ ಬಿಂದಿಗೆಯಿಂದ ದೂರವಿರಲು ಯೋಜಿಸಿತು.

ಆದರೆ ಹಿತ್ತಾಳೆಯ ಬಿಂದಿಗೆಗೆ ಮಡಕೆಯ ಬಳಿಯಲ್ಲಿಯೇ ಇರುವ ಇಚ್ಛೆ. ಆದ್ದರಿಂದ ಅದು, "ನೀನೇನೂ ಯೋಚಿಸಬೇಡ ಮಿತ್ರಾ, ನಾವೇನೂ ನಿನಗೆ ಡಿಕ್ಕಿ ಹೊಡೆಯುವುದಿಲ್ಲ," ಎಂದಿತು.

ಆಗ ಮಣ್ಣಿನ ಮಡಕೆ, "ನಿನಗೇನೋ ನನಗೆ ಡಿಕ್ಕಿ ಹೊಡೆದು ಗಾಸಿಗೊಳಿಸುವ ಇಚ್ಛೆ ಇಲ್ಲದಿರಬಹುದು. ಆದರೆ ಈ ಪ್ರವಾಹವೊಂದು ಹಾಗೆ ಮಾಡಲು ಬಿಡಬೇಕಲ್ಲ? ಆದ್ದರಿಂದ ನಾವಿಬ್ಬರೂ ದೂರ ಇರುವುದೇ ಒಳ್ಳೆಯದು," ಎಂದು ಪ್ರತಿಯಾಗಿ ಹೇಳಿತು.

ಹೌದು, ಆತ ನಿಮ್ಮ ಮಿತ್ರನೇ ಆಗಿರಬಹುದು, ಆದರೆ ಅವನಿಂದ ಅನಿಚ್ಛಾಪೂರ್ವಕವಾಗಿಯಾದರೂ ನಷ್ಟವಾಗುತ್ತಿದ್ದರೆ ಅವನಿಂದ ದೂರ ಉಳಿಯುವುದೇ ಒಳ್ಳೆಯದು.

(ದಿ. ಸೂರ್ಯಕಾಂತ ತ್ರಿಪಾಠಿ 'ನಿರಾಲಾ' ಅವರ ಕಥೆಯೊಂದರ ಭಾವಾನುವಾದ.)

• ಟೇಕಲ್ ಗೋಪಾಲಕೃಷ್ಣ



ಚಿತ್ರಗಳು: ಬೆಂಗಳೂರು ನ್ಯೂಸ್ ಫೋಟೋಸ್

# ಹಿರಿಯ ರಾಜಕಾರಣಿಯ ಬಿಚ್ಚು ನುಡಿಗಳು

ಎಸ್ಸೆನ್....

ಹದಗೆಟ್ಟಿರುವ ಭಾರತದಲ್ಲಿ "ಇದೆಲ್ಲವನ್ನೂ ಸರಿಪಡಿಸಬಹುದು" ಎಂಬ ಹಿರಿಯಾಸೆ ಹೊತ್ತು ಬದುಕುತ್ತಿರುವ ಹಳೆಯ ತಲೆಮಾರಿನ ಮೌಲ್ಯಗಳ ಪ್ರತಿನಿಧಿ. ಗಾಂಧಿ ತತ್ವದಲ್ಲಿ ಅಚಲ ನಂಬಿಕೆ ಹಾಗೂ ನಿಷ್ಠೆಯುಳ್ಳ ನಿಷ್ಠುರವಾದಿ. ದೇಶದ ರಾಜಕಾರಣ ಸಾಗಿ ಬಂದ ದಾರಿ ಹಾಗೂ ಸಾಗುತ್ತಿರುವ ದಾರಿಗಳೆರಡನ್ನೂ ಕಂಡಿರುವ ಎಸ್.ನಿಜಲಿಂಗಪ್ಪ. ಅದು ಸಾಗಬೇಕಾದ ದಾರಿಯನ್ನು ಕುರಿತೂ ಹೇಳಬಲ್ಲಂಥ ತಾಕತ್ತುಳ್ಳವರು. ಸಂದರ್ಭ ಸಿಕ್ಕಾಗಲೆಲ್ಲ ಅವರು ಚಾಟಿಯೇಟು ಕೊಡುತ್ತಲೇ ಬಂದಿದ್ದಾರೆ. ಕಣ್ಣು-ಕಿವಿ-ಬುದ್ಧಿಗಳ ಚುರುಕನ್ನು ಕಾಪಾಡಿಕೊಂಡೇ ಬಂದಿರುವ ಈ ಹಿರಿಯನಿಗೆ ಕನ್ನಡನಾಡು-ನುಡಿ-ಸಂಸ್ಕೃತಿಗಳ ವಿಷಯದಲ್ಲಿ ಅಪಾರ ಆಸಕ್ತಿ. ಕರ್ನಾಟಕದ ಭವ್ಯ ಪರಂಪರೆಯ ಹಿನ್ನೆಲೆಯಲ್ಲಿ ಯೋಚಿಸುವ ಅವರು "ಒಣ ಅಭಿಮಾನ ಸಲ್ಲ. ಎಲ್ಲದರ ಸತ್ವ ಹಿರಿಯೇ ನಾವು ಬೆಳೆಯಬೇಕಾದ ಅಗತ್ಯವಿದೆ" ಎಂದು ಪ್ರತಿಪಾದಿಸುತ್ತಾರೆ. "ಭೌಗೋಳಿಕವಾಗಿ ಕರ್ನಾಟಕದ ಏಕೀಕರಣವಾಗಬೇಕಾದ್ದು ಆಗ ಎಷ್ಟು ಅವಶ್ಯವಿತ್ತೋ, ಈಗ ಭಾವನಾತ್ಮಕವಾಗಿ ಕನ್ನಡಿಗರಲ್ಲಿ ಏಕತೆಯುಂಟಾಗಬೇಕಾದ್ದು ಅದಕ್ಕಿಂತ ಹೆಚ್ಚು ಅವಶ" ಎನ್ನುತ್ತಾರವರು. ಇಂದಿಗೂ ಮುಂಬಯಿ ಕರ್ನಾಟಕ, ಹೈದರಾಬಾದ್ ಕರ್ನಾಟಕ, ಹಳೆ ಮೈಸೂರು ಎಂಬವುಗಳು ಕನ್ನಡಿಗರ ಮಾನಸದಲ್ಲಿ ಮನೆ ಮಾಡಿರುವುದನ್ನು ಅವರು ಖಂಡಿಸುತ್ತಾರೆ. ಹಾಗೆಯೇ ಕರ್ನಾಟಕಕ್ಕೆ ಸೇರಬೇಕಾದ ಕಾಸರಗೋಡು ಮುಂತಾದವು ಇನ್ನೂ ನೆರೆರಾಜ್ಯಗಳಲ್ಲೇ ಉಳಿದಿರುವ ಬಗ್ಗೆ ಅವರಿಗೆ ಖೇದವಿದೆ. ಅವರ ಮುಖ್ಯ ಕಾಳಜಿ ಇರುವುದು ಕನ್ನಡದ ಮಣ್ಣಿನ ಮಕ್ಕಳ ಬಗ್ಗೆ. ಅವರಿಗೆ ರೋಷವಿರುವುದು ಇಂದಿನ ರಾಜಕಾರಣಿಗಳ ನಡವಳಿಕೆಗಳ ಬಗ್ಗೆ.

ನಿಜಲಿಂಗಪ್ಪ ಅವರು ಮೊನ್ನೆ ಡಿಸೆಂಬರ್ ೧೦ ರಂದು ತೊಂಭತ್ತನಾಲ್ಕನೆಯ ವರ್ಷದಲ್ಲಿ ಅಡಿಯಿಟ್ಟರು. ಆ ಸಂದರ್ಭದಲ್ಲಿ ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾದ ಅವರ ಸಂದರ್ಶನಗಳಿಂದ ಎತ್ತಿಕೊಂಡ ಬಿಚ್ಚು ಮಾತುಗಳನ್ನಿಲ್ಲಿ ಆಯ್ದು ಕೊಡುತ್ತಿದ್ದೇವೆ.

• ಸಂಪಾದಕ



"ಈ ದೇಶದ ಹೊಲಸು ನನ್ನನ್ನು ಇತ್ತೀಚಿನ ವರ್ಷಗಳಲ್ಲಿ ತುಂಬಾ ಕಾಡುತ್ತಿದೆ. ನಾನು ತೀರಾ ಅಸಂತುಷ್ಟನಾಗಿದ್ದೇನೆ. ಸ್ವಾತಂತ್ರ್ಯ ಬಂದದ್ದು ಜನತೆಯ ಕಷ್ಟ-ಕಾರ್ಪಣ್ಯಗಳನ್ನು, ಬವಣೆಗಳನ್ನು ನೀಗಿಸಲು. ಆದರೆ, ಆಗುತ್ತಿರುವುದು ತದ್ವಿರುದ್ಧ..."

"ನೆಹರೂರವರಿಂದಲೇ ಈ ಹೊಲಸಿನ ಸ್ಥಿತಿ ಆರಂಭವಾಯಿತು. ಗಾಂಧೀಜಿ ಹಾಕಿದ ಎರಡು ಮುಖ್ಯ ಮಾರ್ಗಗಳನ್ನು ನೆಹರೂ ಅನುಸರಿಸಲಿಲ್ಲ. ಸ್ವಾತಂತ್ರ್ಯಾನಂತರ ಕಾಂಗ್ರೆಸ್ ಪಕ್ಷ ಅಧಿಕಾರಕ್ಕೆ ಬರುವುದು ಬೇಡವೆಂದು ಗಾಂಧೀಜಿ ಹೇಳಿದ್ದರು. ನೆಹರೂ ಅದನ್ನು ನಿರ್ಲಕ್ಷಿಸಿದರು. ಗ್ರಾಮ ಸ್ವರಾಜ್ಯದೊಂದಿಗೆ ಭಾರತದ ಏಳಿಗೆಯಾಗಬೇಕೆಂದು ಗಾಂಧೀಜಿ ನಿರ್ದೇಶನ ಕೊಟ್ಟರು. ನೆಹರೂ ಅದನ್ನೂ ಉಪೇಕ್ಷಿಸಿದರು. ಗಾಂಧೀಜಿಯ ಎದುರಿನಲ್ಲಿಯೇ ನೆಹರೂ ರಷ್ಯದ ಸಮಾಜವಾದಿ ಸಿದ್ಧಾಂತವನ್ನು ಪೂಜೆ ಮಾಡಿದರು. ಆ ಹೊಲಸನ್ನು ತಬ್ಬಿಕೊಂಡರು. ಭಾರತದ ತುಂಬಾ ಅದನ್ನೆಲ್ಲಾ ಹರಡಿ ಬಿಟ್ಟರು. ಇಂದಿನ ದುಃಸ್ಥಿತಿಗೆ ಅದೇ ಮೂಲ ಕಾರಣ...."

"ಸರ್ದಾರ್ ಪಟೇಲರು ಪ್ರಧಾನಮಂತ್ರಿ ಆಗಿದ್ದರೆ, ನಮ್ಮ ದೇಶ ಹೀಗಾಗುತ್ತಿರಲಿಲ್ಲ. ಬಹುಶಃ ನನಗನಿಸುತ್ತದೆ, ವಲ್ಲಭಭಾಯಿ ಪಟೇಲ್ ಗುಜರಾತಿ, ತಾವೂ ಗುಜರಾತಿ; ಸ್ವಜನ ಪಕ್ಷಪಾತಿ ಎಂಬ ಅಪಖ್ಯಾತಿ ತಮಗೆ ಬಂದೀತು ಎಂಬ ಭಾವನೆ ಗಾಂಧೀಜಿಯಲ್ಲಿ ಇದ್ದೀತು. ಎಂತಲೇ ಅವರನ್ನು ಮುಂದೂಡಿರಲಿಕ್ಕಿಲ್ಲ."

"ನನ್ನ ಕಾಲದ ರಾಜಕಾರಣವೆಂದರೆ ಸ್ವರ್ಗ. ಈಗಿನ ರಾಜಕಾರಣಿಗಳಲ್ಲಿ ಯಾರು ಜವಾಬ್ದಾರಿ ಸ್ಥಾನದಲ್ಲಿದ್ದಾರೋ ಅವರಲ್ಲಿ ನೀತಿ ಉಳಿದಿದೆ ಅಂತ ಹೇಳಲಾರೆ. ನೈತಿಕವಾಗಿ ಬಹಳ ಇಳಿದು ಬಿಟ್ಟಿದ್ದಾರೆ. ಎಲ್ಲಿ ನೋಡಿದರೂ ಭ್ರಷ್ಟಾಚಾರ. ನಮ್ಮ ಕಾಲದಲ್ಲಿ ವಿಧಾನ ಸಭಾ ಸದಸ್ಯರು, ಮಂತ್ರಿಗಳು ತಮ್ಮ ಸ್ವಂತ ವಿಚಾರಗಳಲ್ಲಿ ಏನೂ ಅಪೇಕ್ಷೆ ಪಡುತ್ತಿರಲಿಲ್ಲ. ನಮ್ಮ ರಾಜ್ಯಕ್ಕೆ ಏನು ಬೇಕು, ಜನರಿಗೆ ಯಾವುದರಿಂದ ಪ್ರಯೋಜನವಾದೀತು ಎನ್ನುವ ವಿಚಾರದಲ್ಲಿ ಮಾತ್ರ ಆಲೋಚಿಸುತ್ತಿದ್ದರು. ಈಗಿನವರಲ್ಲಿ ಆ ಸ್ಟ್ಯಾಂಡರ್ಡ್ ಹೋಗಿದೆ. ಮೇಲಿನಿಂದ ಕೆಳಗಿನವರೆಗೆ ಜನರಲ್ಲಿ 'ನಾನು ಹೇಗೆ ಅನುಕೂಲ ಮಾಡಿಕೊಳ್ಳಬೇಕು' ಎಂದು ಯೋಚಿಸುವವರೇ ಎಲ್ಲಾ.'

"ದುಡ್ಡು ಮತ್ತು ಜಾತಿ ಪ್ರಭಾವ..... ನಾನು ಅಧಿಕಾರದಲ್ಲಿರುವಾಗಲೂ ಜಾತಿ ಪ್ರಭಾವ ಇತ್ತು. ಇವನ ಜಾತಿ ಜನ ಎಷ್ಟಿದ್ದಾರೆ? ಜಾತಿ ಜನಗಳ ಬೆಂಬಲ ಇದ್ದವ ಆರಿಸಿಬರುತ್ತಿದ್ದ. ಈಗ ಗೆದ್ದು ಬರುವುದೇ ಮುಖ್ಯ ಆಗಿದೆ. ಅದಕ್ಕೆ ಅವನು ದುಡ್ಡು ಖರ್ಚು ಮಾಡಬೇಕು. ಪಾರ್ಟಿಯೂ ಕೊಡುತ್ತದೆ. ಪಾರ್ಟಿಗೆ ದುಡ್ಡೆಲ್ಲಿಂದ ಬರುತ್ತದೆ? ಶ್ರೀಮಂತರು ಕೊಡುತ್ತಾರೆ. ಶ್ರೀಮಂತರು ಯಾಕೆ ಕೊಡುತ್ತಾರೆ? ಅವರಿಗೆ ಅನುಕೂಲ ಮಾಡಿಕೊಡದಿದ್ದರೆ ಪಾರ್ಟಿಗೆ ಹಣ ಕೊಡುತ್ತಾರೆಯೆ? ವರಮಾನ ತೆರಿಗೆ ತಪ್ಪಿಸುತ್ತಾರೆ. ಲೈಸೆನ್ಸ್ ಸಿಗುತ್ತದೆ..... ಲಂಚ ಶುರು ಮಾಡಿದ್ದೇ ಇಂದಿರಾ ಗಾಂಧಿ. ಕ್ರಿಮಿನಲ್‌ಗಳು ಶಾಸನ ಸಭೆ ಪ್ರವೇಶಿಸಿದ್ದೇ ಅವರ ಕಾಲದಲ್ಲಿ."

"ಈ ಹೆಂಗಸನ್ನು ಅಧಿಕಾರದಲ್ಲಿ ಕುಳ್ಳಿರಿಸಿದವರೇ ನಾವು ಐದಾರು ಮಂದಿ. ನೆಹರೂರಿಗೆ ವಯಸ್ಸಾಗಿತ್ತು. ಸಾಯುವುದಕ್ಕಿಂತ ೨-೩ ವರ್ಷಕ್ಕಿಂತಲೂ ಮೊದಲು ಅವರಿಗೆ ನಿಂತುಕೊಳ್ಳಲಿಕ್ಕೂ ಆಗುತ್ತಿರಲಿಲ್ಲ. ಆದರೆ ಸಾಯುವವರೆಗೂ ಪ್ರಧಾನಿಯಾಗಿಯೇ ಇರಬೇಕೆಂದಿದ್ದರು. ನಾವು ಐದಾರು ಜನ (ನಾನು, ಕಾಮರಾಜ್, ಸಂಜೀವರೆಡ್ಡಿ, ಅತುಲ್ಯಘೋಷ್, ಶ್ರೀನಿವಾಸ ಮಲ್ಯ) ನೆಹರೂ ಅನಂತರ ಯಾರು ಎಂದು ಚರ್ಚಿಸಿದೆವು. ಮೊರಾರ್ಜಿ ಹಠವಾದಿ. ಶಾಸ್ತ್ರೀಯವರೇ ಯೋಗ್ಯ ಅನಿಸಿತು. ನೆಹರೂ ಮಡಿದರು. ಶಾಸ್ತ್ರಿ ಆ ಜಾಗಕ್ಕೆ ಬಂದರೂ ಬಹಳ ದಿನ ಬದುಕಲಿಲ್ಲ. ಮತ್ತೆ ಮೊರಾರ್ಜಿಯ

('ಕರ್ಮವೀರ,' 'ತರಂಗ' ಹಾಗೂ 'ಸಂಯುಕ್ತ ಕರ್ನಾಟಕ' ಪತ್ರಿಕೆಗಳಿಂದ ಸಾಭಾರ)

ವರ ಹೆಸರು ಬಂತು. ಇಂದಿರಾರ ಹೆಸರೂ ಇತ್ತು. ಆಕೆಯನ್ನೇ ಪ್ರಧಾನಿಯನ್ನಾಗಿ ಮಾಡಿದೆವು."

"ನಾನು ಕಾಂಗ್ರೆಸ್ ಅಧ್ಯಕ್ಷನಾದೆ. ಆಮೇಲೆ ನನ್ನ ಮೇಲಿನ ಇಂದಿರಾರ ಗೌರವ, ಕಡಿಮೆಯಾಗುತ್ತಾ ಬಂತು. ಸಾರ್ವಜನಿಕ ಕ್ಷೇತ್ರದಲ್ಲಿ ಕೈಗಾರಿಕೆಗಳು ಆರಂಭವಾಯಿತಲ್ಲ. ಅದಕ್ಕೆ ನನ್ನ ವಿರೋಧವಿತ್ತು. 'ಸಾರ್ವಜನಿಕ ಕ್ಷೇತ್ರದಲ್ಲಿ ಕೈಗಾರಿಕೆಗಳು ಆರಂಭಗೊಂಡರೂ ಖಾಸಗಿ ಕ್ಷೇತ್ರದೊಂದಿಗೆ ಪ್ರತಿಸ್ಪರ್ಧೆ ಇರಲಿ. ಇಲ್ಲದಿದ್ದರೆ ಉತ್ಪಾದನೆಯಲ್ಲಿ ಹೆಚ್ಚಳ, ಗುಣಮಟ್ಟದಲ್ಲಿ ವೃದ್ಧಿ ಆಗುವುದಿಲ್ಲ' ಎಂದೆ. (ನಾನು ಹೇಳಿದ್ದನ್ನು ೩೦ ವರ್ಷಗಳ ನಂತರ ಈಗ ಒಪ್ಪಿಕೊಳ್ಳಲಾಗಿದೆ) 'ಕಾಂಗ್ರೆಸ್ ಅಧ್ಯಕ್ಷರು ದಾರಿ ತಪ್ಪಿಸುತ್ತಿದ್ದಾರೆ'ಎಂದು ಇಂದಿರಾ ಗಾಂಧಿ ಹೇಳಿಕೆ ಕೊಟ್ಟರು. ನಾನು ಬೆಂಗಳೂರಿನಲ್ಲಿ ಒಂದು ಕಾರು ಫ್ಯಾಕ್ಟರಿ ಪ್ರಾರಂಭಿಸಲು ಯೋಜಿಸಿದ್ದೆ. ಜಪಾನ್ ಒಪ್ಪಿತ್ತು. ಇಂದಿರಾ ಗಾಂಧಿ ಫ್ಯಾಕ್ಟರಿ ಮಾಡಲು ಬಿಡಲಿಲ್ಲ. ಮಗನಿಗೆ (ಸಂಜಯ ಗಾಂಧಿಗೆ) ಸಹಾಯ ಮಾಡುವುದಿತ್ತಲ್ಲ...."

"ಜನರ ಒಳಿತಿಗಾಗಿ ಕೆಲಸ ಮಾಡುವ ಆಕಾಂಕ್ಷೆ ಯಾವ ಪಕ್ಷದಲ್ಲಿಯೂ ಈಗ ಕಂಡುಬರುವುದಿಲ್ಲ. ಅಧಿಕಾರ ಬೇಕು; ಹಣ ಬೇಕು, ಶ್ರೀಮಂತಿಕೆ ಬೇಕು. ಅದಕ್ಕಾಗಿ ಏನು ಮಾಡಬೇಕು ಎಂಬುವವರೇ ಹೆಚ್ಚಾಗುತ್ತಿದ್ದಾರೆ. ನೈತಿಕ ಮೌಲ್ಯಗಳು ಕುಸಿದು ಹೋಗುತ್ತಿವೆ. ನನಗೆ ತೀರಾ ಅತೃಪ್ತಿಯಾಗುತ್ತಿರುವುದು ಇಲ್ಲೇ...."

"ನಾನು ಯಾವ ಪಕ್ಷಕ್ಕೂ ಸೇರಿದವನಲ್ಲ. ಯಾವುದೇ ಪಕ್ಷವನ್ನು ನಾನು ಇಷ್ಟಪಡುತ್ತಿಲ್ಲ. ಯಾವುದೇ ಪಕ್ಷ ನಾನು ಬೆಂಬಲಿಸಲು ಅರ್ಹವೆನಿಸುವಷ್ಟು ಪ್ರಾಮಾಣಿಕವಾಗಿಲ್ಲ."

"ಲಂಚಕೋರರೆಲ್ಲ ಹೇಸಿಗೆ ತಿನ್ನುವವರು. ಅವರನ್ನು ಬೀದಿಯಲ್ಲಿ ನಿಲ್ಲಿಸಿ ಜೋಡಿನಿಂದ ಹೊಡೆಯಬೇಕು."

"ಮಂತ್ರಿಗಳು ಸರಳ ಜೀವನವನ್ನೇ ಮರೆತಿದ್ದಾರೆ. ಇವರು ಅನುಭವಿಸುತ್ತಿರುವ ಐಷಾರಾಮಿ ಬದುಕು ಬೇರ್ಯಾವ ದೇಶದಲ್ಲೂ ಕಾಣಸಿಗದು. ಬಡತನವೇ ಗೊತ್ತಿಲ್ಲದ ಅಥವಾ ಬಡತನವನ್ನು ಮರೆತಿರುವ ನಾಯಕರು ಜನಹಿತವನ್ನು ಎಷ್ಟರ ಮಟ್ಟಿಗೆ ಕಾಯಲು ಸಾಧ್ಯ?"

"ಜನತೆ ತಮ್ಮ ಸೇವೆಗಾಗಿ ನಿಮಗೆ ಅಧಿಕಾರ ಕೊಟ್ಟಿದ್ದಾರೆ. ಅವರು ವಹಿಸಿರುವ ಕರ್ತವ್ಯವನ್ನು ನೀವು ನಿರ್ವಂಚನೆಯಿಂದ ಕೈಗೊಳ್ಳಿ. ಜಾತಿ, ಮತದಂಥ ಸಂಕುಚಿತ ಭಾವನೆಗಳನ್ನು ಬಿಡಿ. ಸ್ವಂತ ಹಿತಕ್ಕಾಗಿ ಯೋಚಿಸಬೇಡಿ. ಶ್ರೀಮಂತಿಕೆಗಾಗಿ ದುರಾಸೆ ಪಡಬೇಡಿ. ಅಧಿಕಾರದ ಬೆನ್ನು ಬೀಳಬೇಡಿ. ಜನತೆಯ ಸೇವೆಯನ್ನೇ ಗುರಿಯಾಗಿಟ್ಟುಕೊಳ್ಳಿ. ದೇಶದ, ರಾಜ್ಯದ ಅಭಿವೃದ್ಧಿಗಾಗಿ ದುಡಿಯಿರಿ. ಸಮೃದ್ಧವಾದ ಕರ್ನಾಟಕವನ್ನು ಕಟ್ಟಲು ತನ್ಮೂಲಕ ಸಮೃದ್ಧವಾದ ಭಾರತವನ್ನು ರೂಪಿಸಲು ಕಾರಣಕರ್ತರಾಗಿ."

"ವಿಶಾಲವಾದ ಭೂಸಂಪತ್ತು, ಜನ ಸಮೃದ್ಧಿಯನ್ನು ಹೊಂದಿರುವ ಭಾರತಕ್ಕೆ ಕೃಷಿ ಹಾಗೂ ಕೃಷಿ ಪೂರಕ ಉದ್ಯಮಗಳಿಂದಲೇ ಸಮೃದ್ಧ ಅಭಿವೃದ್ಧಿ ಸಾಧ್ಯವೆಂಬ ರಾಷ್ಟ್ರಪಿತ ಗಾಂಧಿಯ ಅರ್ಥಚಿಂತನೆಯನ್ನು ಮೈಗೂಡಿಸಿಕೊಂಡವ ನಾನು."

"ಚೀನಾವನ್ನೇ ನೋಡಿ. ನಮಗಿಂತ ಹೆಚ್ಚು ಜನಸಂಖ್ಯೆ ಉಳ್ಳ ದೇಶ. ಆದರೆ, ಅಲ್ಲಿರುವುದು ನಮ್ಮ ದೇಶಕ್ಕಿಂತಲೂ ಕಡಿಮೆ ಕೃಷಿ ಪ್ರದೇಶ. ಈಗ ಆ ದೇಶ ಎಷ್ಟೊಂದು ಮುಂದುವರೆದಿದೆ! ನಾವು ಬೆಳೆಯುವ ಒಂದು ಚೀಲಕ್ಕೆ ಆರು ಚೀಲದಷ್ಟು ಹೆಚ್ಚು ಕೃಷಿ ಉತ್ಪನ್ನಗಳನ್ನು ಅವರು ಪಡೆಯುತ್ತಿದ್ದಾರೆ. ಅಲ್ಲಿರುವ ಎಲ್ಲ ಜನರಿಗೂ ಕೆಲಸವಿದೆ. ನಮ್ಮಲ್ಲಿ ಅದು ಏಕೆ ಸಾಧ್ಯವಾಗಲಿಲ್ಲ?"

"ನಮ್ಮ ದೇಶದಲ್ಲಿ ಹತ್ತರಿಂದ ಹದಿನೈದು ಕೋಟಿ ಎಕರೆಯಷ್ಟು ಭೂಮಿಯನ್ನು ನೀರಾವರಿ ಬಳಕೆಗೆ ತರುವ ಅವಕಾಶವಿದೆ. ಆದರೆ ಅದನ್ನು ಸಂಪೂರ್ಣ ನಿರ್ಲಕ್ಷಿಸಲಾಗಿದೆ. ಆದರೂ 'ನಮ್ಮಲ್ಲಿ ಹಸಿರು ಕ್ರಾಂತಿ ಆಗಿದೆ' ಎಂದು ರಾಜಕಾರಣಿಗಳು ಕೂಗಿ ಕೂಗಿ ಹೇಳುತ್ತಿದ್ದಾರೆ. ಹಸಿರು ಕ್ರಾಂತಿ

ಆಗಿದೆ- ಪಂಜಾಬಿನಲ್ಲಿ ಮಾತ್ರ. ಅದು ಪಂಜಾಬಿನ ಮುಖ್ಯಮಂತ್ರಿಯಾಗಿದ್ದ ಖೈರಾನ್‌ರ ವೈಯಕ್ತಿಕ ಆಸಕ್ತಿಯಿಂದಾಗಿ, ಬೇರೆ ರಾಜ್ಯಗಳಲ್ಲೂ ಹಾಗೆ ಮಾಡಿದ್ದಿದ್ದರೆ ಭಾರತದ ಇಂದಿನ ಸ್ಥಿತಿ ಬೇರೆಯಾಗುತ್ತಿತ್ತು...."

"ಬಡರೈತರ ಬಡತನ ನೀಗಬೇಕು. ಬಡತನ ನೀಗಬೇಕಾದರೆ ಗದ್ದೆಯಲ್ಲಿ ಒಳ್ಳೆಯ ಬೆಳೆ ಬರಬೇಕು: ಅದಕ್ಕೆ ಅವರ ಕೃಷಿಗೆ ನೀರು ಅವಶ್ಯ ಬೇಕು. ಆದುದರಿಂದ ನೀರಾವರಿಗೆ ಪ್ರಾಮುಖ್ಯ ಕೊಡಬೇಕು. ಸಾಕಷ್ಟು ಗೋಮಾಳದ ಅಗತ್ಯವಿದೆ. ಜತೆಗೆ ಅರಣ್ಯ ಬೆಳೆಸುವ ಕಾರ್ಯವೂ ಆಗಬೇಕು."

"ನಾನು ಇನ್ನೂ ಕೆಲವು ಸಮಯ ಅಧಿಕಾರದಲ್ಲಿ ಇದ್ದಿದ್ದರೆ ೨೦ ಲಕ್ಷ ಎಕರೆಗೆ ನೀರು ಒದಗಿಸುತ್ತಿದ್ದೆ. ಶರಾವತಿ ಯೋಜನೆಗೆ ಅಸ್ತಿಭಾರ





ಹಾಕಿದೆ. ಆರು ವರ್ಷಗಳಲ್ಲಿ ಅದು ಮುಗಿಯಿತು. ಅದಿಲ್ಲದೇ ಇರುತ್ತಿದ್ದರೆ ಈಗ ನಮ್ಮ ಗತಿ ಏನಾಗುತ್ತಿತ್ತು? ವಿದ್ಯುತ್ತಿಗೆ, ನೀರಾವರಿಗೆ ಆದ್ಯತೆ ಕೊಟ್ಟೆ. ಮಲಪ್ರಭಾ, ಅಪ್ಪರ್ ಕೃಷ್ಣಾ, ಹಾರಂಗಿ, ಹೇಮಾವತಿ, ಕಬಿನಿ ಯೋಜನೆಗಳು ನನ್ನ ಕಾಲದವು. ಮತ್ತಷ್ಟು ಯೋಜನೆಗಳನ್ನು ಮಾಡಬಹುದಿತ್ತು. ಇನ್ನಷ್ಟು ಭೂಮಿಗೆ ನೀರುಣಿಸಬಹುದಿತ್ತು. ಅಪ್ಪರ್ ಕೃಷ್ಣಾ ೩೦ ವರ್ಷಗಳಾದರೂ ಇನ್ನೂ ಮುಗಿದಿಲ್ಲ. ನಾನಿದ್ದಿದ್ದರೆ ಮುಗಿದು ೧೫ ವರ್ಷಗಳಾಗಿರುತ್ತಿತ್ತು."

"ನನ್ನ ನಂತರ ಬಂದವರು ಕೃಷಿಗೆ ಮಹತ್ವ ಕೊಡಲಿಲ್ಲ. ನೀರಾವರಿಯನ್ನು ನಿರ್ಲಕ್ಷಿಸಿದರು. ಅರಣ್ಯಗಳ ಬಗ್ಗೆ ಮುತುವರ್ಜಿ ವಹಿಸಲಿಲ್ಲ."

"ಹೊರಗಿನಿಂದ ಕಾಣುವ ಭಾರತದ ಗರ್ಭದೊಳಗೆ ಎರಡು ವಿಭಿನ್ನ ಭಾರತಗಳಿವೆ. ಒಂದು ಗ್ರಾಮೀಣ ಭಾರತ; ಇನ್ನೊಂದು ನಗರ ಭಾರತ. ಜನಸಂಖ್ಯೆಯ ಶೇಕಡಾ ೮೦ರಷ್ಟನ್ನು ಪ್ರತಿನಿಧಿಸುವ ಗ್ರಾಮೀಣ ಭಾರತ ಅಲಕ್ಷ್ಯಕ್ಕೊಳಗಾಗಿದೆ. ದೇಶದ ನೀತಿ ನಿಯಮಗಳೆಲ್ಲವೂ ಶೇಕಡಾ

೨೦ ಜನರ ಹಿತಾಸಕ್ತಿಯನ್ನು ರಕ್ಷಿಸುತ್ತಿವೆ."

"ಉದಾರ ಆರ್ಥಿಕ ನೀತಿ, ಉದಾರ ಕೈಗಾರಿಕಾ ನೀತಿ ಭಾರತದಲ್ಲಿ ಪ್ರಯೋಜನಕ್ಕೆ ಬಾರದು. ಉದಾರ ಆರ್ಥಿಕ ನೀತಿ ಅಂದರೆ ಹೊರಗಿನಿಂದ ಕೋಟಿಗಟ್ಟಲೆ ಹಣವನ್ನು ತರುವುದು, ಯಂತ್ರೋಪಕರಣಗಳನ್ನು ತರುವುದು, ಅಲ್ಲಿಯ ಕಾರ್ಮಿಕರನ್ನೇ ಕರೆತರುವುದು ಎಂದರ್ಥವೇ? ಅವರು ನಿರ್ಮಿಸಿದ ವಸ್ತುಗಳಿಗೆ ಇಲ್ಲಿಯೇ ಮಾರುಕಟ್ಟೆಯನ್ನು ಹುಡುಕುವುದು ಎಂದರ್ಥವೇ? ನಮ್ಮ ಕೈಗಳನ್ನು ನಾವೇ ಕಟ್ಟಿ ಹಾಕಿಕೊಳ್ಳುವ ನೀತಿ ಇದು!"

"ಅರಣ್ಯ ನಾಶವಾಗದಂತೆ ಯೋಜನೆಗಳನ್ನು ರೂಪಿಸುವುದು ಅತ್ಯಗತ್ಯ. ವಿದ್ಯುತ್ ಎಂದರೇನು? ಶಕ್ತಿ ತಾನೇ? ಅದನ್ನು ಸೃಷ್ಟಿಸಲು ಅನೇಕ ವಿಧಾನಗಳಿವೆ. ಗಾಳಿಯಿಂದ ವಿದ್ಯುತ್ ಉತ್ಪಾದಿಸಬಹುದು. ಸಗಣಿಯಿಂದ ಅನಿಲ ಉತ್ಪಾದಿಸಬಹುದು. ಸೂರ್ಯನ ಶಾಖದಿಂದ ವಿದ್ಯುತ್ ತಯಾರಿಸಬಹುದು. ಕಲ್ಲಿದ್ದಲಿನಿಂದಲೂ ವಿದ್ಯುತ್ ಸೃಷ್ಟಿಸಲು ಸಾಧ್ಯ. ಈ ದೇಶದಲ್ಲಿ ಸುಮಾರು ೨೫ ಕೋಟಿ ನಿರುದ್ಯೋಗಿಗಳಿದ್ದಾರೆ. ಅಷ್ಟೊಂದು ಮಾನವ ಶಕ್ತಿ ವ್ಯರ್ಥವಾಗುತ್ತಿದೆ. ಇವರಿಗೆಲ್ಲ ಉದ್ಯೋಗ ದೊರಕಿಸುವುದರೆಡೆ ಗಮನ ಹರಿಸದಿದ್ದರೆ ಈ ನಿರುದ್ಯೋಗಿಗಳು ಏನು ತಾನೆ ಮಾಡಿಯಾರು? ಕಳ್ಳತನಕ್ಕೆ ಇಳಿಯುತ್ತಾರೆ. ಇಲ್ಲವೆ, ದರೋಡೆಗೆ ಮುಂದಾಗುತ್ತಾರೆ."

"ಅಧಿಕಾರ ವಿಕೇಂದ್ರಿಕೃತವಾಗಬೇಕು. ಐಶ್ವರ್ಯ ಹಂಚಿಹೋಗಬೇಕು.... ಈಗ ಆಗಿರುವುದೆಲ್ಲಾ ತದ್ವಿರುದ್ಧ. ಕಾಳ ಸಂತೆಕೋರರು, ಭ್ರಷ್ಟಾಚಾರಿಗಳು, ಕಳ್ಳ ಸಾಗಾಣಿಕೆದಾರರು, ತೆರಿಗೆ ವಂಚಕರ ಕೈಯಲ್ಲಿ ಐಶ್ವರ್ಯ ಸೇರುತ್ತಿದೆ. ಅಧಿಕಾರವೂ ಅಂಥವರ ಕೈಯಲ್ಲೇ ಕೇಂದ್ರೀಕೃತವಾಗುತ್ತಿದೆ."

"ಅಗ್ಗದ ಜನಪ್ರಿಯ ಕಾರ್ಯಕ್ರಮಗಳು ನನಗೆ ಒಪ್ಪಿತವಾಗುವುದಿಲ್ಲ. ಹೀಗೆ ಸೀರೆ, ಪಂಚೆ, ಪಾತ್ರೆಗಳನ್ನು ಕೊಟ್ಟು ಜನರನ್ನು ಭಿಕ್ಷುಕರನ್ನಾಗಿಸುವ ಬದಲು ಅವರಿಗೆ ದುಡಿಯುವ ಅವಕಾಶ ಕಲ್ಪಿಸಬೇಕು."



"ಶೇಕಡಾ ಎರಡರಷ್ಟಿರುವ ಸರ್ಕಾರಿ ನೌಕರರಿಗಾಗಿ ಬೊಕ್ಕಸದ ಅರ್ಧಪಾಲನ್ನು ವ್ಯಯಿಸುವುದು ಯಾವ ನ್ಯಾಯ?"

"ಐ.ಎ.ಎಸ್. ಅಧಿಕಾರಿಗಳು ಜನರ ಸೇವಕರಾಗುವವರೆಗೆ ಈ ದೇಶ ಮುಂದುವರಿಯುವುದು ಸಾಧ್ಯವಿಲ್ಲ. ದುರದೃಷ್ಟವೆಂದರೆ ಇವರನ್ನು ಅಂಕೆಯಲ್ಲಿಡುವ ತಾಕತ್ತು ಮಂತ್ರಿಗಳಿಗಿಲ್ಲ!"

"ರಾಜಕೀಯಕ್ಕೆ ಇಳಿಯುವವರಿಗೆ 'ರಾಜಕೀಯಕ್ಕೆ ಇಳಿಯಬೇಡಿ' ಅಂತ ಹೇಳುತ್ತೇನೆ. ನನ್ನ ಮೊಮ್ಮಗನೇ ರಾಜಕೀಯಕ್ಕೆ ಇಳಿಯಲು ಹೊರಟ. 'ಮೂರ್ಖ, ನೀನು ಯಾಕೆ ಹೋಗ್ತೀಯಾ ಅಲ್ಲಿ? ಏನಿದೆ ಅಂತ ಹೋಗ್ತೀಯಾ?' ಅಂದೆ. 'ಎಲ್ಲಾ ಹೊಲಸು. ರಾಜಕೀಯಕ್ಕೆ ಹೋಗಲೇಬೇಕು, ದೇಶ ಸೇವೆ, ಸಮಾಜಸೇವೆ ಮಾಡಬೇಕು, ಲಂಚ ತೆಗೆದುಕೊಳ್ಳದೇ ಕೆಲಸ ಮಾಡುತ್ತೇನೆ ಅಂತ ಇದ್ದರೆ ಹೋಗು. ತನಗೆ ಅನುಕೂಲ ಮಾಡಿಕೊಳ್ಳುತ್ತೇನೆ ಅಂತ ಇದ್ದರೆ ಹೋಗಬೇಡ. ಹೋಗಿ ಹೊಲಸು ತಿನ್ನಬೇಡ' ಅಂತ ಅಂದೆ."

"ಆದರೂ ಹೊಸ ಪೀಳಿಗೆಯ ಬಗ್ಗೆ ನನಗೆ ವಿಶ್ವಾಸವಿದೆ. ಯುವಕರಿಗೆ ಸರಿಯಾದ ಮಾರ್ಗದರ್ಶನ ಮಾಡಿ ಅವಕಾಶ ಕೊಟ್ಟರೆ ದೇಶಕ್ಕೆ ಒಳ್ಳೆಯ ದಿನಗಳು ದೂರವಿಲ್ಲ."

"ನಮ್ಮಲ್ಲಿ ಒಳ್ಳೆಯ ಜನ ಸಾಕಷ್ಟು ಇದ್ದಾರೆ. ಒಳ್ಳೆಯವರೇ ಹೆಚ್ಚು, ಅಧಿಕಾರದಲ್ಲಿ ಇರುವವರ ಸಂಖ್ಯೆ ಕಡಿಮೆ. ಆದರೆ ಅವರ ಸಂಖ್ಯೆ ಕಡಿಮೆ ಆದರೂ ಅವರು ಮಾಡುವ ಅನ್ಯಾಯ, ಅಕೃತ್ಯ ದೊಡ್ಡದಾಗಿ ಕಾಣಿಸಿ ಹಾವಳಿ ಮಾಡುತ್ತಿದೆ."

"ಕೋಮು ಭಾವನೆ ಎಂಬುದು ಭೀಕರವಾದ ಶತ್ರು ನಮಗೆ. ಏನೇ ಆಗಲಿ ಈ ಮನೋಭಾವ ಬೆಳೆಯಲು ಅವಕಾಶ ಮಾಡಿಕೊಡಬಾರದು."

"ದೇವರು ಎಲ್ಲಿದ್ದಾನೆ? ಬರಿಯ ಗುಡಿಗಳಲ್ಲೇ? ಅವನು ಇಲ್ಲದ ಜಾಗವೆಲ್ಲಿದೆ? ಎಲ್ಲೆಲ್ಲೂ, ಎಲ್ಲರಲ್ಲೂ ಇದ್ದಾನೆ ಎಂದ ಮೇಲೆ ನಾವು ಯಾರನ್ನು ತಾನೆ ದ್ವೇಷಿಸಲಾದೀತು? ಗಾಂಧೀಜಿ ಇದನ್ನು ತಿಳಿದಿದ್ದರು. ಜೀವನಕ್ಕೆ ಅಳವಡಿಸಿಕೊಂಡರು. ನಮ್ಮನ್ನಾಳಿದ ಬ್ರಿಟಿಷರನ್ನೂ ಸ್ನೇಹದಿಂದ ಕಂಡರು. ಅವರ ಆಳ್ವಿಕೆಯನ್ನು ಖಂಡಿಸಿದರೇ ವಿನಾ ಅವರನ್ನು ಖಂಡಿಸಲಿಲ್ಲ. ಇದನ್ನು ನಾವು ತಿಳಿದಿರಬೇಕು. ತಿಳೀತೇವೆ. ಮುಂದಿನ ಜನಾಂಗ ಹೆಚ್ಚೆಚ್ಚು ತಿಳಿಯುತ್ತದೆ. ಭವಿಷ್ಯದಲ್ಲಿ ನನಗೆ ವಿಶ್ವಾಸವಿದೆ."

"ನಾನು ಜೈಲಿನಲ್ಲಿದ್ದಾಗ ದಿನಾಲೂ ರಾತ್ರಿ ಆಕಾಶದ ಕಡೆ ನೋಡುತ್ತಿದ್ದೆ. ನಕ್ಷತ್ರಗಳ ರಾಶಿಯನ್ನು ನೋಡಿ ಪರವಶನಾಗುತ್ತಿದ್ದೆ. ಕೋಟಿ ಕೋಟಿ ನಕ್ಷತ್ರಗಳು. ದೊಡ್ಡವು, ಚಿಕ್ಕವು. ವೇಗವಾಗಿ ಚಲಿಸುತ್ತಿವೆ. ಆದರೆ ಒಂದಕ್ಕೊಂದು ಡಿಕ್ಕಿ ಹೊಡೆಯದೇ ತಂತಮ್ಮ ಮಾರ್ಗದಲ್ಲಿ ಹೋಗುತ್ತಿವೆ. ನಾವೂ ಮನುಷ್ಯರೂ ಏಕೆ ಹಾಗೆ ಸೌಹಾರ್ದದಿಂದ ಹೋಗಬಾರದು ಅನ್ನಿಸಿತು." ●

## ನೀರು ಕೊಟ್ಟವರು

ಕರ್ನಾಟಕದ ಮಾಜಿ ಮಂತ್ರಿ ದಿ. ನಜೀರ್ ಸಾಹೇಬರು ಚಿತ್ರದುರ್ಗ ಜಿಲ್ಲೆಯ ಗ್ರಾಮಾಂತರ ಪ್ರದೇಶದಲ್ಲಿ ಪ್ರವಾಸದಲ್ಲಿದ್ದರು. ಒಂದು ದಿನ ಬೆಳಿಗ್ಗೆ ಐದೂವರೆ ಗಂಟೆಗೆ ಅವರು ಎಂದಿನಂತೆ ವಾಯುವಿಹಾರದಲ್ಲಿದ್ದಾಗ ದಾರಿಯಲ್ಲಿ ಹತ್ತಾರು ಹೆಂಗಸರು ಕೊಡಗಳನ್ನು ಸೊಂಟದ ಮೇಲೆ ಇಟ್ಟುಕೊಂಡು ಹೋಗುವುದನ್ನು ಕಂಡರು. ಅಷ್ಟು ಬೆಳಿಗ್ಗೆಯೇ ಅವರೆಲ್ಲ ನಾಲ್ಕೈದು ಮೈಲಿ ದೂರದಿಂದ ಕುಡಿಯುವ ನೀರನ್ನು ತರಲು ಹೋಗುತ್ತಿದ್ದಾರೆಂದು ತಿಳಿದು ನಜೀರ್‌ಸಾಹೇಬರಿಗೆ ಕಣ್ಣಲ್ಲಿ ನೀರು ಬಂತು. ಅವರು ಇಂಜಿನಿಯರನ್ನು ಕರೆಸಿ ಮೂರು ದಿನಗಳೊಳಗಾಗಿ ನಲ್ಲಿ ಹಾಕಿಸಿಕೊಡಬೇಕೆಂದು ಆಜ್ಞೆ ಮಾಡಿದರು. ಅವರ ಆಜ್ಞೆ ಕೃತಿಗಿಳಿದು ಹಳ್ಳಿಯಲ್ಲಿ ಗಂಗಾವತರಣವಾಯಿತು. ಆ ಮುಗ್ಧ ಹಳ್ಳಿಯವರು ಮಂತ್ರಿಗಳನ್ನು 'ನೀರು ಸಾಬ್' ಎಂದೇ ಕರೆದರು. ಅವರು ಹೀಗೆ ಹತ್ತಾರು ಕಡೆ ನೀರಿಗಾಗಿ ಬವಣೆಪಡುತ್ತಿದ್ದ ಜನಗಳಿಗೆ ನೀರುಣಿಸಿದ್ದರಿಂದ ಅವರು ದಿವಂಗತರಾದ ಮೇಲೂ ಜನರು ಕೃತಜ್ಞತೆಯಿಂದ ಅವರನ್ನು ಅದೇ ಹೆಸರಿನಿಂದ ನೆನೆಸಿಕೊಳ್ಳುತ್ತಾರೆ.



ಮಹಾರಾಷ್ಟ್ರದ ಶ್ರೀಮಂತರೊಬ್ಬರು ಬೇಸಿಗೆ ಗಾಲದಲ್ಲಿ ತಮ್ಮೂರಿನ ರೈಲ್ವೆ ಸ್ಟೇಶನ್ನಿನಲ್ಲಿ ಕುಡಿಯುವ ನೀರನ್ನು ಪ್ರಯಾಣಿಕರಿಗೆ ತಾವೇ ಹಂಚುತ್ತಿದ್ದಾರೆ. ಪ್ರತಿದಿನ ನೂರಾರು ಕ್ವಿಂಟಲ್ ಮಂಜುಗಡ್ಡೆಯನ್ನು ಕೊಂಡು, ಪುಡಿ ಮಾಡಿಸಿ, ರೈಲ್ವೇ ಸ್ಟೇಶನ್ನಿಗೆ ತಂದು ಬಾಯಾರಿದವರಿಗೆ ತಂಪು ನೀರು ಕುಡಿಸುತ್ತಿದ್ದಾರೆ. "ಇದರ ಬದಲು ಪ್ರಯಾಣಿಕರಿಗೆ ಆಹಾರವನ್ನು ಕೊಟ್ಟರೆ ಮೇಲಲ್ಲವೆ?" ಎಂದು ಯಾರೋ ಪ್ರಶ್ನಿಸಿದಾಗ, "ಆಹಾರವಿಲ್ಲದಿದ್ದರೂ ಬದುಕಬಹುದು ಆದರೆ ನೀರಿಲ್ಲದಿದ್ದರೆ ಸಾಧ್ಯವಿಲ್ಲ," ಎಂದು ಆ ಶ್ರೀಮಂತ ವಿವರಣೆ ಕೊಟ್ಟರು. ನೀವು ಯಾವ ದಿನವೇ ಆ ರೈಲ್ವೇ ಸ್ಟೇಶನ್ನಿಗೆ ಭೇಟಿಕೊಟ್ಟರೂ ಈ ಮಹಾಶಯರು ನೀರು ಕೊಡುತ್ತಿರುವುದನ್ನು ನೋಡಬಹುದು. ಅತುಲೈಶ್ವರ್ಯ ಸಂಪನ್ನರಾದರೂ ಕೊಂಚವೂ ಗರ್ವವಿಲ್ಲದೆ ಸೇವಕನಂತೆ ದುಡಿಯುತ್ತಿರುವುದು ಅಸಾಮಾನ್ಯ ಸಂಗತಿ.

● ಡಿ. ಗುಂಡೂರಾವ್

# ವಿಶ್ವಕಪ್ ಕ್ರಿಕೆಟ್ ಜಾಡಿನ ಹಿನ್ನೋಟ

• ಗುರುರಾಜ ಜಮಖಂಡಿ

**ವಿಶ್ವ ಕಪ್ ಕ್ರಿಕೆಟ್ ಎಂದಾಕ್ಷಣ ಜಗತ್ತಿನಾದ್ಯಂತ ಕ್ರಿಕೆಟ್ ಪ್ರೇಮಿಗಳ ಮೈಯಲ್ಲಿ ವಿದ್ಯುತ್ ಸಂಚಾರವಾದಂತೆ ಆಗುತ್ತದೆ. ಕ್ರಿಕೆಟ್ ಆಡುವ ರಾಷ್ಟ್ರಗಳ ಪ್ರೇಕ್ಷಕರಲ್ಲದೆ ಜಗತ್ತಿನ ಇತರೆಡೆಗಳಲ್ಲಿ ಕೂಡಾ ಕ್ರಿಕೆಟ್ ಪ್ರೇಮಿಗಳನ್ನು ಕಿರುತೆರೆಯ ಮುಂದೆ ನೆಲೆಯೂರಿ ಕೂಡಿಸುವ ಈ ಮಹಾನ್ ಪಂದ್ಯಾವಳಿ ಮತ್ತೆ ಫೆಬ್ರುವರಿ-ಮಾರ್ಚ್‌ನಲ್ಲಿ ನಡೆಯಲಿದೆ.**

೧೯೮೩ರ ಜೂನ್ ೨೫ ರಂದು 'ಕ್ರಿಕೆಟ್ ಕಾಶಿ' ಎನಿಸಿದ ಇಂಗ್ಲೆಂಡಿನ ಲಾರ್ಡ್ಸ್ ಮೈದಾನದಲ್ಲಿ ಕಪಿಲದೇವ ನೇತೃತ್ವದ ಭಾರತದ ತಂಡ ಪ್ರತಿಷ್ಠಿತ ವಿಶ್ವಕಪ್ ಗೆಲ್ಲಲು ಆಸ್ಟ್ರೇಲಿಯಾ, ಇಂಗ್ಲೆಂಡ್, ಹಾಗೂ ವೆಸ್ಟ್ ಇಂಡೀಸ್‌ನ ದೈತ್ಯರನ್ನು ಸದೆಬಡೆದಾಗ ಇಡೀ ಭಾರತ ದೇಶವೇ ಸಂತಸದ ಪ್ರವಾಹದಲ್ಲಿ ತೇಲಿತ್ತು.

ಇಂತಹ ಪ್ರತಿಷ್ಠಿತ ಪಂದ್ಯಾವಳಿಗೆ ಈ ಸಲ ಭಾರತದ ಜೊತೆಗೆ ಪಾಕಿಸ್ತಾನ ಹಾಗೂ ಶ್ರೀಲಂಕಾ ಸಂಯುಕ್ತವಾಗಿ ಆತಿಥ್ಯ ನೀಡುತ್ತಿದ್ದು ಇದಕ್ಕಾಗಿ ಪೂರ್ವಸಿದ್ಧತೆಗಳು ಭರದಿಂದ ನಡೆಯುತ್ತಿವೆ.

ಭಾರತದ ಕ್ರಿಕೆಟ್ ನಿಯಂತ್ರಣ ಮಂಡಳಿ ಪಾಕಿಸ್ತಾನ ಹಾಗೂ ಶ್ರೀಲಂಕಾದ ಮಂಡಳಿಗಳ ಸಹಯೋಗದಲ್ಲಿ 'ಪಿಲ್‌ಕಾಮ್' ಎಂಬ ಸಂಘಟನಾ ಸಮಿತಿಯನ್ನು ರಚಿಸಿಕೊಂಡು ೧೨ ರಾಷ್ಟ್ರಗಳು ಪಾಲ್ಗೊಳ್ಳುವ ಕ್ರಿಕೆಟ್ ಉತ್ಸವಕ್ಕಾಗಿ ಸುಜ್ಜುಗೊಳ್ಳುತ್ತಿವೆ.

ಇತ್ತ ಅಜರುದ್ದೀನ್, ವಾಸಿಂ ಅಕ್ರಮ್ ಮತ್ತು ಅರ್ಜುನ ರಣತುಂಗಾ ನಾಯಕತ್ವದ ಭಾರತ, ಪಾಕಿಸ್ತಾನ ಮತ್ತು ಶ್ರೀಲಂಕಾ ತಂಡಗಳು ವಿಶ್ವಕಪ್ಪನ್ನು ತಮ್ಮ ಮಡಿಲಿಗೆ ಹಾಕಿಕೊಳ್ಳುವ ಕನಸು ಕಾಣುತ್ತಿವೆ.

ಕಳೆದ ಸಲ, ಅಂದರೆ ೧೯೯೨ರ ವಿಶ್ವಕಪ್ ಟೂರ್ನಿಯಲ್ಲಿ ಲೀಗ್‌ನಲ್ಲಿ ಸೋತರೂ ಪಾಯಿಂಟಗಳ ಲೆಕ್ಕಾಚಾರದಲ್ಲಿ ಮೇಲುಗೈ ಸಾಧಿಸಿ ಫೀನಿಕ್ಸ್‌ನಂತೆ ನಾಕೌಟ್ ಹಂತಕ್ಕೆ ಚೇತರಿಸಿಕೊಂಡು ಬಂದ ಪಾಕಿಸ್ತಾನ ವಾಟರ್ ಫೋರ್ಡ್ ಕ್ರಿಸ್ಟಲ್ ಕಪ್ಪನ್ನು ತನ್ನದಾಗಿಸಿಕೊಂಡು ಹಿರಿಮೆ ಮೆರೆದಿದೆ.

ವೆಸ್ಟ್‌ಇಂಡೀಸ್, ಭಾರತ, ಆಸ್ಟ್ರೇಲಿಯಾ, ಈಗಾಗಲೇ ವಿಶ್ವ ಚಾಂಪಿಯನ್ ಪಟ್ಟದ ಕೀರ್ತಿ, ಖುಷಿಯನ್ನು ಅನುಭವಿಸಿವೆ.

ಇತ್ತೀಚೆಗೆ ಪಾಕಿಸ್ತಾನ ಪ್ರವಾಸ ಕೈಕೊಂಡಿದ್ದ ಶ್ರೀಲಂಕಾ ತಂಡ ಹುಲಿಯ ಗವಿಯಲ್ಲಿಯೇ ಹುಲಿಯನ್ನು ಹಣ್ಣುಗಾಯಿ-ನೀರುಗಾಯಿ ಮಾಡಿದೆ. ಟೆಸ್ಟ್ ಹಾಗೂ ಒಂದು ದಿನದ ಸರಣಿ ಎರಡರಲ್ಲೂ ಪಾಕಿಸ್ತಾನವನ್ನು ಅಧಿಕಾರಯುತವಾಗಿ ಸೋಲಿಸಿದ ಶ್ರೀಲಂಕಾ ತಾನೊಂದು ಪ್ರಬಲ ತಂಡವಾಗಿ ರೂಪುಗೊಳ್ಳುತ್ತಿರುವ ಬಗ್ಗೆ ಇತರ

ರಾಷ್ಟ್ರಗಳಿಗೆ ಎಚ್ಚರಿಕೆಯನ್ನು ನೀಡುತ್ತಿದೆ.

ಕ್ರಿಕೆಟ್ ಹುಟ್ಟಿದ ನಾಡಾದ ಇಂಗ್ಲೆಂಡಿನ ತಂಡ ಈಗ ಮೊದಲಿನಂತೆ ಬಲಶಾಲಿಯಾಗಿ ಉಳಿದಿಲ್ಲ. ನ್ಯೂಜಿಲೆಂಡ್ ತಂಡ ಇತ್ತೀಚೆಗೆ ಭಾರತಕ್ಕೆ ಬಂದು ಮಳೆಯ ಆಟವೇ ಪ್ರಧಾನವಾದ ಟೆಸ್ಟ್ ಹಾಗೂ ಒಂದು ದಿನದ ಸರಣಿಯಲ್ಲಿ ಸೋಲು ಅನುಭವಿಸಿ ವಾಪಸಾಗಿದೆ.

ಆದರೆ ಈ ಎರಡೂ ಸರಣಿಗಳು ಭಾರತದ ಸಂತೋಷವನ್ನು ಹೆಚ್ಚಿಸುವ ಬದಲು ಆ ತಂಡದ ದೌರ್ಬಲ್ಯಗಳನ್ನು ಎತ್ತಿ ತೋರಿಸಿ ವಿಶ್ವಕಪ್ ಟೂರ್ನಿಗೆ ಮುನ್ನ ಆತಂಕ ಮೂಡಿಸಿದೆ.

ವೆಸ್ಟ್‌ಇಂಡೀಸ್ ತಂಡ ಕೂಡಾ ಆಂತರಿಕ ಬಿಕ್ಕಟ್ಟಿನಿಂದ ಹೊರತಾಗಿಲ್ಲ. ಆ ತಂಡದ ಪ್ರಮುಖ ಆಟಗಾರ, ವಿಶ್ವದಾಖಲೆ ವೀರ ಬ್ರಿಯಾನ್‌ಲಾರಾ ಅವರ ಮೇಲೆ ಶಿಸ್ತಿನ ಕ್ರಮವಾಗಿ ವೆಸ್ಟ್‌ಇಂಡೀಸ್ ಕ್ರಿಕೆಟ್ ಮಂಡಳಿ ದಂಡ ಹಾಕಿದ್ದರಿಂದ ಕುಪಿತರಾದ ಲಾರಾ ತಂಡದಿಂದ ಹೊರಬಿದ್ದಿದ್ದು ಆ ತಂಡಕ್ಕೀಗ ಒಂದು ದೊಡ್ಡ ಪೆಟ್ಟು.

ಆಸ್ಟ್ರೇಲಿಯಾ ತಂಡ ಮೇಲ್ನೋಟಕ್ಕೆ ಪ್ರಶಸ್ತಿ ಗೆಲ್ಲುವ ಫೆವರಿಟ್ ಎಂದು ಕಂಡು ಬಂದರೂ ಒಂದು ದಿನದ ಕ್ರಿಕೆಟ್‌ನಲ್ಲಿ ಏನು ಬೇಕಾದರೂ ಆಗಬಹುದು ಎಂಬುದಕ್ಕೆ ಈ ಹಿಂದೆ ನಡೆದ ೫ ವಿಶ್ವ ಕಪ್ ಪಂದ್ಯಾವಳಿಗಳೇ ಸಾಕ್ಷಿ.

ಹಿಂದಿನ ವಿಶ್ವ ಕಪ್ ಪಂದ್ಯಾವಳಿಗಳ ಕೆಲವು ಅವಿಸ್ಮರಣೀಯ ರಸನಿಮಿಷಗಳನ್ನು ಮತ್ತೆ ನೆನೆಸಿಕೊಳ್ಳುವುದೇ ಒಂದು ಮುದ ನೀಡುವ ಸಂಗತಿ. ೧೯೭೧ರಲ್ಲಿ ಆರಂಭಗೊಂಡ ನಿಗದಿತ ಓವರ್‌ಗಳ ಆಧುನಿಕ ಕ್ರಿಕೆಟ್ ೨೮ ವರ್ಷಗಳಲ್ಲಿ ಹಣಕಾಸು ಮತ್ತು ಜನಪ್ರಿಯತೆಯ ದೃಷ್ಟಿಯಿಂದ ಉತ್ತುಂಗಕ್ಕೇರಿದೆ.

**೧೯೭೫ ಪ್ರುಡೆನ್ಸಿಯಲ್ ಕಪ್:** ಇಂಗ್ಲೆಂಡಿನಲ್ಲಿ ಜೂನ್ ೭ ರಿಂದ ೨೧ ರವರೆಗೆ ನಡೆದ ೧೫ ಪಂದ್ಯಗಳನ್ನು ೧,೧೭,೮೦೯ ವೀಕ್ಷಕರು ಮೈದಾನಗಳಲ್ಲಿ ನೋಡಲು ೧,೮೮,೫೯೮ ಡಾಲರ್‌ಗಳನ್ನು ವೆಚ್ಚ ಮಾಡಿದರು.

**ಜೂನ್ ೭; ೧೯೭೫:** ಲಾರ್ಡ್ಸ್ ಮೈದಾನದಲ್ಲಿ ಭಾರತದ ವಿರುದ್ಧ ಜೂನ್ ೭ ರಂದು ಇಂಗ್ಲೆಂಡಿಗೆ ೨೦೨ ಓಟಗಳ ನಿರಾಯಾಸ ಜಯ. ಭಾರತದ ಸುನೀಲ ಗಾವಸ್ಕರ್ ೬೦ ಓವರ್‌ಗಳಲ್ಲಿ ಆಮೆಗತಿಯಲ್ಲಿ ಆಡಿ ೩೬ ಓಟಗಳಿಸಿ ಔಟಾಗದೇ ಉಳಿದು ಪ್ರೇಕ್ಷಕರಿಗೆ, ತಂಡದ ಸಂಗಾತಿಗಳಿಗೆ ಹಾಗೂ ಸ್ವತಃ ತಮಗೇ ಬೇಸರ ಬರುವಂತೆ ಮಾ. ..ರು.

ಅದೇ ದಿನ ಲೀಡ್ಸ್‌ನ ಹೆಡಿಂಗ್ಲೆಯಲ್ಲಿ ಆಸ್ಟ್ರೇಲಿಯಾ ವಿರುದ್ಧ ಪಾಕಿಸ್ತಾನದ ಪಂದ್ಯ. ಆಸ್ಟ್ರೇಲಿಯಾಕ್ಕೆ ೭೩ ಓಟಗಳ ಜಯ. ಆಸ್ಟ್ರೇಲಿಯಾದ ಡೆನಿಸ್ ಲಿಲಿ ೩೪ ಕ್ಕೆ ೫ ವಿಕೆಟ್ ಕೆಡವಿ ಒಂದು ದಿನದ ಅಂತರಾಷ್ಟ್ರೀಯ ಪಂದ್ಯದಲ್ಲಿ ೫ ವಿಕೆಟ್‌ಗಳನ್ನು ಕೆಡವಿದ ಮೊದಲ ಬೌಲರ್ ಎಂಬ ಕೀರ್ತಿಗೆ ಪಾತ್ರರಾದರು.

**ಜೂನ್ ೧೧ ಹೆಡಿಂಗ್ಲೆ ಮೈದಾನ:** ಭಾರತಕ್ಕೆ ಪೂರ್ವ ಆಫ್ರಿಕಾ ವಿರುದ್ಧ ೧೦ ವಿಕೆಟ್‌ಗಳ ಭಾರೀ ಜಯ. ದೊಡ್ಡ ಮೀನು ಸಣ್ಣ ಮೀನನ್ನು ನುಂಗಿದ ಅನುಭವ. ಭಾರತದ ಬಿಷನ್‌ಸಿಂಗ್ ಬೇಡಿ ೧೨ ಓಟಗಳಲ್ಲಿ ೮ ಮೇಡನ್ ಮಾಡಿ ೬ ಓಟ ನೀಡಿ



ಒಂದು ವಿಕೆಟ್ ಪಡೆದದ್ದು ವಿಶ್ವಕಪ್‌ನಲ್ಲಿ ಅತ್ಯಂತ ಮಿತವ್ಯಯಕಾರಿ ಬೌಲಿಂಗ್. ಒಂದು ದಿನದ ಅಂತರಾಷ್ಟ್ರೀಯ ಕ್ರಿಕೆಟ್ ಇತಿಹಾಸದಲ್ಲಿ ತಂಡವೊಂದು ೧೦ ವಿಕೆಟ್‌ಗಳ ಜಯ ಸಾಧಿಸಿದ್ದು ಇದೇ ಪ್ರಥಮ. ಗಾವಸ್ಕರ್ (೬೫) ಹಾಗೂ ಫರೂಕ್ ಇಂಜನೀಯರ್ (೫೪) ಈ ಸಾಹಸಿಗೈದರು. ಅದೇ ದಿನ ಕೆನಿಂಗ್ಟನ್ ಓವಲ್‌ದಲ್ಲಿ ಆಸ್ಟ್ರೇಲಿಯಾದ ಅಲನ್ ಟರ್ನರ್ ಶ್ರೀಲಂಕಾ ವಿರುದ್ಧ ೧೦೧ ಓಟಗಳಿಸಿ ಭೋಜನ ವಿರಾಮಕ್ಕೆ ಮೊದಲು ಶತಕಗಳಿಸಿದ ಮೊದಲ ಆಟಗಾರರೆನಿಸಿದರು.

**ಜೂನ್ ೧೧:** ಬರ್ಮಿಂಗ್ ಹ್ಯಾಮಿನ ಎಜ್‌ಬಾಸ್ಟನ್‌ದಲ್ಲಿ ಪಾಕಿಸ್ತಾನ ಹಾಗೂ ವೆಸ್ಟ್ ಇಂಡೀಸ್ ಪಂದ್ಯ. ೧೯೭೫ರ ವಿಶ್ವಕಪ್ ಟೂರ್ನಿಯಲ್ಲಿಯೇ ಅತ್ಯಂತ ಉತ್ತಮ ಪಂದ್ಯವಿದು. ಪಾಕಿಸ್ತಾನ ೬೦ ಓವರ್‌ಗಳಲ್ಲಿ ೭ ವಿಕೆಟ್ ನಷ್ಟಕ್ಕೆ ೨೬೬ ಓಟಗಳಿಸಿತ್ತು. ಇದಕ್ಕುತ್ತರವಾಗಿ ವೆಸ್ಟ ಇಂಡೀಸ್ ಒಂದು ಹಂತದಲ್ಲಿ ೧೦೩ ಓಟಗಳಿಗೆ ೮ ವಿಕೆಟ್‌ಗಳನ್ನು ಕಳೆದುಕೊಂಡಿತ್ತು. ಪಾಕಿಸ್ತಾನ ಇನ್ನೇನು ಗೆದ್ದೇಬಿಟ್ಟಿತು ಎಂದು ಭಾವಿಸಿದವರಿಗೆ ಡೆರಿಕ್ ಮರೆ (ಅಜೇಯ ೬೧) ಹಾಗೂ ಆ್ಯಂಡಿ ರಾಬರ್ಟ್ಸ್ (ಅಜೇಯ ೨೪), ನಿರಾಶೆಗೊಳಿಸಿದರು. ಕೊನೆಯ ಹುದ್ದರಿ ಪಾಲುಗಾರಿಕೆಯಲ್ಲಿ ೧೬೪ ಓಟಗಳನ್ನು ಬಾರಿಸುವ ಮೂಲಕ ಈ ಜೋಡಿ ವೆಸ್ಟ್‌ಇಂಡೀಸ್‌ಗೆ ಒಂದು ವಿಕೆಟ್‌ನ ಗೆಲುವನ್ನು ಇನ್ನು ಕೇವಲ ಎರಡೇ ಎಸೆತಗಳು ಉಳಿದಿರುವಾಗ ತಂದುಕೊಟ್ಟರು. ಈ ಗೆಲುವಿನಿಂದ ವೆಸ್ಟ್‌ಇಂಡೀಸ್ ಸೆಮಿಫೈನಲ್‌ಗೆ ಅರ್ಹತೆ ಪಡೆದರೆ ಪಾಕಿಸ್ತಾನ ಪಂದ್ಯಾವಳಿಯಿಂದ ನಿರ್ಗಮಿಸಿತು.

ಜೂನ್ ೧೪, ೧೯೭೫: ಕೆನಿಂಗ್ಟನ್ ಓವಲ್‌ದಲ್ಲಿ ವೆಸ್ಟ ಇಂಡೀಸ್‌ಗೆ ಆಸ್ಟ್ರೇಲಿಯಾ ವಿರುದ್ಧ ೭ ವಿಕೆಟ್ ಜಯ. ಕಾಳಿಚರಣ, ಡೆನಿಸ್ ಲಿಲಿ ಅವರ ವೇಗದ ಬೌಲಿಂಗ್‌ನಲ್ಲಿ ೧೦ ಎಸೆತಗಳಲ್ಲಿ ೩೫ ಓಟ ಬಾರಿಸಿದ್ದು ಒಂದು ವೈಶಿಷ್ಟ್ಯ.

ಜೂನ್ ೧೮, ೧೯೭೫: ಲೀಡ್ಸ್‌ನಲ್ಲಿ ಆಸ್ಟ್ರೇಲಿಯಾ ಮತ್ತು ಇಂಗ್ಲೆಂಡ್ ನಡುವೆ ಮೊದಲ ಸೆಮಿ ಫೈನಲ್ಸ್. ಆಸ್ಟ್ರೇಲಿಯಾಕ್ಕೆ ೪ ವಿಕೆಟ್‌ಗಳ ಜಯ. ಗೆಲ್ಲಲು ೯೪ ಓಟ ಗಳಿಸಬೇಕಾಗಿದ್ದ ಆಸ್ಟ್ರೇಲಿಯಾ ಒಂದು ಹಂತದಲ್ಲಿ ೩೯ಕ್ಕೆ ೬ ವಿಕೆಟ್ ಕಳೆದುಕೊಂಡಿತ್ತು. ಜಿ.ಜೆ. ಗಿಲ್ಮೋರ್ ಅಜೇಯ ೨೮ ಓಟಗಳಿಸಿ ಆಸ್ಟ್ರೇಲಿಯಾಕ್ಕೆ ಜಯ ತಂದುಕೊಟ್ಟರು.

**೧೯೭೫ ಜೂನ್ ೨೧:** ವೆಸ್ಟ ಇಂಡೀಸ್ ಆಸ್ಟ್ರೇಲಿಯಾ ನಡುವೆ ಲಾರ್ಡ್ಸ್‌ದಲ್ಲಿ ಫೈನಲ್ಸ್. ವರ್ಷದ ದೀರ್ಘ ದಿನವಾದ ಅಂದು ೫೬೫ ಓಟಗಳ ಸುರಿಮಳೆ. ವೆಸ್ಟ್ ಇಂಡೀಸ್‌ಗೆ ೧೭ ಓಟಗಳ ಜಯ. ವೆಸ್ಟ್‌ಇಂಡೀಸ್ ತಂಡದ ನಾಯಕ ಕ್ಲೈವ್ ಲಾಯ್ಡ್ ಅವರ ಶತಕದ ನೆರವಿನಿಂದ ೬೦ ಓವರ್‌ಗಳಲ್ಲಿ ೮ ವಿಕೆಟ್‌ಗೆ ೨೯೧ ಓಟಗಳಿಸಿತ್ತು. ನಂತರ ಆಸ್ಟ್ರೇಲಿಯಾದ ಐವರು ರನ್‌ಔಟ್ ಆದರು. ಫ್ರೆಡ್ರಿಕ್ಸ್, ಲಿಲಿ ಅವರ ದಾಳಿಯಲ್ಲಿ ಭರ್ಜರಿ ಸಿಕ್ಸರ್ ಬಾರಿಸಿ ನಂತರ ತಮ್ಮ ಕಾಲಿನಿಂದ ಬೇಲ್ಸ್ ಉರುಳಿಸಿದ್ದಕ್ಕಾಗಿ ಔಟಾಗಿ ಮರಳಿದರು. ೩ ವಿಕೆಟ್‌ಗಳನ್ನು ೫೫ ಕ್ಕೆ ವೆಸ್ಟ ಇಂಡೀಸ್ ಕಳೆದುಕೊಂಡಿದ್ದಾಗ ರೋಹನ ಕನ್ಹಾಯ್‌ರನ್ನು (೫೫) ಕೂಡಿಕೊಂಡ ಲಾಯ್ಡ್ ೮೨ ಎಸೆತಗಳಲ್ಲಿ ಶತಕ ಪೂರೈಸಿದರು.

೨೯೨ ಓಟಗಳ ಬೆನ್ನಟ್ಟಿದ ಆಸ್ಟ್ರೇಲಿಯಾ ೫೮.೪ ಓವರ್‌ಗಳಲ್ಲಿ ೨೭೪ಕ್ಕೆ ಎಲ್ಲ ವಿಕೆಟ್ ಕಳೆದುಕೊಂಡಾಗ ಲಾಯ್ಡ್ ವಿಜಯದ ನಗೆ ಬೀರಿದರು. ಆದರೆ ಆಸ್ಟ್ರೇಲಿಯಾದ ಕೊನೆಯ ಬ್ಯಾಟ್ಸಮನ್‌ಗಳಾದ ಲಿಲಿ ಹಾಗೂ ಥಾಮ್ಸನ್ ವಿಂಡೀಸ್ ದಾಳಿಯನ್ನು ಚೆನ್ನಾಗಿ ಚಚ್ಚಿ ೨೬,೦೦೦ ಪ್ರೇಕ್ಷಕರನ್ನು ರಂಜಿಸಿದರು. ಗೆಲ್ಲಲು ೮ ಎಸೆತಗಳಲ್ಲಿ ೧೮ ಓಟಗಳು ಬೇಕಾಗಿದ್ದಾಗ ಥಾಮ್ಸನ್ ರನ್ ಔಟ್ ಆಗುವುದರೊಂದಿಗೆ ಕಾಂಗರೂಗಳ ಹೋರಾಟಕ್ಕೆ ತೆರೆಬಿದ್ದಿತು. ಕ್ಲೈವ್ ಲಾಯ್ಡ್ ಪಂದ್ಯ ಪುರುಷ ಪ್ರಶಸ್ತಿಯೊಂದಿಗೆ ಪ್ರುಡೆನ್ಷಿಯಲ್ ಕಪ್ ಎತ್ತಿಕೊಂಡರು.

೧೯೭೯ರ ಪ್ರುಡೆನ್ಷಿಯಾಲ್ ವಿಶ್ವಕಪ್

೧೯೭೯ ಜೂನ್ ೧೪: ಮ್ಯಾಂಚೆಸ್ಟರ್‌ನ ಓಲ್ಡ ಟ್ರಾಫರ್ಡ್ ಮೈದಾನದಲ್ಲಿ ಕೆನಡಾ ವಿರುದ್ಧ ಇಂಗ್ಲೆಂಡಿಗೆ ೮ ವಿಕೆಟ್‌ಗಳ ಸುಲಭ ಜಯ. ಆಟದ ಅವಧಿಯ ದೃಷ್ಟಿಯಿಂದ ಅತಿ ಸಣ್ಣ ಪಂದ್ಯವಿದು.

೨೧೫ ನಿಮಿಷ ನಡೆದ ಈ ಪಂದ್ಯದಲ್ಲಿ ಕೆನಡಾ ೪೫ ಹಾಗೂ ಇಂಗ್ಲೆಂಡ್ ೧೩.೫ ಓವರ್‌ಗಳಲ್ಲಿ ೨ ವಿಕೆಟ್‌ಗೆ ೪೬ ಓಟಗಳಿಸಿತ್ತು. ಒಟ್ಟಾರೆ ಈ ಪಂದ್ಯದಲ್ಲಿ ೯೧ ಓಟಗಳು ಬಂದವು.

೧೯೭೯ ಜೂನ್ ೧೬: ಲೀಡ್ಸ್‌ನಲ್ಲಿ ಪಾಕಿಸ್ತಾನ-ಇಂಗ್ಲೆಂಡ್ ನಡುವೆ ಅತ್ಯಂತ ರೋಮಾಂಚಕ ಪಂದ್ಯ. ಇಂಗ್ಲೆಂಡ್ ಒಂದು ಹಂತದಲ್ಲಿ ೮ ವಿಕೆಟ್‌ಗಳನ್ನು ೧೧೮ ಓಟಗಳಿಗೆ ಕಳೆದುಕೊಂಡು ಕಠಿಣ ಸ್ಥಿತಿಯಲ್ಲಿದ್ದಾಗ ಬಾಬ್‌ವಿಲಿಸ್ (೨೪) ಹಾಗೂ ಬಾಬ್ ಟೇಲರ್ (ಔಟಾಗದೆ ೨೦) ಅವರು ಅನಿರೀಕ್ಷಿತವಾಗಿ ೪೩ ಓಟ ಸೇರಿಸಿ ಇಂಗ್ಲೆಂಡಿನ ಮೊತ್ತ ೧೬೫ ತಲುಪುವಂತೆ ಮಾಡಿದರು. ಮುಂದೆ ಮೈಕ್ ಹೆಂಡ್ರಿಕ್ ೮ ಎಸೆತಗಳಲ್ಲಿ ಪಾಕಿಸ್ತಾನದ ಅಗ್ರಮಾನ್ಯ ಬ್ಯಾಟಿಂಗನ್ನು ಧ್ವಂಸಗೊಳಿಸಿದ ಪರಿಣಾಮವಾಗಿ ಪಾಕಿಸ್ತಾನ ೬ ವಿಕೆಟ್‌ಗಳನ್ನು ೩೪ ಓಟಗಳಿಗೆ ಕಳೆದುಕೊಂಡಿತು. ಆಸಿಫ್ ಇಕ್ಬಾಲ್ (೫೧), ವಾಸಿಮ್ ರಾಜಾ (೨೧), ಇಮ್ರಾನ್ (ಔಟಾಗದೆ ೨೧) ಹಾಗೂ ವಾಸಿಮ್ ಬಾರಿ (೧೭) ಪಾಕಿಸ್ತಾನಕ್ಕೆ ಚೇತರಿಕೆ ನೀಡಿ ಅದನ್ನು ಗೆಲುವಿನ ಸಮೀಪ ತಂದಿದ್ದರು. ಆದರೆ ಸ್ಥಳೀಯ ಹೀರೋ ಬಾಯ್‌ಕಾಟ್ ಕೊನೆಯ ಎರಡು ವಿಕೆಟ್ ಕೆಡವಿ ೧೫೧ಕ್ಕೆ ಪಾಕ್ ಇನಿಂಗ್ಸನ್ನು ಮುಕ್ತಾಯಗೊಳಿಸಿದರು. ಇದರಿಂದಾಗಿ ಸೆಮಿಫೈನಲ್‌ದಲ್ಲಿ ಇಂಗ್ಲೆಂಡ ವಿಂಡೀಸ್ ಬದಲು ನ್ಯೂಜಿಲೆಂಡನ್ನು ಎದುರಿಸುವಂತಾಯಿತು.

೧೯೭೯ ಜೂನ್ ೧೮: ಶ್ರೀಲಂಕಾ ವಿರುದ್ಧ ಓಲ್ಡ್ ಟ್ರಾಫರ್ಡ್ ೬೦ ಓವರ್‌ಗಳಲ್ಲಿ ೨೩೯ ಅಂದರೆ ಓವರಿಗೆ ೩.೯೮ ಓಟಗಳಿಸಬೇಕಾಗಿದ್ದ ಭಾರತ ದುರ್ಬಲ ಬ್ಯಾಟಿಂಗ್‌ನಿಂದಾಗಿ ೧೯೧ ಓಟಗಳಿಗೆ ಕುಸಿದು ಶೋಚನೀಯ ಸೋಲು ಅನುಭವಿಸಿತು.

೧೯೭೯, ಜೂನ್ ೨೦: ಸೆಮಿಫೈನಲ್‌ನಲ್ಲಿ ಇಂಗ್ಲೆಂಡ್ ಕೇವಲ ೯ ಓಟಗಳಿಂದ ಗೆದ್ದಿತು.

ಅದೇ ದಿನ ಲಂಡನ್ನಿನ ಕೆನಿಂಗ್ಟನ್ ಓವಲ್‌ನಲ್ಲಿ ವೆಸ್ಟ್‌ಇಂಡೀಸ್ ಪಾಕಿಸ್ತಾನವನ್ನು ಇನ್ನೊಂದು ಸೆಮಿಫೈನಲ್‌ದಲ್ಲಿ ೪೩ ಓಟಗಳಿಂದ ಸೋಲಿಸಿತು. ವೆಸ್ಟ್‌ಇಂಡೀಸಿನ ೨೯೩ ಓಟಗಳ ಬೆನ್ನಟ್ಟಿದ ಪಾಕಿಸ್ತಾನ ಮಜಿದ್‌ಖಾನ್ (೮೧) ಮತ್ತು ಜಹೀರ ಅಬ್ಬಾಸ್ (೯೩) ಅವರ ನೆರವಿನಿಂದ ಒಂದು ಹಂತದಲ್ಲಿ ೧೭೬ ಓಟಗಳನ್ನು ಒಂದು ವಿಕೆಟ್ ನಷ್ಟಕ್ಕೆ ಗಳಿಸಿದ್ದಾಗ ಪಾಕ್ ಗೆಲುವಿನತ್ತ ಸಾಗಿದ ಲಕ್ಷಣಗಳಿದ್ದವು. ಆದರೆ ಅವರಿಬ್ಬರ ನಿರ್ಗಮನದ ನಂತರ ಪಾಕ್ ದಿಢೀರನೆ ಕುಸಿದು ೨೫೦ಕ್ಕೆ ಆಲ್‌ಔಟ್ ಆಯಿತು.

ಜೂನ್, ೨೩: ರಂದು ಲಾರ್ಡ್ಸ್‌ದಲ್ಲಿ ಇಂಗ್ಲೆಂಡ್ ವಿರುದ್ಧ ಅಂತಿಮ ಪಂದ್ಯದಲ್ಲಿ ವೆಸ್ಟ ಇಂಡೀಸ್ ೯೨ ಓಟಗಳ ಜಯದಿಂದ ಮತ್ತೊಮ್ಮೆ ಪ್ರುಡೆನ್ಷಿಯಲ್ ಕಪ್ ಪಡೆಯಿತು. ವೆಸ್ಟ್‌ಇಂಡೀಸ್‌ನ ಜೋಯಲ್ ಗಾರ್ನರ್ ೧೧ ಎಸೆತಗಳಲ್ಲಿ ೪ ಓಟಗಳನ್ನು ನೀಡಿ ೫ ವಿಕೆಟ್ ಕೆಡವಿದ್ದು ಈ ಪಂದ್ಯದ ವೈಶಿಷ್ಟ್ಯ. ೧೩೮ ಓಟಗಳಿಸಿದ ವಿವಿಯನ್ ರಿಚರ್ಡ್ಸ್ ಪಂದ್ಯಪುರುಷ ಪ್ರಶಸ್ತಿ ಪಡೆದರು.

## ೧೯೮೩ರ ಪ್ರುಡೆನ್ಷಿಯಲ್ ವಿಶ್ವಕಪ್

ಜೂನ್ ೨೨: ಭಾರತದ ಕ್ರಿಕೆಟ್ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡಬೇಕಾದ ಪಂದ್ಯಾವಳಿ. ವೆಸ್ಟ್‌ಇಂಡೀಸ್ ದೈತ್ಯರನ್ನು ೪೩ ಓಟಗಳಿಂದ ಸದೆಬಡಿದು ಪ್ರಥಮ ಬಾರಿಗೆ ವಿಶ್ವಕಪ್ಪನ್ನು ಕಪಿಲದೇವ ನಾಯಕತ್ವದ ಭಾರತದ ತಂಡ ಪಡೆಯಿತು.

ವೆಸ್ಟ್‌ಇಂಡೀಸ್ ಮತ್ತು ಇಂಗ್ಲೆಂಡ್ ಫೈನಲ್ಸ್ ತಲುಪುತ್ತವೆ ಎಂಬ ನಿರೀಕ್ಷೆ ಹುಸಿಯಾಗಿ ಭಾರತ ವೆಸ್ಟ್‌ಇಂಡೀಸ್ ವಿರುದ್ಧ ಅಂತಿಮ ಹಣಾಹಣಿಗೆ ಇಳಿದಿತ್ತು. ಲೀಗ್ ಪಂದ್ಯದಲ್ಲಿ ಜೂನ್ ೧೫ರಂದು ವೆಸ್ಟ್‌ಇಂಡೀಸ್‌ಗೆ ೬೬ ಓಟಗಳಿಂದ ಸೋತಿದ್ದ ಭಾರತ ಫೈನಲ್ಸ್‌ದಲ್ಲಿ ೪೩ ಓಟಗಳಿಂದ ಗೆದ್ದು ಸೇಡು ತೀರಿಸಿಕೊಳ್ಳುವುದರೊಂದಿಗೆ ವಿಶ್ವ ಚಾಂಪಿಯನ್ ಪಟ್ಟಕ್ಕೇರಿತು.

ಸೆಮಿ ಫೈನಲ್‌ದಲ್ಲಿ ಪಾಕಿಸ್ತಾನವನ್ನು ಸುಲಭವಾಗಿ ೮ ವಿಕೆಟ್‌ಗಳಿಂದ ಸೋಲಿಸಿ ವಿಂಡೀಸ್ ಫೈನಲ್ಸ್ ತಲುಪಿತ್ತು. ಭಾರತ ಫೈನಲ್ಸ್ ತಲುಪಿದ್ದರೂ ಅದು ವಿಂಡೀಸ್‌ಗೆ ಪ್ರಬಲ ಸವಾಲು ಎಸೆಯಬಹುದೆಂದು ಕ್ರಿಕೆಟ್ ಪಂಡಿತರು ಭಾವಿಸಿರಲಿಲ್ಲ. ಭಾರತದ ಕ್ರಿಕೆಟ್ ಪ್ರೇಮಿಗಳು ಮಾತ್ರ ತಮ್ಮ ತಂಡ ಗೆಲ್ಲಬೇಕೆಂದು ಮನದಾಳದಲ್ಲಿಯೇ

ಆಸೆಪಟ್ಟಿದ್ದರು.

೧೮೩ ಓಟಗಳಿಗೆ ಭಾರತದ ಇನಿಂಗ್ಸ್ ಮುಕ್ತಾಯಗೊಂಡಾಗ ಈ ಮೊತ್ತ ವಿಂಡೀಸ್‌ಗೆ ಸುಲಭದ ತುತ್ತೆಂದು ಎಲ್ಲರೂ ಭಾವಿಸಿದ್ದರು. ಆದರೆ ಆಲ್‌ರೌಂಡರ್ ಮಹಿಂದರ್ ಅಮರನಾಥ ಅಪದ್ಬಾಂಧವನಂತೆ ೭ ಓವರಗಳಲ್ಲಿ ೧೨ ಓಟ ನೀಡಿ ೩ ವಿಕೆಟ್‌ಗಳನ್ನು ಪಡೆಯುವುದರೊಂದಿಗೆ ವಿಂಡೀಸ್‌ನ ಹ್ಯಾಟ್ರಿಕ್ ಆಸೆಯನ್ನು ಮಣ್ಣುಪಾಲು ಮಾ. ಭಾರತದ ಕೀರ್ತಿ ಪತಾಕೆ ಹಾರಿಸಿದರು. ಇದಕ್ಕೂ ಮುನ್ನ ಮದನಲಾಲ ೩, ರೋಜರ್ ಬಿನ್ನಿ ಹಾಗೂ ಬಲ್‌ವಿಂದರ್ ಸಿಂಗ್ ಸಂಧು ತಲಾ ಎರಡು ವಿಕೆಟ್ ಕಿದವಿ ವೆಸ್ಟ್ ಇಂಡೀಸ್‌ನ



ವಿಶ್ವಕಪ್‌ನೊಂದಿಗೆ ಕಪಿಲ್

ಮುನ್ನಡೆಗೆ ಕೊಡಲಿ ಏಟು ಹಾಕಿದ್ದರು. ಈ ಪಂದ್ಯಾವಳಿಯಲ್ಲಿ ಭಾರತ ಸೆಮಿಫೈನಲ್‌ದಲ್ಲಿ ಇಂಗ್ಲೆಂಡನ್ನು ೬ ವಿಕೆಟ್‌ಗಳಿಂದ ಸೋಲಿಸಿ ಲೀಗ್ ಪಂದ್ಯಗಳಲ್ಲಿ ಆಸ್ಟ್ರೇಲಿಯಾವನ್ನು ೧೧೮ ಓಟಗಳಿಂದ, ವೆಸ್ಟ್‌ಇಂಡೀಸ್‌ನ್ನು ೩೪ ಓಟಗಳಿಂದ ಜಿಂಬಾಬ್ವೆಯನ್ನು ೧೩೧ ಓಟಗಳಿಂದ ಸೋಲಿಸಿತು. ಆದರೆ ಆಸ್ಟ್ರೇಲಿಯಾ ಇನ್ನೊಂದು ಲೀಗ್ ಪಂದ್ಯದಲ್ಲಿ ಭಾರತವನ್ನು ೧೬೨ ಓಟಗಳಿಂದ ಹಣಿದಿತ್ತು.

ಜಿಂಬಾಬ್ವೆ ವಿರುದ್ಧದ ಹೋರಾಟ ಭಾರತ[illegible]ಲಿಗೆ ಪುನರುಜನ್ಮ ನೀಡಿದ ಅವಿಸ್ಮರಣೀಯ [illegible] ಎಂದೇ ಹೇಳಬಹುದು. ಬಹುತೇಕ ಸೋಲುವ ಸ್ಥಿತಿಯಲ್ಲಿದ್ದ ಭಾರತಕ್ಕೆ ಆಪದ್ಬಾಂಧವರಂತೆ ಅವತರಿಸಿದ ಕಪಿಲ್‌ದೇವ್ ಅಜೇಯ ೧೭೫ ಓಟ ಗಳಿಸಿ ತಂಡಕ್ಕೆ ಅಭೂತಪೂರ್ವ ಜಯ ತಂದುಕೊಟ್ಟು ಅಂತಿಮ ಪಂದ್ಯಕ್ಕೆ ರಹದಾರಿ ಒದಗಿಸಿಕೊಟ್ಟರು.

## ೧೯೮೭ರ ರಿಲಾಯನ್ಸ್ ವಿಶ್ವಕಪ್

ಭಾರತ ಹಾಗೂ ಪಾಕಿಸ್ತಾನ ಜಂಟಿಯಾಗಿ ಸಂಘಟಿಸಿದ್ದ ಈ ಪಂದ್ಯಾವಳಿಯ ಫೈನಲ್ಸ್‌ದಲ್ಲಿ ಆತಿಥೇಯ ತಂಡಗಳೇ ಎದುರಾಳಿಗಳಾಗುತ್ತವೆ ಎಂದು ನಿರೀಕ್ಷಿಸಲಾಗಿತ್ತು. ಆದರೆ ಆಸ್ಟ್ರೇಲಿಯಾ ಮತ್ತು ಇಂಗ್ಲೆಂಡ್ ಫೈನಲ್ಸ್ ತಲುಪಿ ಆಸ್ಟ್ರೇಲಿಯಾ ರಿಲಾಯನ್ಸ್ ಕಪ್‌ನೊಂದಿಗೆ ಸ್ವದೇಶಕ್ಕೆ ಮರಳಿತು.

ಶ್ರೀಲಂಕಾ ಪಾಕಿಸ್ತಾನಕ್ಕೆ ೧೫ ಓಟಗಳಿಂದ ಸೋತರೂ ಪಾಕಿಸ್ತಾನಕ್ಕೆ ನಡುಕ ಹುಟ್ಟಿಸಿತು. ಆದರೆ ಅತ್ಯಂತ ರೋಮಾಂಚಕ ಪಂದ್ಯವೆಂದರೆ ಭಾರತ ಹಾಗೂ ಆಸ್ಟ್ರೇಲಿಯಾದ್ದು.

೧೯೮೭, ಅಕ್ಟೋಬರ್ ೯: ಮದ್ರಾಸಿನ ಚಿದಂಬರಂ ಸ್ಟೇಡಿಯಂ ಭಾರತದ ವಿರುದ್ಧ ಆಸ್ಟ್ರೇಲಿಯಾಕ್ಕೆ ಕೇವಲ ಒಂದೇ ಓಟದ ವಿಜಯ. ಆಸ್ಟ್ರೇಲಿಯಾ ಮೊದಲು ಬ್ಯಾಟಿಂಗ್ ಮಾಡಿ ಜೆಫ್‌ಮಾರ್ಷ ಅವರ ಶತಕದ ನೆರವಿನಿಂದ ೫೦ ಓಟಗಳಲ್ಲಿ ೬ ವಿಕೆಟ್‌ಗಳಿಗೆ ೨೭೦ ಓಟಗಳಿಸಿತ್ತು.

ಗಾವಸ್ಕರ್ (೩೭) ಮತ್ತು ಶ್ರೀಕಾಂತ (೭೦) ಭಾರತಕ್ಕೆ ಉತ್ತಮ ಆರಂಭ ಒದಗಿಸಿ ಮೊದಲ ವಿಕೆಟ್ ಪಾಲುಗಾರಿಕೆಯಲ್ಲಿ ೬೯ ಓಟ ಸೇರಿಸಿದ್ದರು. ನಂತರ ಸಿಧು ೭೩ ಓಟಬಾರಿಸಿ ಮತ್ತಷ್ಟು ಚೈತನ್ಯ ನೀಡಿದರು. ಈ ಮೂವರು ಔಟಾದ ಮೇಲೆ ಭಾರತದ ಮಧ್ಯ ಕ್ರಮಾಂಕ ದಿಢೀರನೆ ಕುಸಿದು ಭಾರತ ಸುಲಭವಾಗಿ ಗೆಲ್ಲಬಹುದಾಗಿದ್ದ ಪಂದ್ಯವನ್ನು ಕಠಿಣವಾಗಿಸಿಕೊಂಡಿತು.

ಕೊನೆಯ ೬ ಎಸೆತಗಳಲ್ಲಿ ಭಾರತಕ್ಕೆ ಗೆಲ್ಲಲು ೬ ಓಟಗಳು ಬೇಕಾಗಿದ್ದವು. ಕೊನೆಯ ಜೋಡಿ ಮಣಿಂದರ್ ಸಿಂಗ್ ಮತ್ತು ಕಿರಣ ಮೋರೆ ಕ್ರೀಜ್ ಬಳಿ ಇದ್ದರು. ಸ್ಟೀವ್ ವಾ ಬೌಲರ್. ಕೊನೆಯ ೨ ಎಸೆತಗಳಲ್ಲಿ ಗೆಲ್ಲಲು ಬೇಕಾದದ್ದು ೨ ಓಟಗಳು. ನೇರವಾಗಿ ಬಂದ ಚೆಂಡನ್ನು ಹೊಡೆಯಲು ಯತ್ನಿಸಿದ ಮಣಿಂದರಸಿಂಗ್ ಗುರಿತಪ್ಪಿ ಚೆಂಡು ಸ್ಟಂಪ್ ಉರುಳಿಸಿದಾಗ ಇನ್ನೂ ಒಂದು ಎಸೆತ ಇರುವಂತೆ ಒಂದು ಓಟದಿಂದ ಆಸ್ಟ್ರೇಲಿಯಾ [illegible]

ಅಕ್ಟೋಬರ್ ೧೦, ೧೯೮೭: ಹೈದರಾಬಾದ್‌ನಲ್ಲಿ ನ್ಯೂಜಿಲೆಂಡ್ ಮತ್ತೊಂದು ರೋಮಾಂಚಕಾರಿ ಪಂದ್ಯದಲ್ಲಿ ಜಿಂಬಾಬ್ವೆಯನ್ನು ಕೇವಲ ೩ ಓಟಗಳ ಅಂತರದಿಂದ ಸೋಲಿಸಿತು. ನ್ಯೂಜಿಲೆಂಡ್ ೨೪೨ ಓಟಗಳಿಸಿದ ನಂತರ ಜಿಂಬಾಬ್ವೆಯ ಡೇನ್ ಹಾಟನ್ ೧೪೧ ಓಟ ಬಾರಿಸಿ ಜಿಂಬಾಬ್ವೆಗೆ ಬಲ ನೀಡಿದರು. ಬುಚರ್ಟ (೫೪) ಬಿಟ್ಟರೆ ಉಳಿದವರಿಂದ ಬೆಂಬಲ ಸಿಗದೇ ಜಿಂಬಾಬ್ವೆ ಸೋಲು ಅನುಭವಿಸಿತು. ಕೊನೆಯ ೪ ಎಸೆತಗಳಲ್ಲಿ ಗೆಲ್ಲಲು ೪ ಓಟಗಳು ಜಿಂಬಾಬ್ವೆಗೆ ಬೇಕಾಗಿದ್ದವು. ೪ನೇಯ ಎಸೆತದಲ್ಲಿ ಬುಚರ್ಟ್ ರನ್‌ಔಟ್ ಆದಾಗ ನ್ಯೂಜಿಲೆಂಡ್ ಇನ್ನೂ ೩ ಎಸೆತಗಳು ಇರುವಂತೆ ೩ ಓಟಗಳ ಜಯ ಸಾಧಿಸಿತು.

ಅಕ್ಟೋಬರ್ ೧೬: ಈ ಸರಣಿಯ ಮತ್ತೊಂದು ರೋಮಾಂಚಕಾರಿ ಪಂದ್ಯ ನಡೆದದ್ದು ಲಾಹೋರ್‌ನಲ್ಲಿ. ಪಾಕಿಸ್ತಾನಕ್ಕೆ ವೆಸ್ಟ್‌ಇಂಡೀಜ್ ವಿರುದ್ಧ ಕೊನೆಯ ಎಸೆತದಲ್ಲಿ ೧ ವಿಕೆಟ್‌ನ ಜಯ ಲಭಿಸಿತು.

ವೆಸ್ಟ ಇಂಡೀಸ್- ೨೧೬ ಓಟಗಳಿಸಿದ ನಂತರ ಪಾಕಿಸ್ತಾನ ರಮೀಜ್ ರಾಜಾ (೪೨), ಜಾವೇದ್ ಮಿಯಾಂದಾದ (೩೩) ಹಾಗೂ ಸಲೀಮ

## ಈ ಸಲ....

೧೯೯೬ರ ವಿಶ್ವಕಪ್ ಕ್ರಿಕೆಟ್ ಪಂದ್ಯಾವಳಿಗೆ ವಿಲ್ಸ್ ಕಂಪನಿ ಪ್ರಾಯೋಜಕತ್ವ ನೀಡಿದ್ದು ಭಾರತ, ಶ್ರೀಲಂಕಾ ಮತ್ತು ಪಾಕಿಸ್ತಾನ ಸಂಯುಕ್ತವಾಗಿ ಈ ಪ್ರತಿಷ್ಠಿತ ಪಂದ್ಯಾವಳಿಗೆ ಆತಿಥ್ಯ ನೀಡುತ್ತಿವೆ. ಮೂರೂ ರಾಷ್ಟ್ರಗಳನ್ನು ಒಳಗೊಂಡ ಸಂಘಟನಾ ಸಮಿತಿ 'ಪಿಲ್‌ಕಾಮ್' ರಚಿಸಲಾಗಿದ್ದು ಒಟ್ಟು ೨೯ ಪ್ರಾಥಮಿಕ ಲೀಗ್ ಪಂದ್ಯಗಳು, ೪ ಕ್ವಾರ್ಟರ್ ಫೈನಲ್ಸ್, ೨ ಸೆಮಿ ಫೈನಲ್ಸ್ ಹಾಗೂ ಒಂದು ಫೈನಲ್ಸ್ ಸೇರಿ ೩೬ ಪಂದ್ಯಗಳು ಭಾರತ, ಶ್ರೀಲಂಕಾ ಹಾಗೂ ಪಾಕಿಸ್ತಾನಗಳಲ್ಲಿ ನಡೆಯಲಿದ್ದು ೧೯೯೬ರ ಫೆಬ್ರುವರಿ ೧೪ ರಿಂದ ಮಾರ್ಚ್ ೧೭ರ ವರೆಗೆ ಜಗತ್ತಿನಾದ್ಯಂತ ಕ್ರಿಕೆಟ್ ಪ್ರೇಮಿಗಳನ್ನು ರಂಜಿಸಲಿವೆ.

ರೋಮಾಂಚನಗೊಳಿಸುವ, ಪ್ರೇಕ್ಷಕರನ್ನು ತುದಿಗಾಲ ಮೇಲೆ ನಿಲ್ಲಿಸಿ ಹುಚ್ಚೆಬ್ಬಿಸುವ ಈ ಪಂದ್ಯಾವಳಿಯಲ್ಲಿ ೧೨ ತಂಡಗಳನ್ನು 'ಎ' ಮತ್ತು 'ಬಿ' ಗುಂಪುಗಳಲ್ಲಿ ವಿಭಜಿಸಲಾಗಿದೆ. ಭಾರತ 'ಎ' ಗುಂಪಿನಲ್ಲಿ ಹಾಗೂ ಅದರ ಸಾಂಪ್ರದಾಯಿಕ ಎದುರಾಳಿ ಪಾಕಿಸ್ತಾನ 'ಬಿ' ಗುಂಪಿನಲ್ಲಿ ಸೇರಿವೆ. 'ಎ' ಗುಂಪಿನಲ್ಲಿ ಭಾರತ, ಶ್ರೀಲಂಕಾ, ವೆಸ್ಟ್‌ಇಂಡೀಸ್, ಆಸ್ಟ್ರೇಲಿಯಾ, ಜಿಂಬಾಬ್ವೆ, ಹಾಗೂ ಕೀನ್ಯಾ ಇದ್ದು 'ಬಿ' ಗುಂಪಿನಲ್ಲಿ ಪಾಕಿಸ್ತಾನ, ಇಂಗ್ಲೆಂಡ್, ದಕ್ಷಿಣ ಆಫ್ರಿಕಾ, ನೂಜಿಲೆಂಡ್, ಯು.ಎ.ಇ (ಸಂಯುಕ್ತ ಅರಬ್ ಎಮಿರೆಟ್ಸ್) ಹಾಗೂ ಹಾಲೆಂಡ್ ಸ್ಪರ್ಧೆಯಾಗಿವೆ.

ಫೆಬ್ರುವರಿ ೧೪ ರಿಂದ ಮಾರ್ಚ್ ೬ರವರೆಗೆ ಪ್ರಾಥಮಿಕ ಹಂತದ ಲೀಗ್ ಪಂದ್ಯಗಳು ನಡೆಯಲಿದ್ದು ಮಾರ್ಚ್ ೯ ಹಾಗೂ ೧೧ ರಂದು ಕ್ವಾರ್ಟರ್ ಫೈನಲ್ಸ್, ಮಾರ್ಚ್ ೧೩ ಹಾಗೂ ೧೪ ರಂದು ಸೆಮಿಫೈನಲ್ಸ್ ಮತ್ತು ಮಾರ್ಚ್ ೧೭ ರಂದು ಫೈನಲ್ಸ್ ನಡೆಯಲಿವೆ.

ಯೂಸುಫ (೫೬) ಅವರ ಹೋರಾಟದ ಫಲವಾಗಿ ಗೆಲುವಿನ ಗುರಿ ಮುಟ್ಟಲು ಹೆಣಗುತ್ತಿತ್ತು. ಕೊನೆಯ ಓವರ್‌ನಲ್ಲಿ ವಾಲ್ಶ್ ೧೪ ಓಟಗಳನ್ನು ಕಾದೀರ್ ಹಾಗೂ ಜಾಫರ್‌ಗೆ ನೀಡಿದ್ದು ತುಟ್ಟಿಯಾಯಿತು. ಇದಲ್ಲದೆ ಎಲ್ಡಿನ್ ಬ್ಯಾಪ್ಟಿಸ್ಟ್ ಅವರ ದಾಳಿಯಲ್ಲಿ ಸತತ ೩ ಎಸೆತಗಳಲ್ಲಿ ಸಲೀಮ್ ಯೂಸೂಫ್ ನೀಡಿದ ಕ್ಯಾಚುಗಳು ನೆಲಸಮವಾಗಿದ್ದವು. ವಾಲ್ಶ್ ಕೊನೆಯ ಎಸೆತದಲ್ಲಿ ಬೌಲರ್ ತುದಿಯಲ್ಲಿದ್ದ ಸಲೀಮ್ ಜಾಫರ್ ಅವರನ್ನು ರನ್‌ಔಟ್ ಮಾಡಬಹುದಿತ್ತು. ಆದರೆ ಕ್ರೀಡಾ ಮನೋಭಾವನೆಗೆ ಮಹತ್ವ ನೀಡಿದ ವಾಲ್ಷ್ ಹಾಗೇ ಮಾಡಲಿಲ್ಲ. ವೆಸ್ಟ್ ಇಂಡೀಸ್ ಪಂದ್ಯ ಸೋತು ಸೆಮಿಫೈನಲ್‌ಗೆ ಅನರ್ಹವಾದರೂ ವಾಲ್ಶ್ ಜನಮನಗೆದ್ದರು.

ಅಕ್ಟೋಬರ್ ೧೯: ಇಂದೂರಿನಲ್ಲಿ ನ್ಯೂಜಿಲೆಂಡ್ ವಿರುದ್ಧ ಆಸ್ಟ್ರೇಲಿಯಾಕ್ಕೆ ೩ ಓಟಗಳ ಜಯ.

ನವೆಂಬರ್ ೮: ಕಲ್ಕತ್ತಾದ ಬೃಹತ್ ಈಡನ್ ಗಾರ್ಡನ್ಸ್ ಮೈದಾನದಲ್ಲಿ ಆಸ್ಟ್ರೇಲಿಯಾ ಹಾಗೂ ಇಂಗ್ಲೆಂಡ್ ನಡುವೆ ಫೈನಲ್ಸ್. ಪಾಕಿಸ್ತಾನ ಮತ್ತು ಭಾರತವನ್ನು ಅಂತಿಮ ಪಂದ್ಯದಲ್ಲಿ ನಿರೀಕ್ಷಿಸಿದ್ದ ದಾಖಲೆ ಸಂಖ್ಯೆಯ ೮೫,೦೦೦ ಕ್ರಿಕೆಟ್ ಪ್ರೇಮಿಗಳಿಗೆ ಆಗಿದ್ದ ನಿರಾಶೆಯನ್ನು ಆಸ್ಟ್ರೇಲಿಯಾ ಇಂಗ್ಲೆಂಡ್ ನಡುವಿನ ರೋಮಾಂಚಕ ಫೈನಲ್ಸ್ ಶಮನಗೊಳಿಸಿತು.

ಈ ಹಿಂದೆ ವಿಶ್ವ ಕಪ್ ಫೈನಲ್ಸ್‌ದಲ್ಲಿ ಎರಡನೆಯದಾಗಿ ಬ್ಯಾಟಿಂಗ್ ಮಾಡಿದ ಯಾವ ತಂಡವೂ ಗೆದ್ದಿರಲಿಲ್ಲ. ಆಸ್ಟ್ರೇಲಿಯಾದ ಬಾರ್ಡರ್ ನಾಯಕತ್ವದ ಕಾಂಗ್ರೂ ಟಾಸ್ ಗೆದ್ದು ಮೊದಲು ಬ್ಯಾಟಿಂಗ್ ಮಾಡಿ ೫೦ ಓವರ್‌ಗಳಲ್ಲಿ ೫ ವಿಕೆಟ್‌ಗಳಿಗೆ ೨೫೩ ಓಟಗಳನ್ನು ಗಳಿಸಿತ್ತು.

ಇಂಗ್ಲೆಂಡ್ ಆರಂಭದಲ್ಲಿ ಕುಸಿದರೂ ಆಥೆ (೫೮) ಗ್ಯಾಟಿಂಗ್ (೪೧) ಮತ್ತು ಲ್ಯಾಂಬ್ (೪೫), ತಮ್ಮ ತಂಡಕ್ಕೆ ಚೈತನ್ಯ ನೀಡಿದ್ದರು.

ಗ್ಯಾಟಿಂಗ್ ಒಂದು ಬೇಜವಾಬ್ದಾರಿ ಹೊಡೆತಕ್ಕೆ ಯತ್ನಿಸಿ ಔಟಾಗುವುದರೊಂದಿಗೆ ಇಂಗ್ಲೆಂಡಿನ ಹೋರಾಟ ಉಡುಗಿತು. ಕೊನೆಯ ೧೦ ಓವರ್‌ಗಳಲ್ಲಿ ೭೫ ಓಟ ಗಳಿಸಬೇಕಾಗಿದ್ದ ಇಂಗ್ಲೆಂಡ್

ಇನ್ನೂ ೭ ಓಟಗಳು ಬಾಕಿ ಇರುವಾಗ ಎಲ್ಲ ವಿಕೆಟ್ ಕಳೆದುಕೊಂಡಿತು.

ರೋಮಾಂಚಕಾರಿ ಗೆಲುವಿನ ರುಚಿ ಕಂಡ ಆಸ್ಟ್ರೇಲಿಯ ಪ್ರತಿಷ್ಠಿತ ರಿಲಯನ್ಸ್ ಕಪ್‌ನ್ನು ತನ್ನ ಮಡಿಲ್ಗಿಗೆ ಹಾಕಿಕೊಂಡಿತು.

## ೧೯೯೨ರ ವಿಶ್ವಕಪ್ ಕ್ರಿಕೆಟ್

ಫೆಬ್ರುವರಿ ೨೩, ೧೯೯೨: ನ್ಯೂ ಪ್ಲೈಮೌಥ್‌ದಲ್ಲಿ ಜಿಂಬಾಬ್ವೆ ವಿರುದ್ಧ ಶ್ರೀಲಂಕಾಕ್ಕೆ ಇನ್ನು ಕೇವಲ ೪ ಎಸೆತಗಳು ಬಾಕಿ ಇರುವಾಗ ೩ ವಿಕೆಟ್‌ಗಳ ಜಯ. ಶ್ರೀಲಂಕಾ ನಾಯಕ ಅರವಿಂದ್ ಡಿಸಿಲ್ವಾ ಟಾಸ್ ಗೆದ್ದು ಜಿಂಬಾಬ್ವೆಯನ್ನು ಬ್ಯಾಟಿಂಗ್‌ಗೆ ಆಮಂತ್ರಿಸಿದಾಗ ಜಿಂಬಾಬ್ವೆ ೫೦ ಓವರ್‌ಗಳಲ್ಲಿ ೪ ವಿಕೆಟ್‌ನಷ್ಟಕ್ಕೆ ೩೧೨ ಓಟ ಸಂಗ್ರಹಿಸಿತು. ಶತಕ ಬಾರಿಸಿದ ಆ್ಯಂಡಿ ಫ್ಲಾವರ್ (೧೧೫) ಹಾಗೂ ಕೆವಿನ್ ಆರ್ನಾಟ್ (೫೨) ೪ನೇ ವಿಕೆಟ್ ಪಾಲುಗಾರಿಕೆಯಲ್ಲಿ ೮೫ ಓಟ ಸೇರಿಸಿದರೆ ಫ್ಲಾವರ್ ಹಾಗೂ ಆ್ಯಂಡಿವಾಲರ್ (೮೩) ಐದನೇ ವಿಕೆಟ್‌ಗೆ ೧೪೫ ಓಟ ಕೂಡಿ ಹಾಕಿದರು.

ಓವರ್‌ಗೆ ಸರಾಸರಿ ೬.೨೫ ಓಟ ಗಳಿಸಬೇಕಾಗಿದ್ದ ಶ್ರೀಲಂಕಾ ಗೆಲುವಿನ ಗುರಿಯನ್ನು ಇನ್ನು ೪ ಎಸೆತ ಹಾಗೂ ೩ ವಿಕೆಟ್ ಇರುವಾಗ [illegible].

ಸಮರ ಶೇಖರ ೩೩ ಎಸೆತಗಳಲ್ಲಿ ಅರ್ಧಶತಕ ಪೂರೈಸಿ ಒಟ್ಟು ೭೫ ಓಟ ಬಾರಿಸಿದರೆ ಮಹಾನಾಮಾ ೫೯ ಓಟ ಗಳಿಸಿದರು. ತಮ್ಮ ೧೦೦ನೇ ಪಂದ್ಯ ಆಡುತ್ತಿದ್ದ ಅರ್ಜುನ ರಣತುಂಗ ೬೨ ಎಸೆತಗಳಲ್ಲಿ ೮೮ ಓಟ ಹೊಡೆದರು.

ಮಾರ್ಚ್ ೧, ೧೯೯೨: ಬ್ರಿಸ್ಬೇನ್‌ದಲ್ಲಿ ಆಸ್ಟ್ರೇಲಿಯಾಕ್ಕೆ ಭಾರತದ ವಿರುದ್ಧ ಒಂದು ಓಟದ ವಿಜಯ.

ಆಸ್ಟ್ರೇಲಿಯಾ ಮೊದಲು ಆಡಿ ೫೦ ಓವರ್‌ಗಳಲ್ಲಿ ೨೩೭ ಓಟಗಳಿಸಿತು. ಡೆವಿಡ್ ಬೂನ್ ಹಾಗೂ ಡೀನ್ ಜೋನ್ಸ್ ೩ನೇ ವಿಕೆಟ್‌ಗೆ ೯೦ ಓಟ ಸೇರಿಸಿದ್ದರು. ಇದಕ್ಕೂ ಮುನ್ನ ಕಪಿಲ್‌ದೇವ ಎರ[illegible] ವಿಕೆಟ್‌ಗಳನ್ನು ಬಲಿಪಡೆದಿದ್ದರು.

ಜೋ[illegible]ನ್ಸ್ ಆರು ಬೌಂಡರಿ ಮತ್ತು ಎರಡು ಸಿಕ್ಸರ್ [illegible]ತ ೯೦ ಓಟ ಗಳಿಸಿದರು.

ಮಳೆಯಿಂದಾಗಿ ಭಾರತದ ಗೆಲುವಿನ ಗುರಿಯನ್ನು ೪೭ ಓವರ್‌ಗಳಲ್ಲಿ ೨೩೫ ಓಟಗಳಿಗೆ ನಿಗದಿಪಡಿಸಲಾಯಿತು.

ಕೆ. ಶ್ರೀಕಾಂತ ಒಂದೂ ಓಟ ಗಳಿಸದೇ ನಿರ್ಗಮಿಸಿದ ನಂತರ ಅಜರುದ್ದೀನ್ ೯೩ ಓಟ ಗಳಿಸಿ ಸ್ಕೋರ್ ೧೯೫ ಆದಾಗ ರನೌಟ್ ಆದರು. ಸಂಜಯ ಮಾಂಜ್ರೇಕರ್ ೪೭ ಎಸೆತಗಳಲ್ಲಿ ೪೭ ಓಟ ಬಾರಿಸಿ ಔಟಾದಾಗ ಭಾರತದ ಸ್ಕೋರ್ ೨೧೬. ರವಿಶಾಸ್ತ್ರೀ ೨೫ ಓಟ ಗಳಿಸಿದರೂ ಭಾರತ ಗೆಲುವಿನ ಗುರಿ ತಲುಪಲಾರದೇ ಒಂದು ಓಟದಿಂದ ಸೋಲು ಅನುಭವಿಸಿತು.

ಲೀಗ್‌ನಲ್ಲಿ ಎಲ್ಲ ಪಂದ್ಯಗಳನ್ನು ಸುಲಭವಾಗಿ ಗೆದ್ದಿದ್ದ ನ್ಯೂಝಿಲ್ಯಾಂಡ್ ಸೆಮಿಫೈನಲ್‌ನಲ್ಲಿ ಪಾಕಿಸ್ತಾನಕ್ಕೆ ಸೋತು ಆಘಾತ ಅನುಭವಿಸಿತು.

ಸೆಮಿಫೈನಲ್‌ಗೆ ಅನಿರೀಕ್ಷಿತವಾಗಿ ತಲುಪಿದ್ದ ಪಾಕಿಸ್ತಾನ ಫೈನಲ್ಸ್‌ನ್ನು ತಲುಪಿ ಇಂಗ್ಲೆಂಡ್ ವಿರುದ್ಧ ಮೆಲ್ಬೋರ್ನ್‌ದಲ್ಲಿ ರೋಮಾಂಚಕ ೨೨

ಮುಂಬರುವ
ವಿಶ್ವಕಪ್ ಕ್ರಿಕೆಟ್
ಪಂದ್ಯಾವಳಿಯ
ಲಾಂಛನ

WILLS
WORLD CUP
1996

ಓಟಗಳ ಜಯ ಸಾಧಿಸಿ ವಿಶ್ವ ಚಾಂಪಿಯನ್ ಪಟ್ಟಕ್ಕೇರಿತು.

ಇಮ್ರಾನ್‌ಖಾನ್ ನೇತೃತ್ವದ ಪಾಕ್ ತಂಡ ಮೊದಲು ಬ್ಯಾಟಿಂಗ್ ಮಾಡಿ 'ಇಂಜಮಾಮ ಉಲ್‌ಹಕ್ ಅವರ ತ್ವರಿತ ಗತಿಯ ೪೨ ಓಟಗಳಲ್ಲದೆ ಇಮ್ರಾನ್ (೭೦), ಜಾವೇದ್ ಮಿಯಾಂದಾದ್ (೫೮), ವಾಸೀಮ್ ಅಕ್ರಮ್ (೩೩), ಅವರ ನೆರವಿನಿಂದ ೫೦ ಓವರ್‌ಗಳಲ್ಲಿ ೬ ವಿಕೆಟ್ ನಷ್ಟಕ್ಕೆ ೨೪೯ ಓಟಗಳಿಸಿತ್ತು.

ವಾಸೀಮ್ ಅಕ್ರಮ್ ಅವರ (೪೯ ಕ್ಕೆ ೩) ಮತ್ತು ಮುಸ್ತಾಕ (೪೧ಕ್ಕೆ ೩) ಅವರ ದಾಳಿಗೆ ಬೆದರಿದ ಇಂಗ್ಲೆಂಡ್ ೨೨೭ ಓಟಗಳಿಗೆ ೪೯.೨ ಓವರ್‌ಗಳಲ್ಲಿ ಎಲ್ಲ ವಿಕೆಟ್ ಕಳೆದುಕೊಂಡಿತು.

ಫೇರ್ ಬ್ರದರ್ (೬೨), ಲ್ಯಾಂಬ್ (೩೧), ಗೂಚ (೨೯), ಅವರ ಪ್ರಯತ್ನಕ್ಕೆ ಫಲ ನೀಡಲಿಲ್ಲ. ವಾಸೀಮ್ ಅಕ್ರಮ್ ಪಂದ್ಯ ಪುರುಷ ಪ್ರಶಸ್ತಿ ಪಡೆದರು.

ಒಂದು ದಿನದ ಪಂದ್ಯಗಳು ಇರುವದೇ ರೋಚಕ ಆಟ ನೀಡುವದಕ್ಕೆ ಎಂಬಂತೆ ಈಗ ಮತ್ತೆ ವಿಶ್ವಕಪ್ ನಡೆಯುವ ಸಮಯ ಬಂದಿದೆ. ಮೂರು ರಾಷ್ಟ್ರಗಳು ಸಂಘಟಿಸಿರುವ ಈ ಪಂದ್ಯಾವಳಿಯಲ್ಲಿ ಈ ಬಾರಿ ೧೨ ತಂಡಗಳು ಪಾಲ್ಗೊಳ್ಳಲಿದ್ದು ಪ್ರಶಸ್ತಿಯ ಕಿರೀಟ ಯಾರ ಮಡಿಲಿಗೆ ಬೀಳಬಹುದು ಎಂಬ ಕುತೂಹಲಕ್ಕೆ ಬರಲಿರುವ ಪಂದ್ಯಗಳು ಉತ್ತರ ಹೇಳಲಿವೆ. ●



ಆಸ್ಟ್ರೇಲೇಶಿಯಾ ಕಪ್ ಗೆಲಿಸಿದ ಸಂತಸದಲ್ಲಿ ಪಾಕ್ ತಂಡ

# ಆರೋಗ್ಯಕ್ಕೆ ಬೆಳ್ಳುಳ್ಳಿ

ಬೆಳ್ಳುಳ್ಳಿ ಕೆಲವರಿಗೆ ನಿಷಿದ್ಧ. ಅದರ ವಾಸನೆ ಅವರಿಗಾಗುವುದಿಲ್ಲ. ಕೆಲವರಿಗೆ ಇಂಗು ಇಷ್ಟವಾಗದ ಹಾಗೆ ಕೆಲವರಿಗೆ ಬೆಳ್ಳುಳ್ಳಿ. ಅಂತಹ ಜನ, ದಿನಕ್ಕೊಂದು ಸೇಬು ತಿಂದರೆ ವೈದ್ಯರಿಂದ ದೂರವಿರಬಹುದೆಂಬ ಇಂಗ್ಲಿಷ್ ಗಾದೆಯನ್ನು ಮಾರ್ಪಡಿಸಿ, ಬೆಳ್ಳುಳ್ಳಿ ತಿಂದರೆ ಎಲ್ಲರಿಂದಲೂ ದೂರವಿರಬಹುದು ಎನ್ನುತ್ತಾರೆ. ಹೀಗೆ, ಕೆಲವರಿಗೆ ವರ್ಜಿತವಾಗಿರುವ, 'ಗಬ್ಬುವಾಸನೆ'ಯ ಬೆಳ್ಳುಳ್ಳಿಗೆ, ಒಳ್ಳೆಯ ಗುಣಗಳೂ ಇವೆ ಎಂದರೆ ನಂಬುತ್ತೀರಾ?

ಅಡುಗೆಯ ರುಚಿ, ವ್ಯಂಜನಗಳ ಘಮ ಹೆಚ್ಚಿಸುವ ಬೆಳ್ಳುಳ್ಳಿಯ ಗುಣಕ್ಕಿಂತ ರೋಗಗಳನ್ನು ವಾಸಿಮಾಡುವ, ಆರೋಗ್ಯವನ್ನು ವೃದ್ಧಿಸುವ ಅದರ ಗುಣಕ್ಕೆ ಮಾರು ಹೋದವರೇ ಹೆಚ್ಚು. ಜನ ಅದನ್ನು ಹೆಚ್ಚಾಗಿ ಉಪಯೋಗಿಸಲು ಶುರು ಮಾಡಿದ್ದಾರೆ. ಕ್ರಿಸ್ತಪೂರ್ವದಲ್ಲೇ ಜನ ಅದನ್ನು ಅದನ್ನು ವೀರ್ಯವರ್ಧಕವೆಂದೂ ಆರೋಗ್ಯದಾಯಕವೆಂದೂ ಹಾಡಿ ಹೊಗಳಿದ್ದಾರೆ. ಈಜಿಪ್ತಿನ ಅರಸರು ಪಿರಮಿಡ್ಡುಗಳನ್ನು ಕಟ್ಟಲು ನಿಯಮಿಸಿಕೊಂಡ ಗುಲಾಮರಿಗೆ ಅವರ ಶಾರೀರಿಕ ಬಲ ಹೆಚ್ಚಾಗಲೆಂದು ಕೊಡುತ್ತಿದ್ದ ಆಹಾರದಲ್ಲಿ ಬೆಳ್ಳುಳ್ಳಿ ಹಾಕಿರುತ್ತಿದ್ದರಂತೆ. ಅಲೆಕ್ಸಾಂಡರ್ ತನ್ನ ಸೈನಿಕರಿಗೆ ಅವರ ಧೈರ್ಯ ಶೌರ್ಯ ಹೆಚ್ಚಾಗಲೆಂದು ಊಟದೊಡನೆ ಬೆಳ್ಳುಳ್ಳಿ ಕೊಡುತ್ತಿದ್ದನಂತೆ. ವೈದ್ಯ ಶಾಸ್ತ್ರ ಪಿತಾಮಹ ಹಿಪ್ಪೋಕ್ರೆಟೀಸ್, ಬೆಳ್ಳುಳ್ಳಿ ಮಲವಿಸರ್ಜನೆಗೆ ಸಹಾಯಕ ಎಂದು ಘೋಷಿಸಿದ್ದ. ಅರಿಸ್ಟಾಟಲ್ ಹುಚ್ಚು ನಾಯಿ ಕಡಿತಕ್ಕೆ ಬೆಳ್ಳುಳ್ಳಿಯನ್ನು ಶಿಫಾರಸು ಮಾಡುತ್ತಿದ್ದ. ಮಧ್ಯಯುಗದ[illegible] ಯುರೋಪಿನ ಜನ ಪ್ಲೇಗ್ ತಗುಲದೇ ಇರ[illegible] ಬೆಳ್ಳುಳ್ಳಿಯ ಹಾರ ಧರಿಸುತ್ತಿದ್ದರು. ಸ್ಪೇನ್[illegible] ಈಗಲೂ ಗೂಳಿ ಕಾಳಗ ಮಾಡುವವರು ಗೂಳಿಯ ತಿವಿತದ ಗಾಯದಿಂದ ಆಗಬಹುದಾದ ತೊಂದರೆಯನ್ನು ತಪ್ಪಿಸಿಕೊಳ್ಳಲು ಬೆಳ್ಳುಳ್ಳಿಯ ಹಾರವನ್ನು ಕುತ್ತಿಗೆಗೆ ಕಟ್ಟಿಕೊಳ್ಳುತ್ತಾರೆ.

ಬೆಳ್ಳುಳ್ಳಿಯ ಅಸಾಧಾರಣ ಗುಣಧರ್ಮವನ್ನು ಅಮೆರಿಕಾದ ನಾಷನಲ್ ಕ್ಯಾನ್ಸರ್ ಇನ್‌ಸ್ಟಿಟ್ಯೂಟಿನವರು ವಿಶ್ಲೇಷಿಸಿ, ಜಠರ ಮತ್ತು ಅನ್ನನಾಳದಲ್ಲಿ ಬರಬಹುದಾದ ಕ್ಯಾನ್ಸರ್ ಅನ್ನು ಅದು ತಪ್ಪಿಸುತ್ತದೆ ಎಂದು ತಿಳಿಸಿದ್ದಾರೆ. ಅಧಿಕ ರಕ್ತದ ಒತ್ತಡ ಇರುವವರಿಗೂ, ರಕ್ತದಲ್ಲಿ ಕೊಲೆಸ್ಟ್ರಾಲ್‌ನ ಅಂಶ ಹೆಚ್ಚಿದವರಿಗೂ ಇದು ರಾಮ ಬಾಣ. ಬೆಳ್ಳುಳ್ಳಿ ಕೀಟಾಣುನಾಶಕವೂ ಹೌದು. ಜಾಗತಿಕ ಎರಡನೇ ಮಹಾಯುದ್ಧದಲ್ಲಿ ಗಾಯಾಳುಗಳ ಗಾಯಕ್ಕೆ ಬೆಳ್ಳುಳ್ಳಿ ಪೋಟೀಸ್ ಕಟ್ಟಿದಾಗ ವ್ರಣ ಕೀವಾಗದೆ ಜಾಗ್ರತೆಯಾಗಿ ವಾಸಿಯಾಯಿತೆಂದು ವರದಿ ತಿಳಿಸುತ್ತದೆ. ಈ ಕ್ರಿಮಿನಾಶಕ ಗುಣಕ್ಕೆ ಅದರಲ್ಲಿರುವ ಅಲ್ಲಿಸಿನ್ ಎಂಬ ರಾಸಾಯನಿಕ ಸಂಯುಕ್ತವೇ ಕಾರಣ. ಗಂಧಕದ ಅಂಶವಿರುವುದರಿಂದ ಬೆಳ್ಳುಳ್ಳಿಗೆ ಕಟುವಾಸನೆ.

ಹೆಚ್ಚು ರಕ್ತದ ಒತ್ತಡವಿರುವವರು ಬೇಯಿಸಿದ ಅಥವಾ ಹುರಿದ ಬೆಳ್ಳುಳ್ಳಿ ಹಳಕುಗಳನ್ನು ತಿನ್ನುವುದು ಒಳ್ಳೆಯದು. ದಿನಕ್ಕೆ ನಾಲ್ಕಾರು ಹಳಕುಗಳು ಸಾಕು. ಹೆಚ್ಚು ತಿಂದರೆ ಅಷ್ಟೇನೂ ಬಾಧಕವಲ್ಲ. ಹಸಿ ಬೆಳ್ಳುಳ್ಳಿ ರಸ ಕ್ರಿಮಿನಾಶಕ. ಪಲ್ಯ, ಗೊಜ್ಜು ಹುಳಿ ಮುಂತಾದ ಅಡುಗೆಗೆ ನಿತ್ಯವೂ ಒಂದೆರಡು ಬೆಳ್ಳುಳ್ಳಿ ಅರೆದು ಹಾಕಬಹುದು. ಆದರೆ ಬೆಳ್ಳುಳ್ಳಿಯನ್ನು ಒಣಗಿಸಿದರೆ, ಪುಡಿಮಾಡಿದರೆ ಅಥವಾ ನಿರ್ಗಂಧವಾಗಿಸಿದರೆ ಅದರಲ್ಲಿರುವ ಔಷಧೀಯ ಗುಣ ಕಡಿಮೆಯಾಗುತ್ತದೆಯೆಂದು ಬಲ್ಲವರು ಹೇಳುತ್ತಾರೆ. ಆದರೆ ಬೆಳ್ಳುಳ್ಳಿಗೆ ಅಲರ್ಜಿ ಇರುವವರಾಗಲಿ ಜಠರದ ಸಮಸ್ಯೆ ಇರುವವರಾಗಲಿ ವೈದ್ಯರ ಸಲಹೆ ಪಡೆಯದೆ ಬೆಳ್ಳುಳ್ಳಿಯನ್ನು ತಿನ್ನಬಾರದು.

ಅಂದ ಹಾಗೆ, ಬೆಳ್ಳುಳ್ಳಿಗೆ ಕ್ಷಯರೋಗವನ್ನು ನಿರೋಧಿಸುವ ಗುಣವೂ ಇದೆಯೆಂದು ರಶಿಯದಲ್ಲಿ ಕೈಕೊಂಡ ಪ್ರಯೋಗದಿಂದ ತಿಳಿದುಬಂದಿದೆ.

(ಆಧಾರ)

● ಎಚ್. ಆರ್. ಚಂದ್ರವದನ ರಾವ್

# ಅಚ್ಚಳಿಯದ ಪುಟಗಳು

## ಮನಸಸ್ಸು

ಮರಾಠಿಯ, ಶಿವಾಜಿ ಸಾವಂತರ ಮೂಲ ಕಾದಂಬರಿ 'ಮೃತ್ಯುಂಜಯ.' ಈ ಬೃಹತ್ ಕಾದಂಬರಿಯನ್ನು ಪ್ರೊ. ಅಶೋಕ ನೀಲಗಾರ ಕನ್ನಡಕ್ಕೆ ಅನುವಾದಿಸಿದ್ದಾರೆ. (ಪ್ರಕಾಶನ: ಅಮಿತ ಪ್ರಕಾಶನ, 'ವಸುಂಧರಾ' ಸಾಧನಕೇರಿ, ಪ್ರಶಾಂತನಗರ, ಧಾರವಾಡ) ಅದರಲ್ಲಿಂದ ಆಯ್ದ "ಅಚ್ಚಳಿಯದ ಪುಟ" ಇದು.

"ಮನುಷ್ಯನು ಬುದ್ಧಿಯ ಮತ್ತು ಸಂಪತ್ತಿನ ಬಲದ ಮೇಲೆ ಜಗತ್ತನ್ನು ಸುಲಭವಾಗಿ ಮೋಸಮಾಡಬಹುದು. ಆದರೆ ತಮ್ಮ ಮನಸ್ಸನ್ನು ಮೋಸಮಾಡುವದು ಯಾರಿಗೂ ಸಾಧ್ಯವಿಲ್ಲ. ಪ್ರತಿಯೊಬ್ಬರ ನಿಜವಾದ ವ್ಯಕ್ತಿತ್ವದ ಪ್ರತಿಬಿಂಬಗಳು ಅವರ ಮನಸ್ಸಿನ ಕನ್ನಡಿಗಳ ಮೇಲೆ ಸ್ಪಷ್ಟವಾಗಿ ಮೂಡಿರುತ್ತವೆ. ಪ್ರತಿಯೊಬ್ಬ ಮನುಷ್ಯನು ಏಕಾಂತದ ಸಮಯದಲ್ಲಿ ತನ್ನ ಸ್ವಂತದ ವಿವಿಧ ರೂಪಗಳನ್ನು ಈ ಕನ್ನಡಿಯಲ್ಲಿ ನೋಡುತ್ತಿರುತ್ತಾನೆ. ಈ ರೂಪಗಳು ಕೆಲವು ಸಲ ಆಕರ್ಷಕ ಮತ್ತು ಅಭಿಮಾನವೆನಿಸುವಂತಿರುತ್ತವೆ. ಆದರೆ ಬಹಳ ಸಲ ಈ ರೂಪಗಳು ಕಣ್ಣಿನ ಮುಂದೆ ಬರಬಾರದೆಂದು ಅನಿಸುತ್ತದೆ. ಯಾವುದೇ ಕೆಟ್ಟ ಕೆಲಸವನ್ನು ಮಾಡುವ ಪೂರ್ವದಲ್ಲಿ ಆತ್ಮಾಭಿಮಾನದಿಂದ, ಧೈರ್ಯದಿಂದ ಮತ್ತು ಕುತೂಹಲದಿಂದ ನಿರ್ಮಾಣವಾದಂತಹ ಸುಳ್ಳು ಉತ್ಸಾಹವು ಪ್ರತಿಯೊಬ್ಬರಲ್ಲಿರುತ್ತದೆ. ಆದರೆ ಇದೇ ಉತ್ಸಾಹದಲ್ಲಿ ಆ ಕೃತ್ಯವು ಆಗಿ ಹೋದನಂತರ ಮಾತ್ರ ಮನಸ್ಸು ಉರಿಬಾಣ ಹತ್ತಿದ ಪಶುವಿನಂತೆ ಯಾವುದಾದರೂ ಸುರಕ್ಷಿತವಾದಂತಹ ಆಶ್ರಯವನ್ನು ಶೋಧಿಸುತ್ತ ಅತ್ತಿತ್ತ ಓಡಾಡತೊಡಗುತ್ತದೆ. ಸುದೈವದಿಂದ ಕೆಲವರಿಗೆ ಆಶ್ರಯ ದೊರೆಯುತ್ತದೆ. ಕೆಲವರು ಜೀವನವೆಲ್ಲಾ ಅದೇ ರೀತಿ ಓಡುತ್ತಲೇ ಇರಬೇಕಾಗುತ್ತದೆ."

ಸಂಗ್ರಹ: ಸುಮತಿ. ಗ. ಯಾದಪ್ಪನವರ

## ಗುರುತು

ಬೀಚಿಯವರು ಬರೆದ "ಅರಿದ ಬಹಾ" ಕಾದಂಬರಿಯಿಂದ ಆಯ್ದ ಭಾಗಗಳು

ಮದುವೆಯಾಗಿ ಮತ್ತಗಾಗುತ್ತಾನೆ. ಮಕ್ಕಳಾಗಿ ಮುದುಕನಾಗುತ್ತಾನೆ. ಇನ್ನೂ ಬದುಕಿದ್ದರೆ ಅಜ್ಜನೂ ಆದಾನು. ಮನುಷ್ಯನ ಕತೆ ಮುಗಿಯಿತು ಇಲ್ಲಿಗೆ. ಈ ಮಹಾಕಾರ್ಯಕ್ಕಾಗಿ ಒಂದು ಜನ್ಮವನ್ನೇ ತಾಳಿ ಬಂದು, ತಾಯಿ ಗರ್ಭದಲ್ಲಿ ತಿಂಗಳುಗಳು ಸೆರೆ ಬಿದ್ದು, ಹೊರ ಬಂದ ಮೇಲೆ ಶೈಶವ, ಬಾಲ್ಯ ಮುಂತಾದ ಅವಸ್ಥೆಗಳನ್ನನುಭವಿಸುವದು. ಆ ತುದಿಗೆ ಇದ್ದೇ ಇದೆ ವೃದ್ಧಾಪ್ಯ. ಕೇವಲ ಹದಿನೈದು ಇಪ್ಪತ್ತು ವರ್ಷಗಳ ಉಪಯುಕ್ತವಲ್ಲದಿದ್ದರೂ ಜೀವಂತ ಜೀವನವನ್ನು ನಡೆಸಲು, ಎಂಭತ್ತು, ತೊಂಭತ್ತು ವರ್ಷಗಳ ಕಾಲ ಇಲ್ಲಿರುವ್ವದು. ಬಾಳಿನುದ್ದಕ್ಕೂ ರೋಗ-ರುಜಿ, ರೋಷ-ದ್ವೇಷ, ಸಿಟ್ಟು-ಸೆಡವು, ಕೋಪ-ತಾಪ, ಧನದಾಹ ಹಲವರಿಗೆ. ಕೀರ್ತಿಯಾಶೆ ಕೆಲವರಿಗೆ. ಸಾವು

ಬಾಗಿಲಿಗೆ ಬಂದರೂ ಇನ್ನೂ ಕೊಂಚ ಕಾಲ ಬದುಕಿರಬೇಕೆಂಬ ಹುಚ್ಚು ಎಲ್ಲರಿಗೆ. ಇದೆಲ್ಲದರ ಅರ್ಥ ಅವನಿಗೊಬ್ಬನಿಗೇ ಆಗಬೇಕು. ತನಗೆ ತಿಳಿಯಲಾರದ್ದನ್ನೆಲ್ಲ 'ಅವನ ಲೀಲೆ' ಎಂದು, ಕೈ ಮೇಲೆತ್ತಿ ತೋರಿಸಿ ತಪ್ಪಿಸಿಕೊಳ್ಳುವುದು ಮಾನವನ ಉಪಾಯ. ಸರ್ವಾಂತರ್ಯಾಮಿಯಾದ ದೇವನು ಅದೇಕೆ ಬರೀ ಮೇಲೆಯೆ ಇರುತ್ತಾನೋ?

ನೀಲಿ ಬಣ್ಣದ ಕೋಣದ ಮೇಲೆ ಕುಳಿತಿದ್ದಾನೆ. ಮತ್ತಿನ್ನಾರು ಯಮನೇ!

ವಾಹನವನ್ನು ನೋಡಿದರೆ ಸಾಕು, ಅವರ ಇಡೀ ಚರಿತ್ರೆಯನ್ನೇ ಹೇಳಬಹುದು. ಬೈಸಿಕಲ್ ಇದ್ದರೆ ಗುಮಾಸ್ತ, ಜೀಪ್‌ನಲ್ಲಿ ಹೆಂಗಸು ಇದ್ದರೆ ಯಾರೋ ಆಫೀಸರ್‌ರ ಅಮ್ಮನವರು. ಹೊಚ್ಚ ಹೊಸ ಭಾರೀ ಕಾರು-ಟ್ಯಾಕ್ಸ್ ತಪ್ಪಿಸುವ ಸೆಟ್ಟರು. ಮನೆಯಲ್ಲೆರಡು ಸ್ಕೂಟರ್‌ಗಳು- ಸೆಟ್ಟರ ಮಗ. ಬಣ್ಣದ ಚಪ್ಪಲಿ- ಆಫೀಸಿಗೆ ಹೋಗುವ ಕ್ಲಾರ್ಕಮ್ಮ. ಬರೀ ಕಾಲು- ಮದರಾಸಿ, ಬರೀ ಹೊಟ್ಟೆ- ದಡ್ಡ. ಬರೀ ತಲೆ- ಆದರೂ ಬದುಕಬಲ್ಲ ಪುಣ್ಯಾತ್ಮ

ಸಂಗ್ರಹ: ಲೀಲಾಧರ ಮಾ. ಭಂಡಾರಿ

## ಜೀವನ....

> ಸೂರ್ಯದೇವ ರಾಮ ಮೋಹನ್ ರಾವ್ ಅವರ 'ಲವರ್' ತೆಲುಗು ಕಾದಂಬರಿಯಿಂದ ಆಯ್ದ 'ಅಚ್ಚಳಿಯದ ಪುಟ'ಗಳಿವು. ಅನುವಾದ: ಸರಿತಾ ಜ್ಞಾನಾನಂದ, ಪ್ರಕಾಶನ: ಸಾಗರ್ ಪ್ರಕಾಶನ, ನಂ. ೧೯೭೭, ೧೧ನೇ ಮುಖ್ಯ ರಸ್ತೆ ಬನಶಂಕರಿ, ಬೆಂಗಳೂರು-೫೬೦೦೫೦.

"ಈ ಪ್ರಪಂಚದಲ್ಲಿ ಹಣವಿಲ್ಲದವನು, ಆಧಾರವಿಲ್ಲದವನು, ಆಸ್ತಿ ಇಲ್ಲದವನು ದುರದೃಷ್ಟವಂತನೇ ಎಂದುಕೊಂಡರೂ, ಅವೆಲ್ಲವನ್ನೂ ಅವನು ತನ್ನ ಜೀವನದ ಅವಧಿಯಲ್ಲಿ ಗಳಿಸಬಲ್ಲ. ಆದರೆ ಮನುಷ್ಯನಾಗಿ ಬದುಕಲಾರದವನು ಮಾತ್ರ ಇನ್ನೊಂದು ಜನ್ಮದಲ್ಲಿ ಕೂಡ ತನ್ನ ತಪ್ಪನ್ನು ತಿದ್ದಿಕೊಳ್ಳಲಾರ, ಏಕೆಂದರೆ ಅವನು ಮನುಷ್ಯನಾಗಿ ಮತ್ತೆ ಹುಟ್ಟಲಾರ." (ಪುಟ ೨೮೯)

"ವ್ಯಕ್ತಿಯೊಬ್ಬರು ಆಕ್ರಮಿಸಿಕೊಂಡಿರುವ ಸ್ಥಾನವನ್ನು ನೋಡಿ ಕೈವಶಪಡಿಸಿಕೊಂಡಿರುವ ಅಧಿಕಾರವನ್ನು ಗಮನಿಸಿ ಅವನು ಪಡೆಯುವ ಗೌರವವನ್ನು ಗೌರವ ಎಂದು ಕರೆಯುವುದಿಲ್ಲ, ಅವು ಯಾವುದೂ ಅವನಿಗೆ ಇಲ್ಲದ ದಿನ ಅವನು ಜನರಿಂದ ಪಡೆಯುವ ಗೌರವವೇ ನಿಜವಾದ ಗೌರವ. ಅದೇ ಅವನು ಮನುಷ್ಯನಾಗಿ ಜೀವಿಸಿದನೋ ಕ್ರಿಮಿಯಾಗಿ ಜೀವಿಸಿದನೋ ಎಂಬುದನ್ನು ನಿರ್ಣಯಿಸುತ್ತದೆ. ಅವಕಾಶ ದೊರೆತು ಮೂರ್ಖರೇ ನೆರವಾದರೂ ಅಸಮರ್ಥ ಕುನ್ನಿಗಳು ಬಂಗಾರದ ಸಿಂಹಾಸನಕ್ಕೆ. ಅದಕ್ಕೆ ಮೊದಲು ಬಂಗಾರದಂತಹ ವ್ಯಕ್ತಿ ಸಮರ್ಥನಾಗಿದ್ದು ನೈತಿಕ ಮೌಲ್ಯಗಳನ್ನು ವೃದ್ಧಿಗೊಳಿಸಿದ್ದುದರಿಂದ ಅದರ ಬೆಲೆಯು ವೃದ್ಧಿಗೊಂಡಿತ್ತು. ಆದ್ದರಿಂದಲೇ ಅದನ್ನು ಗೌರವಿಸುತ್ತಾರೆ. ಕೆಲವು ದಿನಗಳಿಗೆ ಬಂಗಾರದ ಸಿಂಹಾಸನ ಕಬ್ಬಿಣದ್ದಾಗಿ ಬಿಡುತ್ತದೆ. ಆದ್ದರಿಂದ ಈಗ ನಿನ್ನ ಸ್ಥಾನ ದೊಡ್ಡದೆಂದು ಬೀಗಬೇಡ. ನಿನ್ನಲ್ಲಿರುವ ಹಣವಾಗಲಿ, ಅಧಿಕಾರವಾಗಲೀ ಹಿರಿಯದೆಂದು ಮರೆಯಬೇಡ. ವ್ಯಕ್ತಿಗಿಂತಲೂ ಚರಿತ್ರೆ ತುಂಬಾ ದೊಡ್ಡದು. ಚರಿತ್ರೆ ಬಹುಮಂದಿಗೆ ಪಾಠ ಕಲಿಸುತ್ತದೆ. ಇನ್ನೂ ಕಲಿಸುತ್ತಿದೆ." (ಪುಟ ೨೮೧.)

"ಬದುಕಿನಲ್ಲಿ ತನಗೆ ಏನು ಬೇಕಾಗಿದೆ ಎಂಬುದನ್ನು ನಿಖರವಾಗಿ ಅರಿತ ವ್ಯಕ್ತಿಯು ತನ್ನ ಗುರಿಯನ್ನು ಅರ್ಧಭಾಗ ಗಳಿಸಿದಂತೆಯೇ." (ಪುಟ -೨೮೩)

ಸಂಗ್ರಹ: ಉಷಾ ಕಾರಂತ್

# ಆಧಾರ

ಮೂಲ: ಶ್ರೀ ಸದಾನಂದ್ ಶಾರದಾ
ಕನ್ನಡಕ್ಕೆ: ಶಾರದಾತನಯ

ಮೇಲಿನ ಅಂತಸ್ತಿನಲ್ಲಿನ ಪ್ರಿನ್ಸಿಪಾಲರ ಕೋಣೆಯನ್ನು ಗುಡಿಸಿ ಒಂದೊಂದೇ ಮೆಟ್ಟಿಲನ್ನು ಗುಡಿಸುತ್ತ ಮೆಲ್ಲನೆ ಕೆಳಗಿಳಿಯುತ್ತಿದ್ದಳು ಶಾಂತಮ್ಮ. ಐವತ್ತು ವರ್ಷದ ಆಕೆ ಇಪ್ಪತ್ತು ವರ್ಷಗಳಿಗೂ ಮೇಲ್ಪಟ್ಟು ಆ ಕಾಲೇಜಿನಲ್ಲೇ ಕೆಲಸ ಮಾಡುತ್ತಿದ್ದಳು ಆಯಾ ಆಗಿ..

ದಿನವೂ ಪ್ರಿನ್ಸಿಪಾಲರ ಕೋಣೆಗೆ ಹಿಡಿದಿರುವ ಧೂಳನ್ನು ಒರೆಸುತ್ತಿದ್ದಳು. ಆಫೀಸ್ ರೂಮಿನ ಕಸವನ್ನೆಲ್ಲ ಗುಡಿಸಿ ಚೊಕ್ಕಟ ಮಾಡುತ್ತಿದ್ದಳು. ಸ್ಟಾಫ್ ರೂಮುಗಳು, ತರಗತಿಯ ಕೊಠಡಿಗಳು, ವರಾಂಡಗಳು ಇವುಗಳನ್ನೆಲ್ಲ ಗುಡಿಸಿ ಬೆಂಚುಗಳನ್ನು ಒರೆಸಿ, ಕಾಲೇಜಿನ ಆವರಣದಲ್ಲಿನ ಕಾಗದದ ಚೂರುಗಳನ್ನೆಲ್ಲ ಆಯ್ದು ದೂರ ಹಾಕುತ್ತಿದ್ದಳು. ಕುಂಡಗಳಲ್ಲಿರುವ ಗಿಡಗಳಿಗೆಲ್ಲ ನೀರುಣಿಸುತ್ತಿದ್ದಳು. ಕೂಜಾಗಳಲ್ಲಿ ಕುಡಿಯುವ ನೀರನ್ನೂ ತುಂಬಿಡುತ್ತಿದ್ದಳು.

ಈ ಕೆಲಸಗಳ ಜೊತೆಗೆ ಕ್ಲಾಸ್ ರೂಮುಗಳಿಗೆ ನೋಟೀಸುಗಳನ್ನು ಕೂಡ ಅವಳೇ ಒಯ್ಯಬೇಕಾಗಿತ್ತು. ಮೂರಂತಸ್ತಿನ ಕಟ್ಟಡವನ್ನು ಹತ್ತಿ-ಇಳಿಯುತ್ತ ಕ್ಲಾಸ್‌ರೂಮ್‌ಗಳಿಗೆಲ್ಲ ನೋಟೀಸುಗಳನ್ನು ತೋರಿಸಿಕೊಂಡು ಬರುವ ಶಾಂತಮ್ಮನಿಗೆ ಅದೆಷ್ಟು ಆಯಾಸವಾಗುತ್ತಿತ್ತು ಎಂಬುದನ್ನು ಗುರುತಿಸುವವರೇ ಇಲ್ಲವಾಗಿತ್ತು. ಅವಳು ಮಾಡುತ್ತಿದ್ದ ಕೆಲಸಕ್ಕೆ ಇನ್ನೊಬ್ಬ ಪರಿಚಾರಿಕೆಯನ್ನು ಹಾಗೂ ಇನ್ನೊಬ್ಬ ಪ್ಯೂನನನ್ನು ನೇಮಿಸಿಕೊಳ್ಳಬೇಕಾಗಿತ್ತು. ನಿಜ. ಆದರೆ ಮೂವರು ಮಾಡಬಹುದಾದ ಕೆಲಸವನ್ನು ಅವಳೊಬ್ಬಳಿಂದಲೇ ಮಾಡಿಸುತ್ತಿದ್ದರು. ಹಾಗೆಂದು ಅವಳಿಗೆ ತುಟಿ ಎರಡು ಮಾಡುವದು ಗೊತ್ತಿರಲಿಲ್ಲ.

ಸ್ಟಾಫ್‌ರೂಮ್‌ನಲ್ಲಿ ಇಕನಾಮಿಕ್ಸ್ ಲೆಕ್ಚರರ್ ರಂಗನಾಥಂ ಕೂಡುವ ಕುರ್ಚಿಯನ್ನು ಒರೆಸುತ್ತಾ ಆಲೋಚಿಸುತ್ತಿದ್ದಳು ಶಾಂತಮ್ಮ:

"ಇಷ್ಟೊಂದು ಕೆಲಸ ಮಾಡೋಕ್ಕೆ ನನ್ನೊಬ್ಬಳ ಕೈಯಲ್ಲಿ ಆಗೊಲ್ಲ ಬುದ್ಧಿ, ದಿನಾ ಕಳೆದ ಹಾಗೆಲ್ಲ ನನಗೂ ವಯಸ್ಸಾಗುತ್ತಿದೆ; ಕೆಲ್ಸಾನೂ ಜಾಸ್ತಿ ಆಗ್ತಿದೆ. ಈ ಮುದುಕಿ ಮೇಲೆ ನೀವು ಸ್ವಲ್ಪ ದಯತೋರಿ ಇನ್ನೊಬ್ಬರನ್ನು ಕೆಲ್ಸಕ್ಕೆ ತೊಗೋಳ್ಳೋಕೆ ಪ್ರಿನ್ಸಿಪಾಲ್ ಸಾಹೇಬ್ರಿಗೆ ಹೇಳಿ ಬುದ್ಧಿ!" ಎಂದು ಅಲ್ಲಿನ ಅಧ್ಯಾಪಕರಲ್ಲಿ ತುಂಬ ಹಿರಿಯರೆನಿಸಿದ ರಂಗನಾಥಂ ಅವರಲ್ಲಾಕೆ ಅನೇಕ ಬಾರಿ ಮೊರೆಯಿಟ್ಟಿದ್ದಳು.

**"ಸಾರ್.... ನಿನ್ನೆ ಹೃದಯಾಘಾತದಿಂದ ಮೃತಪಟ್ಟ ಶಾಂತಮ್ಮನ ಆತ್ಮಶಾಂತಿಗಾಗಿ ಸಂತಾಪ ಸೂಚಕ ಸಭೆ ಏರ್ಪಡಿಸಬೇಕು. ಇವತ್ತು ಕಾಲೇಜಿಗೆ ರಜೆ ಘೋಷಿಸಿಬಿಡಿ ಸಾರ್!" ಎಂದು ಎಲ್ಲರ ಪರವಾಗಿ ಪ್ರಿನ್ಸಿಪಾಲರನ್ನು ಕಳಕಳಿಯಿಂದ ಪ್ರಾರ್ಥಿಸಿದರು ತೆಲುಗು ಲೆಕ್ಚರರ್ ನಿರಂಜನರಾವ್**

"ಆಂ.... ಆಂಜಿ.. ನೋಡೋಣ-ನೋಡೋಣ" ಎಂದದಾಗಲೀ ಶಾಂತಮ್ಮ ಅಹವಾಲನ್ನು ಎಂದೂ ಸೀರಿಯಸ್ಸಾಗಿ ತೆಗೆದುಕೊಂಡವರಲ್ಲ ರಂಗನಾಥಂ. ಇದು ನಿನ್ನೆ-ಮೊನ್ನೆಯ ಮಾತಲ್ಲ. ಕಳೆದ ಹನ್ನೆರಡು ವರ್ಷಗಳಿಂದ ಶಾಂತಮ್ಮ ತನ್ನ ಗೋಳನ್ನು ಹೇಳಿಕೊಳ್ಳುತ್ತಲೇ ಇದ್ದಾಳೆ; ಅವರು ನೋಡೋಣ, ನೋಡೋಣ, ಅಂತಾನೇ ಇದ್ದಾರೆ.

ಲೆಕ್ಚರರ್ ರಂಗನಾಥಂ ಅವರಿಗೆ ಭಿಕ್ಷುಕರನ್ನು ಕಂಡರೆ ತುಂಬ ಕನಿಕರವಾಗುತ್ತದೆಯಂತೆ. ದೇಶದಲ್ಲಿ ಬರಬರುತ್ತಾ ಹೆಚ್ಚುತ್ತಿರುವ ಬಡತನದ ಬಗ್ಗೆ ತುಂಬ ಆತಂಕವೂ ಆಗುತ್ತದೆ- ದುಃಖವೂ ಆಗುತ್ತದೆಯಂತೆ. ಬಡತನಕ್ಕೆ ಮುಖ್ಯವಾದ ಕಾರಣ ನಿರುದ್ಯೋಗ. ನಿರುದ್ಯೋಗ ಉಂಟಾಗಲು ಇರುವ ಕಾರಣಗಳಲ್ಲಿ ಪ್ರಧಾನವಾದದ್ದು ಎಂದರೆ ಶ್ರಮಜೀವಿಗಳ ಶೋಷಣೆ-ಎಂದೆಲ್ಲ ಲೆಕ್ಚರ್ ಕೊಡುತ್ತಾರೆ. "ಹತ್ತು ಮಂದಿ ಮಾಡುವ ಕೆಲಸವನ್ನು ಐವರಿಂದ ಮಾಡಿಸ್ತೀವಿ. ಇದು ತುಂಬ ಅನ್ಯಾಯ. ಕಾರ್ಮಿಕರನ್ನು ಶೋಷಣೆ ಮಾಡ್ತೀದೀವಿ. ಈ ರೀತಿಯ ಶ್ರಮದ ಶೋಷಣೆಯೇ ನಿರುದ್ಯೋಗಕ್ಕೆ ಒಂದು ಮುಖ್ಯವಾದ ಕಾರಣ" ಎಂದು ಕ್ಲಾಸಿನಲ್ಲಿ ಭಾವೋದ್ವೇಗದಿಂದ ಲೆಕ್ಚರ್ ಕೊಟ್ಟು ವಿದ್ಯಾರ್ಥಿಗಳಿಂದ ಚಪ್ಪಾಳೆ ಗಿಟ್ಟಿಸುತ್ತಿದ್ದರು. ಆದರೆ ಇಷ್ಟೆಲ್ಲ ಹೇಳಿ ಶಾಂತಮ್ಮನ ವಿಷಯಕ್ಕೆ ಬರುವ ವೇಳೆಗೆ,



"ನೋಡೋಣ-ನೋಡೋಣ," ಎಂದು ತಣ್ಣಗಾ ಗುತ್ತಿದ್ದರು. ಅವರ ಕುರ್ಚಿ ಧೂಳು ಹೊಡೆದು ಒರೆಸಿ, ಪಕ್ಕದ ಕುರ್ಚಿ ಒರೆಸುತ್ತಿದ್ದಳು ಶಾಂತಮ್ಮ.

ಆ ಕುರ್ಚಿಯಲ್ಲಿ ತೆಲುಗು ಲೆಕ್ಚರರ್ ನಿರಂಜನ್‌ರಾವ್ ಕೂಡುತ್ತಾರೆ. ಅವರು ಪಾಠ ಪ್ರವಚನದ ಜೊತೆಗೆ ಅನೇಕ ರಮ್ಯವಾದ ಕವಿತೆಗಳನ್ನು ರಚಿಸಿ ಎಲ್ಲರನ್ನೂ ರಂಜಿಸುತ್ತಾರೆ. ಅವರ ಕವಿತೆಗಳಲ್ಲಿನ ವೈಶಿಷ್ಟ್ಯ ಎಂದರೆ ಮಾನವತಾವಾದವನ್ನು ಹೃದಯಂಗಮವಾಗಿ ಚಿತ್ರಿಸುವುದು. ಹೀಗಾಗಿ ಜನ ಅವರನ್ನು ಒಬ್ಬ ದೊಡ್ಡ ಮಾನವತಾವಾದಿಯನ್ನಾಗಿ ಗುರುತಿಸಿ ಗೌರವಿಸುತ್ತಿದ್ದರು.

ಅವಳ ಚಾಕರಿ ಕಾಲೇಜಿನ ಕಟ್ಟಡಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಕಾಲೇಜಿನ ಆವರಣವನ್ನೂ ದಾಟಿ ಮುಂದೆ ಹೋಗಿತ್ತು.

ಆಫೀಸ್ ಸೂಪರಿಂಟೆಂಡೆಂಟ್, ಶೂರ್ಪನಖಾರಾವ್ ನಿಸ್ಸಂದೇಹವಾಗಿ ಅಸುರ ಗಣಕ್ಕೆ ಸೇರಿದವ. ಅವನ ಮನೆಯಲ್ಲಿ ಬೆಳಗ್ಗೆ ಮನೆ ಕೆಲಸ ಮಾಡಿ, ನಂತರ ಶಾಂತಮ್ಮ ಕಾಲೇಜಿಗೆ ಬರಬೇಕಾಗಿತ್ತು. ಮನೆ ಕೆಲಸಕ್ಕೇಂತ ಪ್ರತ್ಯೇಕವಾದ ಸಂಭಾವನೆಯನ್ನೇನೂ ಕೊಡುತ್ತಿರಲಿಲ್ಲ ಶೂರ್ಪನಖಾರಾವ್.

ಕಾಲೇಜಿನಲ್ಲಿ ಅವನನ್ನು ಎದುರಿಸುವ ಎದೆಗಾರಿಕೆಯುಳ್ಳವರು ಯಾರೂ ಇರಲಿಲ್ಲ. ಆತ ಒಂದು ಸಲ ಕೋಪದಿಂದ ಕಣ್ಣುಬಿಟ್ಟ ಅಂದರೆ ಪ್ರಿನ್ಸಿಪಾಲ್ ಕೂಡ ಥರಥರ ನಡುಗುತ್ತ ಕರ್ಚೀಫಿನಿಂದ ಮುಖದ ಮೇಲಿನ ಬೆವರ ಹನಿಗಳನ್ನು ಒರೆಸಿಕೊಳ್ಳುತ್ತಿದ್ದರು.

ಆಫೀಸಿನಲ್ಲಿ ಶೂರ್ಪನಖಾರಾವ್ ಕುರ್ಚಿಯಲ್ಲಿ ಪದ್ಮಾಸನ ಹಾಕಿಕೊಂಡು ಕೂಡುತ್ತಿದ್ದ. ಆಫೀಸ್ ಸ್ಟಾಫೆಲ್ಲ ತಮ್ಮ ಟೇಬಲ್ಲುಗಳ ಮೇಲಿನ ಫೈಲುಗಳಲ್ಲಿ ತಲ್ಲೀನರಾಗಿರುತ್ತಿದ್ದರು. ಆದರೆ ರಾವ್ ಮಾತ್ರ ಎಲೆ ಅಡಿಕೆ-ಲವಂಗ-ಯಾಲಕ್ಕಿ ಜಗಿಯುತ್ತ ಮ್ಯಾಗ್‌ಜಿನ್‌ಗಳನ್ನು, ಕಥೆ ಪುಸ್ತಕಗಳನ್ನು ತಿರುವಿ ಹಾಕುತ್ತ ಕೂಡುತ್ತಿದ್ದ. ಶೂರ್ಪನಖಾರಾವ್ ಆ ಕಾಲೇಜನ್ನು ನಡೆಸುವ ಮೇನೇಜ್‌ಮೆಂಟ್‌ಗೆ ತುಂಬ ಹತ್ತಿರದ ವನಾದ ವ್ಯಕ್ತಿ.

"ಮನೆಕೆಲಸ ಮಾಡಿ ಮಾಡಿ, ಸಾಕಾಗಿ ಕೈಗಳು ಬಿದ್ದು ಹೋಗ್ತಿದೆ ಬುದ್ಧಿ, ಇನ್ನೆಷ್ಟು ದಿನ ಸೂಪರಿಂಟೆಂಡ್ ಮನೇಲಿ ಊಳಿಗ ಮಾಡಬೇಕು ನೀವೇ ಏಳ್ರಿ"- ಎಂದು ಕಷ್ಟವನ್ನು ಶಾಂತಮ್ಮ ನಿರಂಜನರಾವ್‌ರೊಡನೆ ತೋಡಿಕೊಂಡಾಗ ಅವಳ ಕಣ್ಣುಗಳಿಂದ ಅಶ್ರುಬಿಂದುಗಳು ಚಿಮ್ಮುತ್ತಿದ್ದವು. "ಏನಮ್ಮ ನೀನು ಹೇಳ್ತಿರೋದು- ಕಾಲೇಜಿನ ಕೆಲಸಕ್ಕೇಂತ ನೇಮಿಸಿಕೊಂಡ ನಿನ್ನಿಂದ ಶೂರ್ಪನಖಾರಾವ್ ಮನೆ ಕೆಲಸ ಮಾಡಿಸ್ತಿದಾನಾ! ಛೇ! ಛೇ! ಎಂಥ ಅನ್ಯಾಯ!" ಎಂದು ಕನಿಕರವೇ ಮೂರ್ತಿವೆತ್ತಂತೆ ಉದ್ಗರಿಸಿದರು ತೆಲುಗು ಭಾಷೆಯ ಉದ್ದಾಮ ಪಂಡಿತರಾದ ನಿರಂಜನರಾಯರು. ಅಷ್ಟೇ ಅಲ್ಲ, "ಶಾಂತಮ್ಮ! ನೀನೇನೂ ಯೋಚನೆ ಮಾಡಬೇಡ. ನಾನು ಪ್ರಿನ್ಸಿಪಾಲರಿಗೆ ಹೇಳಿ, ನಿನ್ನ ಕಷ್ಟ ನಿವಾರಣೆ ಮಾಡ್ತೀನಿ ಆಯ್ತಾ?" ಎಂದು ಸಾಂತ್ವನದ ಮಾತುಗಳನ್ನು ಆಡಿದರು.

ಆದರೆ ಅವರೆಂದೂ ಆ ಬಗ್ಗೆ ಪ್ರಿನ್ಸಿಪಾಲರಲ್ಲಿ ಚಕಾರ ಎತ್ತಲಿಲ್ಲ. ಅಂಥ ಮಹಾನುಭಾವರು ಕೂಡುವ ಕುರ್ಚಿಯ ಧೂಳನ್ನು ಒರೆಸಿ ಇಂಗ್ಲೀಷ್ ಮೇಡಂ ಊರ್ವಶಿ ಕೂಡುವ ಕುರ್ಚಿಯತ್ತ ಹೆಜ್ಜೆ ಹಾಕಿದಳು ಶಾಂತಮ್ಮ.

ಇಂಗ್ಲೀಷ್ ಮೇಡಂನ ನಿಜನಾಮಧೇಯ 'ಈಶ್ವರಿ'- ಎಂದು. ಆದರೆ ಅವಳು ಕಾಲೇಜಿನಲ್ಲಿ ಗಳಿಸಿಕೊಂಡಿದ್ದ ಹೆಸರು ಊರ್ವಶಿ. ಅವಳು ಹೊಕ್ಕಳು ಕಾಣುವಂತೆ ಸೀರೆ ಉಡುತ್ತಿದ್ದಳು. ಬೇಸಿಗೆಯಾಗಿರಲಿ ಮಳೆಗಾಲವಾಗಿರಲಿ, ಚಳಿಗಾಲವಾಗಿರಲಿ ಅವಳು ಧರಿಸುತ್ತಿದ್ದುದು ಸ್ಲೀವ್‌ಲೆಸ್ ಬ್ಲೌಸು. ಅವಳು ಆದರ್ಶ ಮಹಿಳಾಮಂಡಳಿಯ ಅಧ್ಯಕ್ಷಿಣಿ. ತನ್ನ ವೇಷ-ಭೂಷಣಗಳೇ ಆದರ್ಶ ಮಹಿಳೆಯರಿಗೂ ಆದರ್ಶಪ್ರಾಯವಾಗಿರಬೇಕು ಎನ್ನುವುದು ಆಕೆಯ ಆದರ್ಶ! ಪ್ರತಿ ಪೀರಿಯಡ್ ಮುಗಿದಾಗಲೂ ಒಂದು ಕಪ್ ಸ್ಟ್ರಾಂಗ್ ಕಾಫಿ ಬೇಕೇಬೇಕು. ಮಧ್ಯಾಹ್ನ ಟಿಫನ್ ಆಗಬೇಕು. ಕಾಫಿ-ವಡೆಗಳನ್ನು ಸಪ್ಲೈ ಮಾಡುತ್ತ ಎಷ್ಟೋ ಬಾರಿ ಶಾಂತಮ್ಮ ತನ್ನ ಗೋಳನ್ನು ನಿವೇದಿಸಿಕೊಂಡಿದ್ದಳು, ಆ ಇಂಗ್ಲೀಷ್ ಮೇಡಂಗೆ. ಕಾಫಿ ಸಿಪ್ ಮಾಡುತ್ತಾ ಶಾಂತಮ್ಮ ಹೇಳಿದುದಕ್ಕೆಲ್ಲ ಊರ್ವಶಿ ಮೇಡಂ, "ಆಗಲಿ ಆಗಲಿ; ನಾನು ಪ್ರಿನ್ಸಿಪಾಲರಿಗೆ ಹೇಳ್ತೀನಿ-ನೀನೇನೂ ಯೋಚನೆ ಮಾಡಬೇಡ,"

ಎಂದಳಾಗಲಿ ಎಂದೂ ಆ ಬಗ್ಗೆ ಪ್ರಿನ್ಸಿಪಾಲರೊಡನೆ ಒಂದು ಮಾತನ್ನೂ ಹೇಳಿದವಳಲ್ಲ.

ಅವಳ ಪಕ್ಕದ ಕುರ್ಚಿಯಲ್ಲಿ ಹಿಂದಿ ಲೆಕ್ಚರರ್ ನಿರಂಕುಶಂ ಕೂಡುತ್ತಿದ್ದರು. ಅವರೊಬ್ಬ ನಿರಂಕುಶ ಪ್ರಭುಗಳು! ಇಷ್ಟ ಬಂದಾಗ ಕಾಲೇಜಿಗೆ ಬರುತ್ತಿದ್ದರು. ಬೇಡವೆನಿಸಿದಾಗ ಹೊರಟುಹೋಗುತ್ತಿದ್ದರು. ಒಂದೊಂದು ಸಲ ಅಟೆಂಡೆನ್ಸ್ ರಿಜಿಸ್ಟರಿನಲ್ಲಿ ಸಹಿ ಹಾಕಿದ ತಕ್ಷಣವೇ ನೆಟ್ಟಗೆ ಮನೆ ದಾರಿ ಹಿಡಿಯುತ್ತಿದ್ದರು. ತನ್ನನ್ನು ಬಿಟ್ಟು ಇತರರ ಬಗ್ಗೆ ಯಾವ ಕಾಳಜಿಯನ್ನೂ ಹೊಂದಿದವರಲ್ಲ ನಿರಂಕುಶಂ. ಇನ್ನು ಅವರು ಶಾಂತಮ್ಮನ ಗೋಳನ್ನು ಕೇಳೋದೆಲ್ಲಿ ಬಂತು!

ಆ ಕುರ್ಚಿಗಳ ಧೂಳನ್ನು ಒರೆಸಿ, ಒರೆಸಿ ಸೊಂಟ ನೋಯತೊಡಗಿದ್ದುದರಿಂದ ಸ್ವಲ್ಪ ಹೊತ್ತು ಏನೂ ತೋಚದೆ ಅಲ್ಲೇ ನಿಂತುಬಿಟ್ಟಳು ಕಂಬದಂತೆ. ಟೇಬಲ್‌ನ ಒಂದು ಪಕ್ಕದಲ್ಲಿದ್ದ ಕುರ್ಚಿಗಳನ್ನೆಲ್ಲ ಒರೆಸಿದ್ದಾಯಿತು.. ಮತ್ತೊಂದು ಪಕ್ಕದಲ್ಲಿದ್ದ ಮೊದಲ ಕುರ್ಚಿಯನ್ನು ಒರೆಸತೊಡಗಿದಳು ಶಾಂತಮ್ಮ.

ಆ ಕುರ್ಚಿಯನ್ನು ನೋಡುತ್ತಿದ್ದಂತೆ ಅದರಲ್ಲಿ ಕೂಡುತ್ತಿದ್ದ ಕಾಮರ್ಸ್ ಲೆಕ್ಚರರ್ ಅಪ್ಪಾರಾವ್‌ರ ಚಿತ್ರ ಅವಳ ಕಣ್ಣುಗಳ ಮುಂದೆ ತೇಲಿಬಂತು. ಆತ ಒಮ್ಮೊಮ್ಮೆ ಕಾಲೇಜಿಗೆ ಕುಡಿದು ಬರುತ್ತಿದ್ದರು. ಯಾವಾಗಲೂ ಕಣ್ಣುಗಳು ಕೆಂಡದಂತೆ ಕೆಂಪಾಗಿರುತ್ತಿದ್ದುವು. ಆತ ಎಂದೂ ಪರರ ಚಿಂತೆ ಮಾಡಿದವರೇ ಅಲ್ಲ. ಆತ ಕೂಡುತ್ತಿದ್ದ ಕುರ್ಚಿಯ ಧೂಳನ್ನೂ ಒರೆಸಿದ್ದಾಯಿತು.

ಆ ಪಕ್ಕದ ಕುರ್ಚಿಯಲ್ಲಿ ಕೂಡುತ್ತಿದ್ದವರು ಬಾಟನಿ ಲೆಕ್ಚರರ್ ಅಶ್ವಿನಿ. ಅವಳಿಗೆ ಶಾಂತಮ್ಮನೆಂದರೆ ತುಂಬ ಕನಿಕರ. ಆದರೆ ಆಕೆ ಶಾಂತಮ್ಮನ ಬಗ್ಗೆ ಎಂದೂ ಪ್ರಿನ್ಸಿಪಾಲ್‌ಗೆ ಏನೂ ಹೇಳಲಿಲ್ಲ. ಆಕೆಯು ಪೋಸ್ಟ್ ಟೆಂಪರರಿ. 'ತನ್ನ ಕೆಲಸವನ್ನು ಆದಷ್ಟು ಬೇಗ ಖಾಯಂ ಮಾಡಿಸಪ್ಪ ಭಗವಂತ!' ಎಂದು ಕಾಣದ ದೇವರಿಗೆ ಮೊರೆಯಿಡುತ್ತ ಯೂನಿವರ್ಸಿಟಿ ಆಫೀಸಿನ ಸುತ್ತಲೂ ಸುತ್ತುತ್ತಿದ್ದಳು. ಇನ್ನು ಶಾಂತಮ್ಮನ ಗೋಳೆಲ್ಲಿ ಅವಳ ಕಿವಿಗೆ ತಾಗಬೇಕು?



ಅಶ್ವಿನಿ ಮೇಡಂ ಕುರ್ಚಿಯ ಪಕ್ಕದ್ದ ಕುರ್ಚಿ ಮ್ಯಾಥ್‌ಮ್ಯಾಟಿಕ್ಸ್ ಲೆಕ್ಚರರ್ ಮೋಹನ್‌ರಾವ್‌ರವರದು. ಮುಖಸಿಂಡರಿಸಿಕೊಂಡು ಮಾತಾಡುವುದು ಆತನ ಸ್ವಭಾವ. ಮಾತಿಮಾತಿಗೂ ರೇಗುವುದು ಆತನ ಅಭ್ಯಾಸ. ಆತನಿಗೆ ಬ್ಯಾಂಕ್ ಬ್ಯಾಲೆನ್ಸ್ ವಿಷಯದ ವಿನಾ ಉಳಿದ ಯಾವ ಆಲೋಚನೆಯೂ ಬೇಡವಾಗಿದ್ದು, 'ಟಚ್ ಮಿ ನಾಟ್' ಜೀವಿಯ ಜಾತಿಗೆ ಸೇರಿದವನಾಗಿದ್ದ.

ಹೀಗೆ ಒಂದೊಂದು ಕುರ್ಚಿಯ ಧೂಳನ್ನು ಕೊಡವಿ ಒರೆಸುತ್ತಿದ್ದಂತೆ ಅವುಗಳಲ್ಲಿ ಕೂಡುವ ಲೆಕ್ಚರರ್‌ಗಳೆಂಬ ಬುದ್ಧಿಜೀವಿಗಳ ಸ್ವಭಾವ ಗುಣಗಳು ಶಾಂತಮ್ಮನ ನೆನಪಿನಂಗಳದಲ್ಲಿ ಸುಳಿಯುತ್ತಿದ್ದುವು.

ತಾನು ಒರೆಸಿ ಶುಭ್ರಮಾಡಿದ ಕುರ್ಚಿಗಳತ್ತ ಒಮ್ಮೆ ದೃಷ್ಟಿ ಹಾಯಿಸಿದಳು ಶಾಂತಮ್ಮ.

ನಾಲ್ಕು ಜನರು ಮಾಡಬೇಕಾದ ಕೆಲಸವನ್ನು ತನ್ನೊಬ್ಬಳಿಂದ ಮಾಡಿಸುತ್ತಿದ್ದಾರೆ. ಇವರಿಗೆ ಮುದುಕಿ ಎಂಬ ಕನಿಕರವೇ ಇಲ್ಲ, ಇವರೆಲ್ಲ ಪಾಷಾಣ ಹೃದಯರು! ಕಸಗುಡಿಸುವುದರ ಜೊತೆಗೆ ಮೆಮೋ ತೆಗೆದುಕೊಂಡು ಕಟ್ಟಡದ ಕೆಳಗೆ-ಮೇಲೆ ಸುತ್ತಾಡುವ ಕೆಲಸವನ್ನು ಹಚ್ಚಿದ್ದಾರೆ.

"ಸ್ವಲ್ಪ ಕನಿಕರಿಸಿ ಪ್ರಿನ್ಸಿಪಾಲ್ ಸಾಹೇಬರಿಗೆ - ಏಳಿ ಬುದ್ಧಿ ಸೆಕ್ರೆಟರಿ ಸಾಹೇಬರಿಗೆ ಏಳಿ, ಹೇಗಾದರೂ ಮಾಡಿ ನನ್ನ ಕಷ್ಟವನ್ನು ನಿವಾರಣೆ ಮಾಡಿಸಿ ಬುದ್ಧಿ!" ಎಂದೆಲ್ಲ ಆ ಕುರ್ಚಿಗಳಿಗೆ ತನ್ನ ಹೃದಯದ ಅಳಲನ್ನು ಹೇಳಿಕೊಳ್ಳುತ್ತಿದ್ದಳು.

"ಅಷ್ಟೆ ತಾನೆ? ನೋಡೋಣ... ನೋಡೋಣ..."

"ನಾನು ಮಾತಾಡ್ತೀನಿ-ಮಾತಾಡ್ತೀನಿ."

"ಓ! ಹಾಗಾ- ಸರಿ-ಸರಿ."

"ಆಂ! ಹೌದಾ?"

ಎನ್ನುತ್ತಿದ್ದವು ಆ ಕುರ್ಚಿಗಳು. ದೀರ್ಘವಾಗಿ ನಿಟ್ಟುಸಿರು ಬಿಟ್ಟಳು ಶಾಂತಮ್ಮ.

ಒಂದು ದಿನ ಮಧ್ಯಾಹ್ನ ಕ್ಲಾಸ್‌ರೂಮುಗಳಿಗೆಲ್ಲ ತೋರಿಸಿಕೊಂಡು ಬರಲು ಯಾವುದೋ ನೋಟೀಸ್ ತೆಗೆದುಕೊಂಡು ಸುತ್ತಾಡುತ್ತಿದ್ದಳು. ಅದುವರೆಗೆ ಕೆಲಸ ಮಾಡಿಮಾಡಿ ಸುಸ್ತಾಗಿ ಮೇಲಿನ ಅಂತಸ್ತಿನ ಮೆಟ್ಟಿಲನ್ನು ಹತ್ತಲಾರದೆ ಹೋದಳು. ಆ ವೇಳೆಗಾಗಲೇ ತನ್ನ ಕೆಲಸದ ನಿಮಿತ್ತ ನಾಲ್ಕಾರು ಸಲ ಮೆಟ್ಟಿಲುಗಳನ್ನು ಹತ್ತಿ ಇಳಿದು ಸುಸ್ತಾಗಿತ್ತು.

ಮುಂದಿನ ಮೆಟ್ಟಿಲನ್ನು ಹತ್ತಲಾರದೆ ಕ್ಷಣಕಾಲ ಆ ಮೆಟ್ಟಿಲ ಮೇಲೆ ನಿಂತುಬಿಟ್ಟಳು ಶಾಂತಮ್ಮ. ಕೈ ಕಾಲುಗಳು ಭಾರವಾದಂತಾಗಿ ನಡುಗುತ್ತಿದ್ದವು. ಇದ್ದಕ್ಕಿದ್ದಂತೆ ಎದೆಯ ನೋವು ಕಾಣಿಸಿಕೊಂಡು ಹೃದಯದ ಡವಡವ ತೀವ್ರವಾಯಿತು. ಮೈಯೆಲ್ಲ ಬೆವರಿಟ್ಟಿತು.

'ಈ ಹಾಳು ಚಾಕರಿ ಎಷ್ಟು ಮಾಡಿದರೂ ಮುಗಿಯುವುದಿಲ್ಲ. ಕೆಲಸ ಬಿಟ್ಟು ಮನೇಲಿದ್ದು ಬಿಡಲಾ?' ಎಂದುಕೊಂಡಳು. ಆದರೆ ಹೊಟ್ಟೆ ಕೇಳಬೇಕಲ್ಲ! ಒಮ್ಮೊಮ್ಮೆ ತನ್ನ ಸಂಸಾರದ ಜವಾಬ್ದಾರಿಯೆಲ್ಲ ನೆನಪಿಗೆ ಬಂದು ಹೃದಯವನ್ನು ಹಿಂಡುತ್ತಿತ್ತು.

ಗಂಡ ಎಂದೋ ಕಣ್ಣುಮುಚ್ಚಿ ಪರಲೋಕ ಸೇರಿದ್ದ. ತನಗೆ ಇಬ್ಬರು ಹೆಣ್ಣುಮಕ್ಕಳು. ದೊಡ್ಡವಳಿಗೆ ಮದುವೆಯಾಗಿ, ಇಬ್ಬರು ಮಕ್ಕಳಾಗುತ್ತಲೇ ಗಂಡ ಆಕ್ಸಿಡೆಂಟಿನಲ್ಲಿ ಸತ್ತು ಹೋದ. ಹೀಗಾಗಿ ಆ ಮಗಳು, ಮೊಮ್ಮಕ್ಕಳ ಭಾರ ಕೂಡ ತನ್ನ ಮೇಲೆ ಬಿದ್ದಿತ್ತು.

ಎರಡನೇ ಮಗಳಿಗಿನ್ನೂ ಲಗ್ನವಾಗಿಲ್ಲ. ಇಬ್ಬರು ಹೆಣ್ಣುಮಕ್ಕಳು ಬೀಡಿ ಕಟ್ಟುವ ಕೆಲಸ ಮಾಡುತ್ತಿದ್ದರು. ಅದರಿಂದ ಬರುವ ಪುಡಿಗಾಸುಗಳಲ್ಲಿ ಸಂಸಾರವನ್ನು ನಿಭಾಯಿಸುವುದು, ದೊಡ್ಡ ಮಗಳ ಮಕ್ಕಳ ತಿಂಡಿ, ಬಟ್ಟೆ, ಓದು ಇದನ್ನು ಪೂರೈಸುವುದು ತುಂಬ ಕಷ್ಟ ಎಂಬುದು ಅವಳಿಗೆ ಗೊತ್ತಿದ್ದ ಸಂಗತಿಯೆ.

ಒಂದು ಕ್ಷಣ ತಲೆ ಬಗ್ಗಿಸಿಕೊಂಡು ಕಣ್ಣು ಮುಚ್ಚಿಕೊಂಡಳು ಶಾಂತಮ್ಮ. ಅಗತ್ಯಗಳು ಬಡವರ ಗೋಣು ಮುರಿಯುವಂತೆ ಮಾಡುತ್ತವೆ. ಅವರನ್ನು ಗಾಣದ ಎತ್ತುಗಳಾಗಿ ಮಾಡುತ್ತವೆ. ಕಷ್ಟಜೀವಿಗಳ ಅಗತ್ಯಗಳನ್ನು ತಮಗೆ ಅನುಕೂಲವಾಗುವಂತೆ ತಿರುಗಿಸಿಕೊಂಡು ಬಿಟ್ಟಿ ಚಾಕರಿ ಮಾಡಿಸಿಕೊಳ್ಳುತ್ತಾರೆ, ತಿಂದು-ತಿಂದು ಮೈ ಕೊಬ್ಬಿದ ಜನ.

ಶ್ರೀಮಂತವರ್ಗಕ್ಕೆ ಸೇರಿದ ಮಾಲೀಕರಲ್ಲಿ ತಮ್ಮ ಕಷ್ಟವನ್ನು ಗಟ್ಟಿಯಾಗಿ ಹೇಳಿಕೊಂಡರೆ ಇರುವ ಕೆಲಸವನ್ನು ಕಿತ್ತುಕೊಂಡು ಎಲ್ಲಿ ಹೊರಗಟ್ಟುವರೋ ಎಂಬ ಭಯ ಬಡವರನ್ನು ಸದಾ ಕಾಡುತ್ತಿರುತ್ತದೆ. ಇದಕ್ಕೆ ಶಾಂತಮ್ಮನೂ ಹೊರತಾಗಿರಲಿಲ್ಲ.

ಒಂದೊಂದು ಹೆಜ್ಜೆ ಇಡುವುದೂ ತುಂಬ ಪ್ರಯಾಸಕರವಾಗುತ್ತಿತ್ತು. ಜೀವ ಹಿಂಡಿ ಹಿಪ್ಪೆಯಾಗಿದೆ. ಐವತ್ತರ ವಯಸ್ಸಿಗೆ ಎಪ್ಪತ್ತರ ಭಾರವನ್ನು ಹೊರುವಂತಾಗಿದೆ ಶಾಂತಮ್ಮನ ಸ್ಥಿತಿ. ಕಷ್ಟಪಟ್ಟು ಮತ್ತೊಂದು ಮೆಟ್ಟಿಲನ್ನೇರಿ ಅಲ್ಲೇ ಕುಳಿತುಬಿಟ್ಟಳು. ಸೆರಗಿನ ತುದಿಯಿಂದ ಮುಖದ ಮೇಲೆ ಸಾಲಿಟ್ಟಿದ್ದ ಬೆವರಿನ ಹನಿಗಳನ್ನು ಒರೆಸಿಕೊಂಡಳು.

ದೇಹದ ಬಲವನ್ನೆಲ್ಲ ಒಗ್ಗೂಡಿಸಿಕೊಂಡು ಹೆಜ್ಜೆಗಳನ್ನಿಡುತ್ತಿದ್ದಳು. ಮೂರಂತಸ್ತಿನ ಆ ಭವ್ಯವಾದ ಕಟ್ಟಡದ ಮೆಟ್ಟಿಲುಗಳನ್ನು ಹತ್ತಿ, ಇಳಿದು, ಕ್ಲಾಸ್ ರೂಮುಗಳಲ್ಲಿ ಸ್ಟಾಫ್‌ರೂಮ್‌ನಲ್ಲಿ, ಲೈಬ್ರರಿ ರೂಮ್‌ನಲ್ಲಿ ಆ ನೋಟೀಸನ್ನು ತೋರಿಸಿಕೊಂಡು ಬರಬೇಕಿತ್ತು.

ಅಷ್ಟರಲ್ಲಿ ಡಾಕ್ಟ[illegible] ಮಾತುಗಳು ನೆನಪಿಗೆ ಬಂದವು.

ಡಾಕ್ಟರ್‌ರಿಗೇನು? ಪ[illegible]ದು ಹೇಳ್ತಾರೆ. ತನಗಿರುವ ಎದೆ ನೋವಿಗೆ ರೆಸ್ಟ್ ತೊಗೋ

ಬೇಕಂತೆ. ಆತ ಬರೆದುಕೊಡುವ ಮಾತ್ರೆ-ಟಾನಿಕ್‌ಗಳನ್ನು ಒಂದು ದಿನವೂ ಬಿಡದೆ ತೆಗೆದುಕೊಳ್ಳಬೇಕಂತೆ.... ಜೊತೆಗೆ ಹಣ್ಣು ಹಂಪಲುಗಳ ಅಗತ್ಯತೆ ಬೇರೆ. ಇಷ್ಟೂ ಆದಮೇಲೆ ಡಾಕ್ಟರರಿಗೆ ಕನ್‌ಸಲ್ಟೇಶನ್ ಫೀ ಕೊಡಲೇಬೇಕಲ್ಲ. ಇಷ್ಟಕ್ಕೆಲ್ಲ ಹಣವನ್ನು ಹೇಗೆ ಹೊಂದಿಸಿಕೊಳ್ಳುವುದು? ಆದುದರಿಂದ ತಾನು ಕಷ್ಟಪಟ್ಟು ಅಹರ್ನಿಶಿ ದುಡಿಯಲೇಬೇಕಾದದ್ದು ಅನಿವಾರ್ಯ ಎಂಬ ತೀರ್ಮಾನಕ್ಕೆ ಆಕೆ ಬಂದಳು.

ಏದುಸಿರು ಬಿಡುತ್ತಲೇ ಹೇಗೋ ಒದ್ದಾಡುತ್ತ ನೋಟೀಸನ್ನು ಎಲ್ಲರಿಗೂ ತೋರಿಸಿಕೊಂಡು ವಾಪಸುಕೊಡಲು ಆಫೀಸಿನೊಳಗೆ ಬಂದಳು ಶಾಂತಮ್ಮ.

"ಎಷ್ಟು ಹೊತ್ತು ಮಾಡ್ತೀಯಾ ಒಂದು ನೋಟೀಸನ್ನು ತೋರಿಸ್ಕೊಂಡು ಸೈನ್ ಹಾಕಿಸಿಕೊಂಡು ಬರೋಕ್ಕೆ? ನಿನ್ನನ್ನು ಹೇಳೋರು-ಕೇಳೋರು ಯಾರು ಇಲ್ಲಾಂತ ಅಂದ್ಕೊಂಡಿದೀಯ?" ಎಂದು ತಾರಕ ಸ್ವರದಲ್ಲಿ ಕೂಗಾಡಿದ ಕುರ್ಚಿಯಲ್ಲಿ ಪದ್ಮಾಸನಸ್ಥನಾಗಿ ಕೂತಿದ್ದ ಸೂಪರಿಂಟೆಂಡೆಂಟ್ ಶೂರ್ಪನಖಾರಾವ್.

"ಕೆಲಸಕ್ಕೆ ಮೈಗಳ್ಳತನ ಮಾಡ್ಬೇಕೂಂತ ತಾನೆ ಗಂಟೆಗಟ್ಟಲೆ ನೀನು ಎಲ್ಲಿ ಹೋದರೆ ಅಲ್ಲೇ ಇದ್ಬಿಡೋದು?" ಎಂದು ಅವಳ ಮೇಲೆ ಉರಿದು ಬಿದ್ದ.

"ರಾಮ! ರಾಮಾ!...." ಎಂದ ಶಾಂತಮ್ಮನ ಬಾಯಿಂದ ಮುಂದೆ ಮಾತೇ ಹೊರಡಲಿಲ್ಲ. ಅವಳ ಅಂಗಾಲುಗಳು, ಅವಳ ಕಣ್ಣುಗಳು ಒಂದೇ ಸಮನೆ ಉರಿಯತೊಡಗಿದವು.

"ಅಮ್ಮಾವ್ರು ಮನೆಯಿಂದ ಫೋನ್ ಮಾಡಿದ್ರು ಗೊತ್ತಾ?" ಎಂದ ಶೂರ್ಪನಖಾರಾವ್. ಅಮ್ಮಾವ್ರು ಎಂದರೆ ರಾವ್‌ನ ಧರ್ಮಪತ್ನಿ.

"ಲೂಸೀಗೆ ತುಂಬಾ ಸುಸ್ತಾಗಿದೆಯಂತೆ." ಲೂಸಿ ಎಂದರೆ ರಾವ್ ಮನೆಯ ಸಾಕು ನಾಯಿ.

"ಅದನ್ನು ಆಸ್ಪತ್ರೆಗೆ ಕರ್ಕೊಂಡು ಹೋಗಬೇಕಂತೆ-ಅಮ್ಮಾವ್ರು ಹೇಳಿದರು. ಬೇಗ ಹೋಗು ಮನೇಗೆ. ನಿಧಾನಿಸಬೇಡ ತಿಳೀತಾ?" ರಾವ್‌ನ ಕಂಠ ಗರ್ಜಿಸಿತು.

ಸ್ವಲ್ಪವಾದರೂ ವಿಶ್ರಾಂತಿ ಇಲ್ಲದ ಆ ಬಡ ಜೀವ ಕಾಲೆಳೆದುಕೊಂಡು ಶೂರ್ಪನಖಾರಾವ್ ಮನೆ ಕಡೆ ಹೆಜ್ಜೆ ಹಾಕಿತು.

ಕಾಲೇಜಿನಿಂದ ರಾವ್ ಮನೆ ಒಂದು ಕಿಲೋಮೀಟರ್ ದೂರದಲ್ಲಿತ್ತು. ಬಿಸಿಲಿನ ಝಳಕ್ಕೆ ತಲೆ-ಅಂಗಾಲು ಸುಡುತ್ತಿತ್ತು.

ತಲೆ ಮೇಲೆ ಸೆರಗನ್ನು ಹೊದ್ದು ಭಾರವಾದ ಹೆಜ್ಜೆಗಳನ್ನಿಡುತ್ತಿದ್ದಳು ಶಾಂತಮ್ಮ. ಹಾಕಿಕೊಂಡಿದ್ದ ಹವಾಯಿ ಚಪ್ಪಲಿಯ ಅರ್ಧಭಾಗ ಸವೆದುಹೋಗಿದ್ದುದರಿಂದ ಪ್ರತಿಸಲ ಹೆಜ್ಜೆಯಿಡುವಾಗಲೂ ಬಿಸಿಲಿನ ತಾಪಕ್ಕೆ ಪಾದಗಳು ಚುರುಗುಟ್ಟುತ್ತಿದ್ದವು.

ಇನ್ನು ಹತ್ತು ದಿನ ಕಳೆದರೆ ಸಾಕು, ಪರೀಕ್ಷೆಗಳು ಮುಗಿದು ಕಾಲೇಜಿಗೆ ರಜ ಪ್ರಾರಂಭವಾಗುತ್ತದೆ. ಆಮೇಲೆ ತಾನು ಎಷ್ಟು ಬೇಕಾದರೂ ವಿಶ್ರಾಂತಿ ತೆಗೆದುಕೊಳ್ಳಬಹುದು ಎಂದುಕೊಂಡಳು. ಆದರೆ ಮರುಕ್ಷಣವೇ ಶೂರ್ಪನಖಾರಾವ್‌ನ ಮನೆ ನೆನಪಿಗೆ ಬಂತು. ರಜ ಬಂದರೇನು? ರಾವ್‌ನ ಮನೆ ಚಾಕರಿ ತಪ್ಪುತ್ತಾ? ಎಂದು ತನ್ನಲ್ಲೇ ಗೊಣಗಿಕೊಳ್ಳುತ್ತ ದಾರಿ ಸವೆಸತೊಡಗಿದಳು.

ಇನ್ನು ಹತ್ತು ಹೆಜ್ಜೆ ನಡೆದರೆ ಸೂಪರಿಂಟೆಂಡೆಂಟ್ ಮನೆ ಸಿಕ್ಕುತ್ತೆ. ತನ್ನ ದೇಹದ ಶಕ್ತಿಯನ್ನೆಲ್ಲ ಒಗ್ಗೂಡಿಸಿಕೊಂಡು ನಡೆಯುತ್ತಿದ್ದಳು. ತಲೆಯ ಮೇಲಿನ ಸೆರಗು ಕೂಡ ಬಿಸಿಲಿನ ಝಳಕ್ಕೆ ಸುಡುತ್ತಿತ್ತು.

ಹಣೆಯ ಮೇಲೆಲ್ಲ ಬೆವರಿನ ಹನಿಗಳು. ಕತ್ತು ಕೂಡ ಒದ್ದೆಯಾಗಿತ್ತು, ಬೆವರಿನಿಂದಾಗಿ. ಆದರೂ ಸೂಪರಿಂಟೆಂಡೆಂಟರ ಮನೆಯ ನಾಯಿಯ ಅನಾರೋಗ್ಯ ಅವಳನ್ನು ಇನ್ನೂ ಬೇಗ ಬೇಗ ಹೆಜ್ಜೆ ಹಾಕುವಂತೆ ಮಾಡಿತ್ತು.

ಹೊಟ್ಟೆ ಚುರುಚುರುಗುಟ್ಟುತ್ತಿತ್ತು. ಮಧ್ಯಾಹ್ನ ತಾನು ಊಟ ಮಾಡಲಿಲ್ಲವೆಂಬುದು ಆಗ ನೆನಪಿಗೆ ಬಂತು ಶಾಂತಮ್ಮನಿಗೆ. ನೋಟೀಸುಗಳು.... ಮೆಟ್ಟಿಲುಗಳು-ಪ್ರಿನ್ಸಿಪಾಲ್ ರೂಮು.... ಆಫೀಸ್ ರೂಮು.... ಅಷ್ಟರಲ್ಲಿ ಸೂಪರಿಂಡೆಂಡೆಂಟ್ ಮನೆಯ ನಾಯಿಗೆ ಇದ್ದಕ್ಕಿದ್ದಂತೆ ಸುಸ್ತಾದ ಸುದ್ದಿ... ಎಲ್ಲ ನೆನಪಾಗಿ ಮತ್ತೆ ನಡಿಗೆಯ ವೇಗವನ್ನು

ಹೆಚ್ಚಿಸಿದಳು.

ತನ್ನ ದೊಡ್ಡ ಮಗಳ ಮಗುವಿಗೆ ಎರಡು ದಿನಗಳಿಂದ ಅಸಾಧ್ಯ ಜ್ವರ. ಮಗು ಮುಚ್ಚಿದ್ದ ಕಣ್ಣು ತೆರೆದಿಲ್ಲ. ಡಾಕ್ಟರಿಗೆ ತೋರಿಸಿದಳು. ಪಾಪ! ಬಡವರನ್ನು ಯಾರು ತಾನೆ ಮುತುವರ್ಜಿಯಿಂದ ನೋಡುತ್ತಾರೆ? ಡಾಕ್ಟರು ಯಾವುದೋ ಮಾತ್ರೆಗಳನ್ನು ಬರೆದುಕೊಟ್ಟರು. ಆ ಮಾತ್ರೆಗಳನ್ನು ನುಂಗಿಸಿ, ಗಂಜಿ ಕುಡಿಸಿ ಬಂದಿದ್ದಳು. ಅದುವರೆಗೆ ಏನೂ ಆಗದಿದ್ದ ಮಗುವಿಗೆ ಎರಡುಸಲ ವಾಂತಿ ಯಾಯಿತು. ಮಗಳಿಗೆ ಭಯವಾಗಿ, 'ಅವ್ವ! ನೀನು ಇವತ್ತು ಕಾಲೇಜಿಗೆ ಓಗಬೇಡ.... ಮಗೂನ್ನ ನೋಡಿದರೆ ಗಾಬರಿ ಆಗ್ತದೆ.' ಎಂದಳು. ಅಂದು ತಾನು ಕಾಲೇಜಿಗೆ ಹೋಗದಿದ್ದರೆ ಅಲ್ಲಿ ಕಸಗುಡಿಸುವವರು ಯಾರು? ಎಂದುಕೊಂಡಳು ಶಾಂತಮ್ಮ 'ಔಷ್ಧಿ ಆಕೀದಿವಲ್ಲ; ವಾಂತಿ ನಿಲ್ತದೆ. ಸುಮಸುಮ್ಕೆ ಗಾಬರಿ ಆಗಬೇಡ ಮಗಾ' ಎಂದು ಮಗಳಿಗೆ ಧೈರ್ಯ ಹೇಳಿ ಎಂದಿನಂತೆ ಕಾಲೇಜಿಗೆ ಹೋದಳು. ಬೆಳಿಗ್ಗೆ ಸೂಪರಿಂಟೆಂಡೆಂಟರ ಮನೆಗೆ ಹೋದಾಗ ಅವರ ಮನೆ ನಾಯಿ 'ಲೂಸಿ' ಆರೋಗ್ಯವಾಗಿಯೇ ಇತ್ತು.

'ಹ್ಯಾಗಾದರೂ ಆಗಲಿ, ಇವತ್ತು ಬೇಗ ಬಂದು ನೀನೇ ಮಗಾನ್ನ ನೋಡಿಕೊಳ್ಳವ್ವ; ನನಗೆ ಹೆದರಿಕೆ ಆಗ್ತದೆ,' ಎಂದ ಮಗಳ ಮಾತುಗಳು ನೆನಪಿಗೆ ಬಂದು ಮಗೂಗೆ ಜ್ವರ ಹೇಗಿದೆಯೋ? ಎಂದುಕೊಂಡಾಗ, 'ಶಾಂತಮ್ಮ! ಏನು ಹಾಗೆ ಗರಬಡಿದವರ ಹಾಗೆ ನಿಂತ್ಕೊಂಡಿದೀಯ? ಬೇಗ ಹೋಗು. ಸೂಪರಿಂಟೆಂಡೆಂಟರ ಮನೆ ನಾಯಿಗೆ ತುಂಬ ಸುಸ್ತಾಗಿದೆಯಂತೆ' ಎಂಬ ಅವಳ ಅಂತರಾತ್ಮ ಎಚ್ಚರಿಸುತ್ತಿತ್ತು.

ಒಮ್ಮೆಲೇ ಹೃದಯದಲ್ಲಿ ಕಳಕ್ ಎಂದಂತಾಯಿತು ಶಾಂತಮ್ಮನಿಗೆ.

"ಅಮ್ಮಾ!" ಎಂದು ಎರಡು ಕೈಗಳಿಂದಲೂ ಎದೆಯನ್ನು ಒತ್ತಿ ಹಿಡಿದುಕೊಂಡು - ಯಾಕೋ ಏನೋ ಒಂಥರ ಆಗ್ತಿದೆಯಲ್ಲ... ಎದೆಯಲ್ಲಿ? ಎಂದುಕೊಳ್ಳುತ್ತ ಅಲ್ಲೇ ನಿಂತುಬಿಟ್ಟಳು.

ಆದರೂ ರಾವ್ ಮನೆಯ 'ಲೂಸಿ' ನೆನಪಿಗೆ ಬಂದು ಮತ್ತೆ ಸರಸರ ಹೆಜ್ಜೆ ಹಾಕಿದಳು ಮುಂದೆ,

ಮುಂದೆ.

ಕಡೆಗೆ ತುಂಬ ಕಷ್ಟಪಟ್ಟು-ಸೂಪರಿಂಟೆಂಡೆಂಟ್ ಶೂರ್ಪಣಖಾರಾವ್ ಮನೆ ತಲುಪಿದಳು. ಗೇಟ್ ತೆಗೆದು ಎರಡು ಹೆಜ್ಜೆ ಇಡುವಷ್ಟರಲ್ಲಿ ಅಮ್ಮಾವ್ರು ಭದ್ರಕಾಳಿಯ ಅಪರಾವತಾರ ತಾಳಿ ಎದುರಿಗೆ ಬಂದು, "ಏನೇ, ಫೋನ್‌ಮಾಡಿ ಎಷ್ಟು ಹೊತ್ತಾಯ್ತೇ ದರಿದ್ರದವಳೇ! ಈಗ ಬರ್ತಿದೀಯಾ?" ಎಂದು ಆರ್ಭಟಿಸಿದಳು.

ಶಾಂತಮ್ಮ ತುಟಿ ಎರಡು ಮಾಡಲಿಲ್ಲ.

ಶೂರ್ಪನಖಾರಾವ್‌ರವರ ಜಗುಲಿ ಮೇಲೆ ಕೂತಿದ್ದ 'ಲೂಸಿ' ದುರುಗುಟ್ಟಿಕೊಂಡು ನೋಡುತ್ತಿತ್ತು, ಶಾಂತಮ್ಮನತ್ತ.

"ಏನು ನಿರ್ಲಕ್ಷ್ಯ ನಿನಗೆ ನನ್ನ ಮಾತೂಂದ್ರೆ? ಲೂಸಿ ತುಂಬ ಸುಸ್ತಾಗಿ ಮಲಗಿಬಿಟ್ಟಿದೆ. ಆಸ್ಪತ್ರೆಗೆ ಕರ್ಕೊಂಡು ಹೋಗಬೇಕೂಂತ ನಾನು ಫೋನ್ ಮಾಡಿ ಎಷ್ಟು ಹೊತ್ತಾಯಿತು! ನೀನು ಹೆಜ್ಜೆ ಮೇಲೆ ಹೆಜ್ಜೆ ಇಟ್ಕೊಂಡು ಈಗ ಬರ್ತಿದೀಯ. ನಿನ್ನನ್ನು ಡಿಸ್ಮಿಸ್ ಮಾಡಿಸಿಬಿಡ್ತೀನಿ, ಹುಷಾರ್! ನನ್ನನ್ನು ಯಾರು ಅಂದ್ಕೊಂಡೆ?" ಎಂದು ಮತ್ತೆ ಆರ್ಭಟಿಸಿದಳು.

"ಬೇಗ ಹೋಗಿ ಹತ್ತಿರದಲ್ಲಿ ಎಲ್ಲಾದರೂ ಒಂದು ಆಟೋ ಇದೆಯೇನೋ ನೋಡ್ಕೊಂಡ್ ಬಾ."

ಹಿಂದಿರುಗಿ ಮತ್ತೆ ರಸ್ತೆಗಿಳಿದಳು ಶಾಂತಮ್ಮ.

ಬಾಯೆಲ್ಲ ಒಣಗಿ ಹೋಗುತ್ತಿತ್ತು, ಮಧ್ಯಾಹ್ನದ ಊಟವಿಲ್ಲದೆ ಹಸಿವೆಯಿಂದಾಗಿ ಪ್ರಾಣ ತಲ್ಲಣಿಸುತ್ತಿತ್ತು. ಆದರೂ ಏನೂ ಮಾಡುವಂತಿರಲಿಲ್ಲ. ಒಂದು ಫರ್ಲಾಂಗ್ ದೂರ ನಡೆಯುತ್ತಲೇ ಒಂದು ಖಾಲಿ ಆಟೋ ಕಾಣಿಸಿತು.

ಬರುವುದಿಲ್ಲವೆಂದು ಹಠಮಾಡುತ್ತಿದ್ದ ಲೂಸಿಯನ್ನು ಓಲೈಸಿ, ಕಂಕುಳಲ್ಲಿ ಎತ್ತಿಕೊಂಡು ಆಟೋ ಹತ್ತಿ ಆಸ್ಪತ್ರೆಯತ್ತ ತೆರಳಿದಳು. ವೆಟರ್‌ನರಿ ಆಸ್ಪತ್ರೆಯಿಂದ ಲೂಸಿಗೆ ಔಷಧಿಕುಡಿಸಿಕೊಂಡು, ಅದನ್ನು ಸೂಪರಿಂಟೆಂಡೆಂಟರ ಮನೆಯಲ್ಲಿ ಇಳಿಸಿದಳು ಶಾಂತಮ್ಮ.

"ನಾನು ಬರ್ತೀನಮ್ಮ" ಎಂದು ಅಮ್ಮಾವ್ರಿಗೆ ಹೇಳಿದಳು.

"ಹೂಂ-ನಾಳೆ ಬೆಳಗ್ಗೆ ಲೇಟ್ ಮಾಡಬೇಡ. ಬೇಗ ಬಂದ್ಬಿಡು. ತುಂಬ ಕೆಲಸ ಇದೆ. ತಿಳೀತಾ?" ಎಂದರು ಅಮ್ಮಾವರು.

"ಹಾಗೇ ಆಗಲಿ ಅಮ್ಮಾವ್ರೆ," ಎಂದು ತಲೆಯಾಡಿಸಿ ಶಾಂತಮ್ಮ ಹಿಂತಿರುಗಿದಳು. ಮನೆಯ ಅಂಗಳದ ಒಂದೊಂದೇ ಮೆಟ್ಟಿಲನ್ನು ಇಳಿಯುತ್ತಿದ್ದಂತೆ ಅವಳ ಹೃದಯ ಮತ್ತೊಮ್ಮೆ ಕಳಕ್ ಎಂದಿತು. ಎದೆ ನೋವು ಜಾಸ್ತಿಯಾಗಿ ಮೆಟ್ಟಿಲಿನಿಂದ ನೆಲದ ಮೇಲೆ ಕುಸಿದುಬಿದ್ದಳು. ಮತ್ತೆ ಮೇಲೇಳಲಿಲ್ಲ.

ಮಾರನೆಯ ದಿನ ಬೆಳಗ್ಗೆ ತೆಲುಗು ಲೆಕ್ಚರರ್ ನಿರಂಜನರಾವ್ ಗಾಬರಿ ಗಾಬರಿಯಾಗಿ ಎಕನಾಮಿಕ್ಸ್ ಲೆಕ್ಚರರ್ ರಂಗನಾಥಂರವರಿಗೆ ಏನೋ ಹೇಳಿದ್ರು. ರಂಗನಾಥಂ ತನಗೆ ತಿಳಿದ ಸುದ್ದಿಯನ್ನು ಅಪ್ಪಾರಾವ್‌ರಿಗೂ ನಿರಂಕುಶಂರವರಿಗೂ ಮುಟ್ಟಿಸಿದರು. ಅಷ್ಟರಲ್ಲಿ ಊರ್ವಶಿ ಮೇಡಂ ಹಾಗೂ ಎಲ್ಲಾ ಲೆಕ್ಚರರ್‌ಗಳೂ ಅಲ್ಲಿಗೆ ಬಂದರು.

ಎಲ್ಲರೂ ಒಟ್ಟಾಗಿ ಕಲೆತು ಪ್ರಿನ್ಸಿಪಾಲರ ಕೋಣೆಗೆ ಹೋದರು.

"ಸಾರ್.... ನಿನ್ನೆ ಹೃದಯಾಘಾತದಿಂದ ಮೃತಪಟ್ಟ ಶಾಂತಮ್ಮನ ಆತ್ಮ ಶಾಂತಿಗಾಗಿ ಸಂತಾಪ ಸೂಚಕ ಸಭೆ ಏರ್ಪಡಿಸಬೇಕು. ಇವತ್ತು ಕಾಲೇಜಿಗೆ ರಜೆ ಘೋಷಿಸಿಬಿಡಿ ಸಾರ್!" ಎಂದು ಎಲ್ಲರ ಪರವಾಗಿ ಪ್ರಿನ್ಸಿಪಾಲರನ್ನು ಕಳಕಳಿಯಿಂದ ಪ್ರಾರ್ಥಿಸಿದರು ತೆಲುಗು ಲೆಕ್ಚರರ್ ನಿರಂಜನರಾವ್. ●

---

ಜಗತ್ತಿನಲ್ಲಿರುವ ೪೦೦,೦೦೦,೦೦೦ ಟೆಲಿಫೋನುಗಳ ಪೈಕಿ ಹೆಚ್ಚಿನವುಗಳನ್ನು ಉಪಯೋಗಿಸುವವರು ಯಾರು ಗೊತ್ತೆ? ಅಮೇರಿಕನ್ನರು. ಆದರೆ ಜನಸಂಖ್ಯೆಗೂ ಬಳಕೆಯಲ್ಲಿರುವ ಟೆಲಿಫೋನ್‌ಗಳ ಸಂಖ್ಯೆಗೂ ಲೆಕ್ಕ ಹಾಕಿದರೆ ಅಮೇರಿಕಕ್ಕಿಂತ ಎಷ್ಟೋ ಪಟ್ಟು ಚಿಕ್ಕದಾಗಿರುವ ಪುಟಾಣಿ ದೇಶ ಮೊನ್ಯಾಕೋವೇ ಮುಂದು. ಅಲ್ಲಿ ಪ್ರತಿ ಸಾವಿರ ಜನರಿಗೆ ೮೨೫ ಟೆಲಿಫೋನ್‌ಗಳಿವೆ.

ಇದು

ಯಾರಿಗಾದರೂ ಆಗಬಹುದು



# ದುಃಸ್ವಪ್ನವಾಗಿ ಕಾಡಿದ ರಕ್ತ ಪರೀಕ್ಷೆ

• ನಿವೇದಿತಾ ದೇಸಾಯಿ

(ಆಧಾರ: 'ಟೈಮ್ಸ್ ಆಫ್ ಇಂಡಿಯಾ'ದಲ್ಲಿ ಪ್ರಕಟವಾದ ಒಂದು ವರದಿ)

ಮುಂಬಯಿಯ ಸುಪ್ರಸಿದ್ಧ ಆಸ್ಪತ್ರೆಯೊಂದರ ರಕ್ತ ಪರೀಕ್ಷಾ ಕೇಂದ್ರದ ಕೊಠಡಿಯಿಂದ ಚೀತ್ಕಾರವೊಂದು ಸುತ್ತೆಲ್ಲ ಪ್ರತಿಧ್ವನಿಸಿತು.

ಜನ ಅದೇನೆಂದುಕೊಳ್ಳುತ್ತಿರುವಷ್ಟರಲ್ಲೇ ಮತ್ತೆ ಎರಡು ಸಲ ಎದೆ ನಡುಗಿಸುವಂತಹ ಕೂಗು. ತಮ ಸರದಿಗಾಗಿ ಕಾದು ಕೂತಿದ್ದ ರೋಗಿಗಳು ಹಾಗೂ ಅವರೊಂದಿಗೆ ಬಂದಿದ್ದ ಜನರೆಲ್ಲ ಭಯ ಭೀತರಾದರು. ಆ ಕೋಣೆಯುತ್ತಲೇ ದೃಷ್ಟಿ ಬೀರಿದರು.

ಇತ್ತ ವೈದ್ಯರು, ದಾದಿಯರು, ಸಿಬ್ಬಂದಿ ವರ್ಗದವರೆಲ್ಲ ಲಗುಬಗೆಯಿಂದ ಓಡಾಡಲಾರಂಭಿಸಿದರು. ಆ ಕೂಗು ಬಂದ ಕೋಣೆಯತ್ತ ದೌಡಾಯಿಸತೊಡಗಿದರು. ಒಟ್ಟಾರೆ ಅಲ್ಲೆಲ್ಲ ಗೌಜು, ಗಡಿಬಿಡಿ, ಊಹಾಪೋಹದ ಮಾತು.

ನಡೆದದ್ದಿಷ್ಟು...

ರಕ್ತ ಪರೀಕ್ಷೆ ಮಾಡಿಸಿಕೊಳ್ಳಲು ಆ ಕೇಂದ್ರಕ್ಕೆ ಬಂದಿದ್ದಳು ಹದಿನೇಳು ವರ್ಷದ ಮೌಮಿತಾ ಸೇನ್ ಎಂಬ ತರುಣಿ. ರಕ್ತ ಪರೀಕ್ಷೆಗೆ ಅದನ್ನು ಪಡೆಯುವಾತ ಸಿರೀಂಜನ್ನು ಎಡಗೈಯ ರಕ್ತನಾಡಿಗೆ ಚುಚ್ಚದೆ, ನರಕ್ಕೆ ಚುಚ್ಚಿ ಆಕೆಗೆ ಯಮಯಾತನೆ ತಂದಿತ್ತಿದ್ದ. ವಿಪರೀತ ನೋವುಂಟಾಗಿ ಅವಳು ಚೀತ್ಕರಿಸುವಂತಾಗಿತ್ತು.

ಮುಂಬಯಿಯ ರೂಪರೇಲ್ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿರುವ ಮೌಮಿತಾಳಿಗೆ ಈಗ ಪರೀಕ್ಷೆಗಳಿಗೆ ಕೆಲವೇ ತಿಂಗಳುಗಳು ಉಳಿದಿವೆ. ಜ್ವರ, ಸಣ್ಣಪುಟ್ಟ ತೊಂದರೆಗಳಿಂದಾಗಿ ಆಕೆ ರಕ್ತಪರೀಕ್ಷೆ ಮಾಡಿಸಿಕೊಳ್ಳಬೇಕಿತ್ತು.

ಮೊನ್ನೆ ಸಪ್ಟೆಂಬರ್ ತಿಂಗಳ ೨೨ ರಂದು ನಡೆದ ಈ ಘಟನೆಯ ನಂತರ ಮನೆಗೆ ಬಂದಾಗಿನಿಂದ ಮೌಮಿತಾ ಧೃತಿಗೆಟ್ಟಿದ್ದಾಳೆ. ಸ್ಥೈರ್ಯ ಕಳೆದುಕೊಂಡಿದ್ದಾಳೆ. ಆಕೆಯ ಎಡಗೈಯ ಮಧ್ಯದ ಬೆರಳು ಅಂದಿನಿಂದ ನೇರ ನಿಲ್ಲುವುದಿಲ್ಲ. ಅರ್ಧ ಮಡಿಚಿಕೊಂಡೇ ಇರುತ್ತದೆ. ಯಾವಾಗಲೂ ನಡುಗುತ್ತಿರುತ್ತದೆ. ನಡುಕವನ್ನು ನಿಲ್ಲಿಸಲು ಆಕೆ ತನ್ನ ಅಂಗೈಯನ್ನು ಮುಷ್ಟಿಯಂತೆ ಮಡಚಿಕೊಂಡೇ ಇರಬೇಕಾಗುತ್ತದೆ. ಇನ್ನು ಎಡಗೈ ಬಳಸುವದಂತೂ ದೂರವೇ ಉಳಿಯಿತು.

ತಂದೆ ತಾಯಿಗಳ ಏಕೈಕ ಪುತ್ರಿ ಮೌಮಿತಾ. ತಂದೆ ಹೃದ್ರೋಗಿ ಬೇರೆ. ಎಸ್.ಎಸ್.ಸಿ. ಪರೀಕ್ಷೆಯಲ್ಲಿ ರ್‍ಯಾಂಕು ಗಳಿಸಿದ್ದ ಮೌಮಿತಾಳ ಮುಖದಲ್ಲೀಗ ದೈನ್ಯಭಾವ ಎದ್ದು ಕಾಣುತ್ತದೆ. ಕಣ್ಣುಗಳಲ್ಲಿ ನಿರಾಶೆ ತುಂಬಿದೆ. "ನನ್ನ ಅಪ್ಪಾ [illegible] ಲಕ್ಷ್ಯವಹಿಸಿ ತಂದೆಯ ಇಚ್ಛೆಯಂತೆ [illegible] ಪರೀಕ್ಷೆಯಲ್ಲೂ ರ್‍ಯಾಂಕು ಗಳಿಸುವ ಹಂಬಲಿಕೆ ನನ್ನದು. ಆದರೆ ನೃತ್ಯಾಭ್ಯಾಸದ ಕ್ಲಾಸುಗಳಿಗೆ ಹೋಗಲು ಆಗುತ್ತಿಲ್ಲವಲ್ಲ ಎಂಬುದಕ್ಕೆ ದುಃಖವುಂಟಾಗುತ್ತದೆ. ನೃತ್ಯಾಭ್ಯಾಸಕ್ಕೆ ಎರಡೂ ಕೈಗಳ ಚಲನೆ ಇರಬೇಕು. ಆದರೆ ಈಗ ಎಡಗೈಯನ್ನು ಬಳಸಲಾರದ ಅಸಹಾಯಕ ಸ್ಥಿತಿಯಲ್ಲಿ ನೃತ್ಯಾಭ್ಯಾಸವನ್ನು ಸಂಪೂರ್ಣವಾಗಿ ನಿಲ್ಲಿಸಬೇಕಾಗಿ ಬಂದಿರುವುದೇ ನನಗೊಂದು ದೊಡ್ಡ ವ್ಯಥೆ"- ಮೌಮಿತಾ ನೋವಿನಿಂದ ನುಡಿಯುತ್ತಾಳೆ.

ಕಾಲಕ್ರಮೇಣ ನರದ ಪೆಟ್ಟು ಶಮನಗೊಳ್ಳಬಹುದೆಂಬ ಒಂದೇ ಒಂದು ಆಶಾಕಿರಣ ಬಲವಾಗಿ ಬೇರೂರಿದೆ. ಆದರೂ ಆಕೆಯ ಎಡ ಮೊಳಕೈಯಲ್ಲಿ ಸದಾ ನೋವಿರುತ್ತದೆ.

"ಅಂದಿಗಿಂತ ಈಗ ಸ್ವಲ್ಪ ವಾಸಿ" ಎಂದೆನ್ನುವ ಮೌಮಿತಾ, "ಆತ ಸೂಜಿಯನ್ನು ಎಷ್ಟು ಬಲವಾಗಿ ಚುಚ್ಚಿದನೆಂದರೆ ನನಗೆ ಆ ನೋವನ್ನು ತಡೆದುಕೊಳ್ಳಲಿಕ್ಕೇ ಆಗಲಿಲ್ಲ. ತತ್‌ಕ್ಷಣವೇ ಆತ ಸೂಜಿಯನ್ನು ಹೊರಗೆಳೆದನಾದರೂ ಇಷ್ಟೆಲ್ಲ ಸಮಸ್ಯೆಗಳುಂಟಾಗುತ್ತವೆಂದು ನನಗೆ ಗೊತ್ತಿರಲಿಲ್ಲ. ಆಮೇಲೆ ಮತ್ತೊಬ್ಬಾತ ನನ್ನ ಬಲಗೈಯಿಂದ ತುಸುವೂ ತೊಂದರೆಯಾಗದಂತೆ ರಕ್ತದ ಮಾದರಿಯನ್ನು ತೆಗೆದುಕೊಂಡನೆಂಬುದು ಬೇರೆ ವಿಷಯ," ಎಂದು ವಿವರಿಸುತ್ತಾಳೆ.

ಆಕೆ ರಕ್ತ ಪರೀಕ್ಷೆಗೆ ಹೋದ ಕೇಂದ್ರದ ವ್ಯವಸ್ಥಾಪಕ ಘಟನೆಯ ಬಗ್ಗೆ ಹೇಳುತ್ತ, ತಂತ್ರಜ್ಞನ ತಪ್ಪೇನೂ ಇದರಲ್ಲಿಲ್ಲ. ಆಕೆಯೇ ತನ್ನ ಕೈಯನ್ನು ಕೊಂಚ ಜರುಗಿಸಿದ್ದಕ್ಕೆ ಹೀಗಾಯಿತು ಎಂದು ಸಮರ್ಥಿಸಿಕೊಂಡು ಇದೆಲ್ಲ ತೀರ ಸಾಮಾನ್ಯವೆಂಬಂತೆ ಹಗುರವಾಗಿ ಮಾತಾಡಿಬಿಟ್ಟ.

ನಂತರ ಮೌಮಿತಾಳ ತಂದೆ ಟಿ.ಕೆ. ಸೇನ್ ಜಸ್‌ಲೋಕ್ ಆಸ್ಪತ್ರೆಯ ನರರೋಗ ತಜ್ಞ ಡಾ. [illegible] ಡಾ. ಕತ್ರಕ ಮೌಮಿತಾಳನ್ನು ಪರೀಕ್ಷಿಸಿ [illegible] ದಿನಗಳೊಳಗೆ ಮೌಮಿತಾ ಗುಣಮುಖಳಾಗುವಳೆಂಬ ಸುದಿಯಿಂದ ಸೇನ್‌ಗೆ ಸಮಾಧಾನವಾಯಿತು. ಕುಟುಂಬದ ವೈದ್ಯರಾದ [illegible] ಜೈನರ ಸಲಹೆಯ ಮೇರೆಗೆ ಮೌಮಿತಾಳನ್ನು ಮುಂಬಯಿಯ ವೈದ್ಯಕೀಯ ವಿಜ್ಞಾನ ಸಂಸ್ಥೆಯ ನರಶಾಸ್ತ್ರ ವಿಭಾಗದ ಮುಖ್ಯಸ್ಥ ಬಿ.ಎಸ್. ಸಿಂಘಾಲ್ ಅವರಿಗೆ ತೋರಿಸಲಾ[illegible]. ರಕ್ತ ಹೆಪ್ಪುಗಟ್ಟಿ ಕೈಗೆ [illegible] ಕಂಡುಕೊಂಡರೇ [illegible] ಹೆಚ್ಚಿಗೇನೂ ಹೇಳಲಿಲ್ಲ. ಹೀಗಾಗಿ ಈ ಸಂ[illegible]ವಾಗಿ ಸೇನ್‌ರು ಮತ್ತೆ ಕತ್ರಕ ಅವರನ್ನೇ ಸಂಪರ್ಕಿಸಬೇಕಾಯಿತು.

ಡಾಕ್ಟರುಗಳಲ್ಲೇ ಇಲ್ಲದ [illegible]ಳಮೇಳ; ಸಹಕಾರದ ಅಭಾವ [illegible] ವ್ಯಕ್ತಿಯನ್ನು ಅದೆಷ್ಟು ಪೀಡಿಸುತ್ತದೆಂಬುದಕ್ಕೆ ಮೌಮಿತಾಳ ಪ್ರಕರಣವೇ ಸಾಕ್ಷಿ.

ಅಕ್ಷರಶಃ ಆಕೆಯ ತಂದೆ, ತನ್ನ ಹೃದ್ರೋಗವ[illegible] ಮರೆತು, ಮಗಳಿಗಾಗಿ ಆ ಆಸ್ಪತ್ರೆಯಿಂದ ಈ ಆಸ್ಪತ್ರೆ, ಇಲ್ಲಿಂದ ಆ ಆಸ್ಪತ್ರೆಗೆ ತಿರುಗಬೇಕಾಯಿ[illegible]

ಸದ್ಯಕ್ಕೆ ಮೌಮಿತಾ ನಾನಾವಟಿ ಆಸ್ಪತ್ರೆಯ[illegible] ಫಿಜಿಯೋಥೆರಪಿ ಚಿಕಿತ್ಸೆ ಪಡೆಯುತ್ತಿದ್ದಾಳೆ.

ಮೌಮಿತಾಳಂತೆಯೇ ಅನೇಕ ಅಮಾಯಕರು ಯಾರೋ ಮಾಡಿದ ತಪ್ಪಿಗೆ ಯಾರದೋ ನಿರ್ಲಕ್ಷ್ಯಕ್ಕೋ ಪಕ್ಕಾಗಿ ನೋವನ್ನು ಜೀವನಪರ್ಯಂತ ಅನುಭವಿಸುತ್ತಾರೆ.

ಅಚಾತುರ್ಯಗಳು ಸಂಭವಿಸುತ್ತವೆಸೋ ನಿಜ. ಆದರೆ ಇಂತಹ ಪ್ರಕರಣಗಳನ್ನು ವೈದ್ಯರೇ ಆಗಲಿ ಇತರ ಸಿಬ್ಬಂದಿ ವರ್ಗದವರೇ ಆಗಲಿ ಅಲಕ್ಷ್ಯತನದಿಂದ ನೋಡುವದು ಎಷ್ಟರಮಟ್ಟಿಗೆ ಸರಿ? ಮೌಮಿತಾಳ ಪ್ರಕರಣವನ್ನೇ ತೆಗೆದುಕೊಳ್ಳಿ. ಏನೂ ನಡೆದೇ ಇಲ್ಲವೆಂಬಂತೆ ನಿಷ್ಕಾಳಜಿಯಿಂದ ವರ್ತಿಸುವ ರಕ್ತಪರೀಕ್ಷಾ ಕೇಂದ್ರದ ಸಿಬ್ಬಂದಿಯವರ ಬೇಜವಾಬ್ದಾರಿತನಕ್ಕೆ ಏನೆನ್ನಬೇಕು?

"ಸದ್ಯ ನನ್ನ ಬಲಗೈಗೇ ಈ ತೊಂದರೆ ಉಂಟಾಗಲಿಲ್ಲವಲ್ಲ! ಅದೇ ನನಗೆ ದೊಡ್ಡ ನೆಮ್ಮದಿ," ಎಂಬ ಮೌಮಿತಾಳ ಮಾತು ಎಷ್ಟೆಲ್ಲ ಭಾವನೆಗಳನ್ನುಂಟುಮಾಡುತ್ತದೆ. ●

# ನೆನಪು ನೆರಳಿನಲ್ಲಿ

ಮದುವೆ ಆದ ಹೊಸದು. ನನ್ನ ಮಾವ ಮದುವೆಯಲ್ಲಿ ಕೊಟ್ಟಿದ್ದ ಚಿನ್ನದ ಉಂಗುರವನ್ನು ಕಾರಣಾಂತರದಿಂದ ಮಾರಬೇಕಾಗಿ ಬಂತು. ಇದನ್ನು ನನ್ನ ಹೆಂಡತಿಗೂ ಹೇಳಿರಲಿಲ್ಲ. ಅವಳಿಗೂ ಅನುಮಾನ ಬಂದಿರಲಿಲ್ಲ. ಮೊದಲ ದೀಪಾವಳಿ. ಮಾವನ ಮನೆಗೆ ಹೋಗಬೇಕಾದ ಪ್ರಸಂಗ. ಹೆಂಡತಿಯನ್ನು ಒಂದು ವಾರ ಮೊದಲೇ ಕಳಿಸಿದ್ದೆ. ನನಗೆ ಹೋಗಲು ಭಯ. ಕೈಯಲ್ಲಿ ಉಂಗುರ ಇಲ್ಲ. ಕೇಳಿದರೆ ಏನು ಹೇಳುವುದು? ಏನಾದರೂ ಆಗಲಿ ಎಂದು ಹೊರಟು ಬಿಟ್ಟೆ.

ಮಾವನ ಮನೆಯಲ್ಲಿ ನನಗೆ ರಾಜೋಪಚಾರ. ನನ್ನಾಕೆ ಮಾತ್ರ ನನ್ನ ಕೈಯನ್ನೇ ನೋಡುತ್ತಿದ್ದಳು. ನನಗೆ ಒಳಗೊಳಗೇ ಹೆದರಿಕೆ. ಅಂದು ರಾತ್ರಿ ಅವಳು ನನ್ನನ್ನು ತರಾಟೆಗೆ ತೆಗೆದುಕೊಂಡಳು. ಬಸ್‌ನಲ್ಲಿ ಬರುವಾಗ ಕಳೆದುಹೋಯಿತು ಎಂದು ಸುಳ್ಳು ಹೇಳಿದೆ. ಅವಳು ನಂಬಲಿಲ್ಲ. ಮಾತನಾಡದೇ ಮಲಗಿದಳು. ಮಾರನೇ ದಿನ ಮನೆಯಲ್ಲಿ ಎಲ್ಲರೂ ಮಂಕಾಗಿದ್ದರು. ಇದೆಲ್ಲಾ ನನ್ನ ಸುಳ್ಳಿನ ಪ್ರಭಾವ ಅನ್ನಿಸಿತು. ಅದೇ ದಿನ ಸಾಯಂಕಾಲ ಮಾವ ನನಗೆ ಹೊಸ ಉಂಗುರವನ್ನು ಕೊಡುತ್ತಾ, "ಇದನ್ನೂ ದಯವಿಟ್ಟು ಕಳೆದುಕೊಳ್ಳಬೇಡಿ ಅಳಿಯಂದಿರೆ," ಎಂದು ಹೇಳಿದರು. ನಾನಂತೂ ಬದುಕಿದ್ದೂ ಸತ್ತಂತೆಯೇ ಆಗಿದ್ದೆ.

ಈ ಘಟನೆ ನಡೆದು ಸುಮಾರು ಇಪ್ಪತ್ತು ವರುಷಗಳೇ ಆಗಿವೆ. ಆದರೂ ನನ್ನಾಕೆಗೆ ವಿಷಯ ಗೊತ್ತಾಗಿಲ್ಲ. ಆದರೆ ಉಂಗುರ ನೋಡುತ್ತಾ ಇದ್ದಾಗಲೆಲ್ಲಾ ನನಗೆ ಹಳೆಯದೆಲ್ಲಾ ನೆನಪಿಗೆ ಬರುತ್ತದೆ.

• ಎಸ್. ವ್ಹಿ. ರಾಮಚಂದ್ರ

ನನಗೆ ಆಗ ಹನ್ನೆರಡು ವರ್ಷ. ಏಳನೆಯ ತರಗತಿಯಲ್ಲಿ ಓದುತ್ತಿದ್ದೆ. ಮನೆಯಲ್ಲಿ ಬಡತನದ ಸ್ಥಿತಿ. ಎಷ್ಟೋ ಬಾರಿ ತಿನ್ನುವುದಕ್ಕೆ ಏನೂ ಇಲ್ಲದೆ ಉಪವಾಸವೇ ಇರುತ್ತಿದ್ದೆವು. ಒಮ್ಮೆ ದಿನವಿಡಿ ಏನೂ ತಿಂದಿರಲಿಲ್ಲ. ಮಾರನೆಯ ಬೆಳಿಗ್ಗೆ ಹೊಟ್ಟೆಯಲ್ಲಿ ಭಯಂಕರ ತಳಮಳ. ಪಕ್ಕದ ಮನೆಯಿಂದ ಘಮಘಮ ವಾಸನೆ ಗಾಳಿಯಲ್ಲಿ ತೇಲುತ್ತಾ ಬಂದು ಹಸಿವನ್ನು ಇನ್ನೂ ಹೆಚ್ಚಿಸಿತು. ಮನೆಯಲ್ಲಿ ಯಾರಿಗೂ ತಿಳಿಯದಂತೆ ಅವರ ಮನೆಗೆ ಹೋಗಿ, ಮನೆಯಾಕೆಯ ಬಳಿ ಅದೂ ಇದೂ ಮಾತನಾಡುತ್ತಾ ದಿನವಿಡಿ ಏನೂ ತಿನ್ನದೆ ಇದ್ದುದನ್ನು ಹೇಳಿದೆ. ಆಕೆ ಕನಕರದಿಂದ ಮಾತಾಡಿ, "ನೋಡು, ನನಗೆ ತುಂಬಾ ಸುಸ್ತು. ನೀನು ಬಾವಿಯಿಂದ ಇಪ್ಪತ್ತು ಬಿಂದಿಗೆ ನೀರು ಸೇದಿ ಆ ಕೊಳಗಕ್ಕೆ ತುಂಬಿಸು. ಅಷ್ಟರಲ್ಲಿ ಹಿಟ್ಟು ಕಲಸಿ ಚಪಾತಿ ಮಾಡಿಕೊಡುತ್ತೇನೆ, ತಿನ್ನುವೆಯಂತೆ," ಎಂದರು. ನನಗೆ ಮೃಷ್ಟಾನ್ನವೇ ಸಿಕ್ಕುವುದೇನೋ ಎನಿಸುವಷ್ಟು ಸಂತೋಷವಾಗಿ ಗಡಬಡಿಸಿಕೊಂಡು ಎದ್ದೆ. ಅವರ ಮನೆಯ ಹಿತ್ತಲಿನಲ್ಲಿ ಭಾವಿಯಿತ್ತು. ಆದರೆ ಬಹಳ ಆಳ. ನಿರ್ವಾಹವಿಲ್ಲದೆ ನೀರು ಸೇದಲು ಆರಂಭಿಸಿದೆ. ಸಣ್ಣಗೆ ತಲೆ ಸುತ್ತಲಾರಂಭವಾಯಿತು. ಹೇಗೋ ಸಾವರಿಸಿಕೊಂಡು ನೀರು ಸೇದಿ ಮುಗಿಸಿದೆ. ಆಕೆ ಒಳಕ್ಕೆ ಕರೆದು ಎರಡು ಬಿಸಿ ಬಿಸಿ ಚಪಾತಿಗಳನ್ನು ಒಂದು ಕಾಗದದ ಮೇಲಿಟ್ಟು ನನಗೆ ಕೊಟ್ಟಳು. ನನ್ನ ಸಂತೋಷಕ್ಕೆ ಪಾರವೇ ಇರಲಿಲ್ಲ. ಗಬಗಬನೆ ತಿಂದುಬಿಡಬೇಕು ಎನ್ನಿಸಿತು. ಆದರೆ ನಮ್ಮ ತಾಯಿ ಮನೆಯೊಳಗಿನಿಂದಲೇ ನನ್ನ ಹೆಸರು ಹಿಡಿದು ಗಟ್ಟಿಯಾಗಿ ಕೂಗಿದರು. ನಾನು ಚಪಾತಿ ಸಂಪಾದಿಸಿದ ವಿಚಾರ ಅವರಿಗೆ ತಿಳಿಯಬಾರದೆಂದು ಕಾಗದದಲ್ಲಿ ಸುತ್ತಿಕೊಂಡು ಮನೆಗೆ ಓಡಿ ಹೋಗಿ, ನನ್ನ ಪುಸ್ತಕಗಳ ನಡುವೆ ಬಚ್ಚಿಟ್ಟೆ. •

ನಂತರ ಹಸಿವು ಹಿಂಗಿಸಲು ತುಂಬ ನೀರು ಕುಡಿದು, ಪುಸ್ತಕಗಳ ನಡುವೆ ಇದ್ದ ಚಪಾತಿ ಪೊಟ್ಟಣವನ್ನು ಇಟ್ಟುಕೊಂಡು ಸುಮಾರು ಎರಡು ಮೈಲು ದೂರವಿದ್ದ ಶಾಲೆಗೆ ನಡೆದುಕೊಂಡು ಹೋದೆ. ತರಗತಿಯ ಒಳಗೆ ಹೋಗುವ ಗಂಟೆ ಬಾರಿಸಿತು. ಭಯಂಕರ ಹಸಿವಿನಲ್ಲೇ ಪಾಠ ಕೇಳಿ ಯಾಯಿತು.

ಮಧ್ಯಾಹ್ನ ಊಟದ ಬಿಡುವಿನ ಗಂಟೆ ಬಾರಿ ಸಿದಾಗ ಸಂತೋಷದಿಂದ ಪುಸ್ತಕಗಳನ್ನೂ ಪೊಟ್ಟ ಣವನ್ನೂ ತೆಗೆದುಕೊಂಡು ಆಚೆ ಬದಿಗೆ ಓಡಿದೆ. ಓಡುತ್ತಿದ್ದಾಗ ಅಕಸ್ಮಾತ್ತಾಗಿ ಯಾರೋ ಹಿಂದಿನಿಂದ ತಳ್ಳಿದ್ದರಿಂದ ಪುಸ್ತಕಗಳ ನಡುವೆ ಇದ್ದ ಚಪಾತಿಗಳು ನೆಲದ ಮೇಲೆ ಬಿದ್ದವು. ಸುಮಾರು ಹೊತ್ತಿನಿಂದ ಮಳೆ ಬಿದ್ದಿದ್ದರಿಂದ ನೆಲದಲ್ಲಿ ಒಂದು ಇಂಚು ಆಳದಷ್ಟು ಕೆಸರು. ನನ್ನ ದುಃಖಕ್ಕೆ ಪಾರವೇ ಇರಲಿಲ್ಲ. ಏನು ಮಾಡಲೂ ತೋಚದೆ ಗಟ್ಟಿಯಾಗಿ ಅಳಲು ಪ್ರಾರಂಭಿಸಿದೆ. ಅದೇ ಸಮಯಕ್ಕೆ ನಮ್ಮ ಮೇಷ್ಟರು ಅಲ್ಲಿಗೆ ಬಂದು ಕಾರಣ ಕೇಳಿದರು. ಅದು ತಿಳಿದಾಗ ಅವರಿಗೆ ನನ್ನ ಬಗ್ಗೆ ಕರುಣೆಯುಕ್ಕಿ ಬಂತು. ನನ್ನನ್ನು ಸ್ಟಾಫ್ ರೂಮಿಗೆ ಕರೆದುಕೊಂಡು ಹೋಗಿ, ತಮಗಾಗಿ ತಂದಿದ್ದ ತಿಂಡಿಯೆಲ್ಲವನ್ನೂ ನನಗೆ ಕೊಟ್ಟು, "ಆಚೆಗೆ ಹೋಗಿ ತಿನ್ನು, ಅಳ ಬೇಡ," ಎಂದರು ಪ್ರೀತಿಯಿಂದ. ನನಗಾದ ಆಶ್ಚರ್ಯ, ಸಂತೋಷ ಅಷ್ಟಿಷ್ಟಲ್ಲ. ಅಷ್ಟೇ ಅಲ್ಲ, ನಾನು ಆ ಶಾಲೆಯಲ್ಲಿ ಓದುತ್ತಿರುವವರೆಗೂ ಪ್ರತಿ ಮಧ್ಯಾಹ್ನವೂ ಆ ಮೇಷ್ಟರು ನನಗೆ ಉಪಾಹಾರ ಒದಗಿಸುತ್ತಿದ್ದರು.

• ಎ. ಪದ್ಮಿನಿ

ಇದು ಸುಮಾರು ಎರಡು ವರ್ಷಗಳ ಹಿಂದೆ ನಡೆದ ಘಟನೆ. ನಾನಾಗ ಬೆಂಗಳೂರಿನ ದೂರ ವಾಣಿ ನಗರದ ಮನೆಯೊಂದರಲ್ಲಿ ವಾಸವಾಗಿದ್ದೆ. ನಮ್ಮ ಪಕ್ಕದ ಮನೆಯಲ್ಲಿ ತಮಿಳನೊಬ್ಬನಿದ್ದ. ಅವನೊಬ್ಬ ತಿಕ್ಕಲು. ಅವನ ಕೆಲವೊಂದು ತೆವ ಲುಗಳು ಇದ್ದಕ್ಕಿದ್ದಂತೆ ಜಾಗೃತಗೊಳ್ಳುತ್ತಿದ್ದವು. ಹೀಗೆ ಜಾಗೃತಗೊಂಡಾಗ ತನ್ನ ಮನಸ್ಸಿಗೆ ಬಂದ ದ್ದನ್ನು ಮಾಡಿಯೇ ತೀರುವುದು ಅವನ ಜಾಯ ಮಾನ.

ಅವನು ಹಾಗಿದ್ದರೆ ನಾನೊಂದು ಬೇರೆಯೇ ತರಹದ ಪ್ರಾಣಿ. ಅವನು ತಿಕ್ಕಲುಗಳ ತಿರುಕನಾ ದರೆ, ನಾನೊಂದು ಸಂಶಯ ಪಿಶಾಚಿ. ಅದರಲ್ಲೂ ದೆವ್ವ ಭೂತಗಳೆಂದರೆ ಮೈಯಲ್ಲಿ ನಡುಕ. ಹಾಗೆಂದೆ ಸೂರ್ಯ ಅಸ್ತಂಗತನಾಗುವುದರೊಳಗೆ ಮನೆಗೆ ಮರುಳುತ್ತಿದ್ದಂತೆಯೇ, ನಾನು ಕೂಡ ನನ್ನ ಗೂಡು ಸೇರಿಕೊಂಡುಬಿಡುತ್ತೇನೆ.

ಆ ವರ್ಷ ಶಿವರಾತ್ರಿ ಅಮಾವಾಸ್ಯೆಯ ಮರು ದಿನ ಮಾಮೂಲಿನಂತೆ ಬೆಳಿಗ್ಗೆ ಐದು ಗಂಟೆಗೆ ಎದ್ದು ವಾಯುವಿಹಾರಕ್ಕೆಂದು ನಮ್ಮ ಮನೆಯ ಮಾಳಿಗೆಗೆ ಹೋದೆ. (ಬೆಂಗಳೂರಿನಂತಹ ಕಾಂಕ್ರೀಟ್ ಜಂಗಲ್‌ನಲ್ಲಿ ಇದಕ್ಕೆ ಮನೆ ಮಾಳಿಗೆ ಗಿಂತ ಬೇರೊಂದು ಸೂಕ್ತ ಸ್ಥಳ ಸಿಗಲಾರದು!) ಇನ್ನೂ ಲೋಕವೆಲ್ಲ ಮಲಗಿತ್ತು. ಗಾಢಾಂಧಕಾರ. ಎಲ್ಲೆಲ್ಲೂ ಸ್ಮಶಾನದ ನೀರವತೆ. ಬೀದಿ ನಾಯಿಗಳು ಅಲ್ಲೊಂದು ಇಲ್ಲೊಂದು ಕುಂಯ್‌ಗುಡುತ್ತಿದ್ದವು. ಇದ್ದಕ್ಕಿದ್ದಂತೆ ಎಲ್ಲಿಂದಲೋ "ಉಸ್, ಉಸ್" ಎಂಬ ಏದುಸಿರು ಕೇಳಿಸಿತು. ಸುತ್ತ ಮುತ್ತ ವಠಾರದಲ್ಲಿ ಎಚ್ಚರಗೊಂಡವನೆಂದರೆ ನಾನೊ ಬ್ಬನೆ. ಎದೆ ಧಸಕ್ಕೆಂದಿತು. ಹಿಂದು ಮುಂದೆ ನೋಡದೇ ಸರಕ್ಕನೆ ಕೆಳಗೆ ಓಡಿದೆ. ನನಗಿಂತಲೂ ಸ್ವಲ್ಪ ಧೈರ್ಯಸ್ಥಳೆಂದು ಜಂಬ ಕೊಚ್ಚಿಕೊಳ್ಳುವ ನನ್ನಾಕೆಯನ್ನು ಎಬ್ಬಿಸಿ ಮಾಳಿಗೆಗೆ ಕರೆತಂದೆ. ಸುತ್ತಲೂ ಕಣ್ಣಾಡಿಸಿದರೆ, ಪಕ್ಕದ ಮನೆಯ ಮಾಳಿ ಗೆಯ ಮೂಲೆಯೊಂದರಲ್ಲಿ ಎರಡು ಮನುಷ್ಯ ಕಾಲುಗಳು ಆಕಾಶಕ್ಕೆ ಮುಖಮಾಡಿ ನಿಂತಿವೆ. ಭೂತಗಳು ನಡೆಯುವಾಗ ಅವುಗಳ ಪಾದಗಳು ಹಿಂದುಮುಂದಾಗಿರುತ್ತವೆಂದೂ, ನಿಂತಾಗ ಕಾಲು ಮೇಲೆಮಾಡಿ ಬೋರಲಾಗಿ ನಿಲ್ಲುತ್ತವೆಂದೂ ನನಗೆ ಯಾರೋ ಹೇಳಿದ್ದು ನೆನಪಾಯಿತು. ನಾನು ಇನ್ನೂ ತಣ್ಣಗಾದೆ. ಹೇಗೋ ಧೈರ್ಯ ತಂದುಕೊಂಡು ಮನೆಯಾಕೆಯ ಕೈ ಹಿಡಿದುಕೊಂಡು ಆ

ಮೂಲೆಯ ಹತ್ತಿರ ಹೋಗಿ ನೋಡಿದರೆ ಪಕ್ಕದ ಮನೆಯ ಆ ತಿಕ್ಕಲು ಶಿರ್ಷಾಸನ ಹಾಕಿದ್ದ. ನಮ್ಮನ್ನು ನೋಡಿ ಎದ್ದು ಬಂದು, "ಗುಡ್ ಮಾರ್ನಿಂಗ್ ಸಾರ್," ಎಂದ. ಓಹೋ, ಇವನಿಗೆ ಈಗ ಯೋಗಾಸನದ ಹುಚ್ಚು ಬೇರೆ ಹಿಡಿದಿದೆಯೆಂದು ಸಮಾಧಾನದ ನಿಟ್ಟುಸಿರು ಬಿಟ್ಟು ಮಹಡಿಯಿಂದ ಕೆಳಗಿಳಿದೆ.

• ಪ್ರಕಾಶ ಮ. ಬಿಸ್ವಾಗರ

**ಮುಂ**ಬಯಿ ನಗರದ ಜಂಜಾಟ. ಬಸ್ಸು, ರೈಲು, ಹೋಟೇಲು- ಕೊನೆಗೆ ಅಗಸನ ಅಥವಾ ಹಜಾಮನಂಗಡಿಯಲ್ಲೂ ಕ್ಯೂ!. ನೀರಿಲ್ಲದೆ ಭುಸುಗುಟ್ಟುವ ನಲ್ಲಿ. ಕೆಸರಿನ ಗದ್ದೆಯಲ್ಲಿ ನೇಗಿಲೆಳೆಯುವ ಗೂಳಿಯಂತಹ ಏಳು ವರುಷದ ಜೀವನಕ್ಕೆ ತುದಿಗಾಲಲ್ಲಿ ನಿಂತು ಕೊನೆ ಹುಡುಕುತ್ತಿರುವಾಗ ಮದ್ರಾಸಿನ ಕೈಗಾರಿಕಾ ಸಂಸ್ಥೆಯಿಂದ ಜಗ್ಗೆಂದು ಮಿಂಚಿತು ಆಶಾಕಿರಣ. ಸಂದರ್ಶನ ತೆಗೆದುಕೊಳ್ಳುವಾತ, "ಮದರಾಸಿಗೆ ಹೋಗುವಿರಾ?" ಎಂದು ಕೇಳಿದ್ದಕ್ಕೆ "ಅಂಡಮಾನಿಗೂ ತಯಾರು. ಇಲ್ಲಿಂದ ಬಿಡುಗಡೆ ಸಿಕ್ಕಿದರೆ ಸಾಕು!" ಎಂದಿದ್ದೆ.

೧೯೬೩ರ ಜನವರಿಯಲ್ಲಿ ಆ ಸಂಸ್ಥೆಯವರು ನನ್ನನ್ನು ಮದರಾಸಿನ ಗಿಂಡಿಗೆ ತಂದಿಳಿಸಿದರು. ಆ ಕಾರ್ಖಾನೆಯಲ್ಲಿ ಹಿತ್ತಾಳಿ ನಳಿಕೆಯಿಂದ ರೀಫಿಲ್ ತಯಾರಿಸುತ್ತಿದ್ದರು. ನಾನು ಕೆಲಸಕ್ಕೆ ಸೇರಿ ಒಂದೆರಡು ದಿನ ಕಳೆದಿರಬಹುದು; ಒಂದು ದಿನ ನಾನು ರೀಫಿಲ್ ವಿಭಾಗದಿಂದ ಹಾದುಹೋಗುವಾಗ ಮೇಜಿನ ಮೇಲೆ ಬಿಳಿಯ ಪದಾರ್ಥವನ್ನು ಕಾಗದದಲ್ಲಿ ಮೇಲೆ ಇಟ್ಟಿದ್ದನ್ನು ನೋಡಿದೆ. ಅದೇನೆಂದು ಅಲ್ಲಿ ನಿಂತಿದ್ದ ಆ ವಿಭಾಗದ ಮೇಲಧಿಕಾರಿಯನ್ನು ವಿಚಾರಿಸಿದೆ. ಆತ, "ಶುಗರ್-ಕ್ಯಾಂಡಿ, (ಕಲ್ಲು ಸಕ್ಕರೆ) ಒಂದು ತುಂಡನ್ನು ಬಾಯಿಗೆಸೆದು ರುಚಿ ನೋಡಿ," ಎಂದು ಮುಸಿ ಮುಸಿ ನಗುತ್ತಾ ಹೇಳಿದ. ಅದನ್ನು ಕಲ್ಲು ಸಕ್ಕರೆ ಎಂದು ನಂಬುವಷ್ಟು ದಡ್ಡನಲ್ಲದಿದ್ದರೂ ಅದೊಂದು ಘೋರ ವಿಷ ಎಂದು ತಿಳಿದುಕೊಳ್ಳುವಂತಹ ಜಾಣನೂ ನಾನಾಗಿರಲಿಲ್ಲ. ತಟ್ಟನೆ ಮಿದುಳಿಗೆ ಕುಟ್ಟಿತೊಂದು ಘಟನೆ.

ಮುಂಬಯಿಯಲ್ಲಿ ನಾನು ಕೆಲಸ ಮಾಡುತ್ತಿದ್ದ ಕಾರ್ಖಾನೆಯ ಧಣಿಗೆ ಬಿಳಿತ್ವಚೆಯವರೆಂದರೆ ತುಂಬಾ ಆಕರ್ಷಣೆ. ಅಲ್ಲೊಬ್ಬ ನಿವೃತ್ತ ಮೇಜರ್ ಕೆಲಸಕ್ಕೆ ಸೇರಿದರು. ಅವರಿಗೆ ಸದಾ ಚಾಕಲೇಟು ಚೀಪುವ ಗೀಳು. ಆತ ಬಹಿರಂಗದಲ್ಲಿ ಸಿಂಹ; ಆದರೆ ಅಂತರಂಗದಲ್ಲಿ ಕುರಿಮರಿ. ದಿನಗಳೆದಂತೆ ಅವರ ವಿಭಾಗದ ಕೆಲ ನೌಕರರಿಗೆ ಸಲಿಗೆ ಹೆಚ್ಚಿತು. ಪರಿಣಾಮ ಅವರಿಲ್ಲದಾಗ ಮೇಜಿನಂಕಣ ಎಳೆದು ಚಾಕಲೇಟುಗಳನ್ನು ಮಾಯಮಾಡತೊಡಗಿದರು. ಇವರ ವರ್ತನೆಯಿಂದ ಬೇಸತ್ತ ಅವರು ಒಂದು ದಿನ "ಬ್ರೂಕ್ ಲ್ಯಾಕ್ಸ್" ಮಾತ್ರೆಗಳ ಕವಚ ತೆಗೆದು ಬೇರೆ ಹೊದಿಕೆ ಸುತ್ತಿಟ್ಟಿದ್ದರು. ದಿನಾ ಲಂಗು ಲಗಾಮಿಲ್ಲದೆ ಮೇಯುತ್ತಿದ್ದ 'ಬಕರಾ'ಗಳು ಅಂದೂ ಮಜಾ ಉಡಾಯಿಸಿದರು. ಹೊತ್ತು ಏರಿದಂತೆ ಉದರದೊಳಗೆ ಉರುಳಾಟ. ಒಬ್ಬೊಬ್ಬರೆ ಹೊಟ್ಟೆ ಹಿಡಿದು "ಸಾಬ್ ಸಂಡಾಸ್" ಎಂದು ಓಡುತ್ತಿರುವಾಗ ದೊರೆಗೆ ಮೀಸೆಯೊಳಗೇ ನಗು. ಎಲ್ಲರ ಭೇದಿ ನಿಂತಾಗ ಅವರನ್ನು ಹತ್ತಿರಕ್ಕೆ ಕರೆದು, "ಪರರ ವಸ್ತುಗಳನ್ನು ತಿನ್ನಬಾರದು ಎಂಬುದನ್ನು ಇನ್ನಾದರೂ ಕಲಿತುಕೊಳ್ಳಿ. ನಾನು ಮೇಜಿನೊಳಗೆ ವಿಷ ಇಟ್ಟಿದ್ದರೆ ನೀವೆಲ್ಲಾ ತಿಂದು ಸಾಯುತ್ತಿದ್ದಿರಿ. ನಾನು ನಿಮಗೆ ಬರೀ ಭೇದಿ ಮಾತ್ರೆ ಇಟ್ಟಿದ್ದೆ," ಎಂದು ಎಚ್ಚರಿಕೆ ಕೊಟ್ಟು ಕಳುಹಿಸಿದ್ದರು.

ಕೆಲ ತಾಸುಗಳ ನಂತರ ಕಲ್ಲುಸಕ್ಕರೆ ಹೋಲುತ್ತಿದ್ದ ಪದಾರ್ಥ ಪೊಟ್ಯಾಶಿಯಂ ಸಯನೈಡ್ ಎಂದೂ, ಅದನ್ನು ರೀಫಿಲ್‌ಗಳನ್ನು ಬಿಳಿ ಮಾಡಲು ಉಪಯೋಗಿಸುತ್ತಿದ್ದರು ಎನ್ನುವುದನ್ನೂ ತಿಳಿದುಕೊಂಡೆ. ತಿಂದಿದ್ದರೆ ಅಂದು ನನ್ನನ್ನು ಶ್ರಮ ಇಲ್ಲದೆ ಗಿಂಡಿಯಿಂದ ಗುಂಡಿಗೆಸೆಯುತ್ತಿದ್ದ ಆ ಅಧಿಕಾರಿ.

• ಜೆ. ಎಲ್. ಬಚೋರ್ಣೀಝು



# ಜ್ಞಾನ ನಿಧಿ

ವಿದ್ಯಾರ್ಥಿ ಅಂಕಣ

## ಕರ್ನಾಟಕದ ಪ್ರಥಮಗಳು

೧. ಕರ್ನಾಟಕದ ಮೊದಲ ನವೋದಯ ಕವಯಿತ್ರಿ– ಬೆಳಗೆರೆ ಜಾನಕಮ್ಮ.
೨. ಪ್ರಥಮ ಬಾರಿಗೆ ಪಂಪ ಪ್ರಶಸ್ತಿ ಪಡೆದವರು– ರಾಷ್ಟ್ರಕವಿ ಕುವೆಂಪು.
೩. ಪುಸ್ತಕ ಪ್ರಕಾಶನಕ್ಕೆ ಪದ್ಮಶ್ರೀ ಪಡೆದ ಮೊದಲ ಕನ್ನಡಿಗ– ಜಿ.ಬಿ. ಜೋಷಿ.
೪. ಗೋಯೆಂಕಾ ಪ್ರಶಸ್ತಿ ಪಡೆದ ಮೊದಲ ಕನ್ನಡ ಪತ್ರಿಕೋದ್ಯಮಿ– ಪಾ.ವೆಂ. ಆಚಾರ್ಯ.
೫. ಕನ್ನಡದ ಮೊದಲ ವೈಜ್ಞಾನಿಕ ಪತ್ರಿಕೆಯ ಹೆಸರು– 'ವಿಜ್ಞಾನ' (೧೯೧೮).
೬. ಕನ್ನಡದ ಪ್ರಥಮ ನಾಟಕ– ಸಿಂಗರಾರ್ಯನ "ಮಿತ್ರವಿಂದಾಗೋವಿಂದ."
೭. ಕರ್ನಾಟಕದಲ್ಲಿ ಲಸಿಕೆಯನ್ನು ಮೊಟ್ಟಮೊದಲಿಗೆ ಪರಿಚಯಿಸಿದವರು– ಅಬ್ಬೆ ದುಬಾಯ್.
೮. ಕನ್ನಡದಲ್ಲಿ ತಯಾರಾದ ಪ್ರಥಮ ವಾಕ್ ಚಿತ್ರ– 'ಸತೀ ಸುಲೋಚನ.'
೯. ರಾಷ್ಟ್ರಗಳ ಸ್ವರ್ಣಪದಕ ಗಳಿಸಿದ ಮೊದಲ ಕನ್ನಡ ಚಿತ್ರ– 'ಸಂಸ್ಕಾರ.'
೧೦. ರಾಷ್ಟ್ರಪತಿ ಪ್ರಶಸ್ತಿ ಪಡೆದ ಮೊದಲ ಕನ್ನಡದ ಗಾಯಕ– ಶಿವಮೊಗ್ಗ ಸುಬ್ಬಣ್ಣ.
೧೧. 'ಬೈಬಲ್' ಅನ್ನು ಕನ್ನಡಕ್ಕೆ ಪ್ರಥಮವಾಗಿ ತಂದವರು– ಜಾನ್ ಹ್ಯಾಂಡ್ಸ್.
೧೨. ರಾಷ್ಟ್ರಪ್ರಶಸ್ತಿ ಗಳಿಸಿದ ಮೊದಲ ಕನ್ನಡ ಚಲನ ಚಿತ್ರ– 'ಬೇಡರ ಕಣ್ಣಪ್ಪ.'
೧೩. ಜ್ಞಾನಪೀಠ ಪ್ರಶಸ್ತಿ ಪಡೆದ ಮೊದಲ ಕನ್ನಡ ಕೃತಿ– 'ರಾಮಾಯಣ ದರ್ಶನಂ.'
೧೪. ಕನ್ನಡದ ಮೊದಲ ಸ್ವತಂತ್ರ ಸಾಮಾಜಿಕ ಕಾದಂಬರಿ– 'ಇಂದಿರಾಬಾಯಿ.'
೧೫. ಕನ್ನಡದ ಪ್ರಥಮ ಶಾಸನ– ಹಲ್ಮಿಡಿಯ ಶಾಸನ (ಕ್ರಿ.ಶ. ಸುಮಾರು ೪೫೦).
೧೬. ಕರ್ನಾಟಕದಲ್ಲಿನ ಪ್ರಥಮ ವೀರಗಲ್ಲು– ತಮಟಕಲ್ಲು (ಚಿತ್ರದುರ್ಗ ಜಿಲ್ಲೆ.)
೧೭. ಕರ್ನಾಟಕದ ಮೊದಲ ಗಣಿತ ಶಾಸ್ತ್ರಜ್ಞ– ಮಹಾವೀರಾಚಾರ್ಯ.
೧೮. ಪ್ರಥಮ ಕನ್ನಡ–ಇಂಗ್ಲೀಷ್ ನಿಘಂಟನ್ನು ರಚಿಸಿದವರು– ವಿಲಿಯಂ ರೀವ್ಸ್.
೧೯. ಕನ್ನಡ ಕೆಲಸಕ್ಕೆ ಡಾಕ್ಟರೇಟ್ ಪದವಿ ಪಡೆದ ಮೊದಲಿಗ– ಫರ್ಡಿನಾಂಡ್ ಕಿಟ್ಟೆಲ್.
೨೦. ಕರ್ನಾಟಕದ ಮೊದಲ ಕ್ರಿಕೆಟ್ ಆಟಗಾರ – ಪಿ.ಇ. ಪಾಲಿಯಾ.
೨೧. ಊರ್ವಶಿ ಪ್ರಶಸ್ತಿ ಪಡೆದ ಕನ್ನಡದ ಮೊದಲ ನಟಿ– ನಂದಿನಿ ಭಕ್ತವತ್ಸಲ.
೨೨. ಕರ್ನಾಟಕದಲ್ಲಿ ತಯಾರಾದ ಮೊದಲ ಮೂಕ ಚಿತ್ರ– 'ಮೃಚ್ಛಕಟಿಕ.'
೨೩. ಕಾಳಿದಾಸ ಸಮ್ಮಾನ್ ಪ್ರಶಸ್ತಿ ಪಡೆದ ಕನ್ನಡಿಗ– ಮಲ್ಲಿಕಾರ್ಜುನ ಮನ್ಸೂರ್.
೨೪. ಕರ್ನಾಟಕದ ಮೊಟ್ಟಮೊದಲ ವೃತ್ತಿ ನಾಟಕ ಸಂಸ್ಥೆ– ಶ್ರೀ ವೀರನಾರಾಯಣ ಪ್ರಸಾದಿತ ಕೃತಪುರ ನಾಟಕ ಮಂಡಳಿ, ಗದಗ (೧೮೭೪ರಲ್ಲಿ ಗೋಪಾಲಾಚಾರ್ಯ ಸಕ್ಕರಿಯವರಿಂದ ಸ್ಥಾಪನೆಯಾಯಿತು.)
೨೫. ಕನ್ನಡದ ಮೊದಲ ವಚನಕಾರ್ತಿ– ಅಕ್ಕಮಹಾದೇವಿ.

ಸಂಗ್ರಹ: ಶಂಕರಗೌಡ ವೈ. ಪಾಟೀಲ

# ಕಲ್ಪಗಳ ಗಣನೆ

'ಕಲ್ಪ' ಎಂದರೇನು? 'ಕಲ್ಪ' ಎಂಬ ಪದಕ್ಕೆ ಸಾಮಾನ್ಯವಾಗಿ ಮೂರು ಮುಖ್ಯ ಅರ್ಥಗಳನ್ನು ಹೇಳಬಹುದು: ೧. ಬ್ರಹ್ಮನ ಒಂದು ದಿನ ೨. ಒಂದು ವೇದಾಂಗ ೩. ಪ್ರಳಯ. ನಾನೀಗ ಹೇಳಹೊರಟಿರುವುದು ಮೊದಲನೆಯದಾದ ಬ್ರಹ್ಮನ ದಿನವನ್ನು ಕುರಿತು.

ಯುಗಗಳು ನಾಲ್ಕು- ಕೃತ, ತ್ರೇತಾ, ದ್ವಾಪರ ಮತ್ತು ಕಲಿ. ಕ್ರಮವಾಗಿ ಇವುಗಳ ಪ್ರಮಾಣ ೧೭ ಲಕ್ಷ ೨೮ ಸಾವಿರ, ೧೨ ಲಕ್ಷ ೯೬ ಸಾವಿರ, ೮ ಲಕ್ಷ ೬೪ ಸಾವಿರ ಮತ್ತು ೪ ಲಕ್ಷ ೩೨ ಸಾವಿರ ವರ್ಷಗಳು. ಈ ನಾಲ್ಕೂ ಯುಗಗಳನ್ನು ಸೇರಿಸಿದರೆ ಒಂದು 'ಮಹಾಯುಗ.' ಇಂಥ ಮಹಾಯುಗಗಳ ಚಕ್ರ ೧೦೦೦ ಬಾರಿ ತಿರುಗಿದಾಗ ಬ್ರಹ್ಮನಿಗೆ ಒಂದು ಹಗಲು ಆಗುತ್ತದೆ. ಇದರ ದ್ವಿಗುಣವೇ ಬ್ರಹ್ಮನ ಒಂದು ದಿನಕ್ಕೆ (೨೪. ಗಂಟೆಗಳು ನಮ್ಮ ಎಣಿಕೆಯ ಪ್ರಕಾರ) ಸಮ. ಈ ಬ್ರಹ್ಮನ ಒಂದು ದಿನವನ್ನು ನಾವು ನಮ್ಮ ಪುರಾಣ ಮತ್ತು ಖಗೋಳ ಶಾಸ್ತ್ರಗಳಲ್ಲಿ 'ಕಲ್ಪ' ಎಂದು ಕರೆಯುತ್ತೇವೆ. ಒಂದು 'ಕಲ್ಪ' ಎಂದರೆ ೮೬೪ಕೋಟಿ (೪೩ ಲಕ್ಷ ೨೦ ಸಾವಿರ ವರ್ಷ x ೧೦೦೦ x ೨) ವರ್ಷಗಳು. ಒಂದು ಮಾಸ ಎಂದರೆ ಮೂವತ್ತು ದಿನಗಳಿರಬೇಕಷ್ಟೇ. ಇಂಥ ಕಲ್ಪ(ದಿನ)ಗಳು ಒಂದು ಮಾಸದಲ್ಲಿ ಮೂವತ್ತು ಇರುತ್ತವೆ. ನಾವು ದಿನಗಳನ್ನು ಗಣಿಸಲು ಪಾಡ್ಯ, ಬಿದಿಗೆ ಎಂದು ಹೇಗೆ ಹೇಳುತ್ತೇವೆಯೋ ಅದರಂತೆ ಈ ಎಲ್ಲಾ ದಿನಗಳಿಗೂ ಒಂದೊಂದು ಹೆಸರು ಇರುತ್ತದೆ. ಬ್ರಹ್ಮನಿಗೆ ಸಮಗಿರುವಂತೆ ಮಾಸ ಮತ್ತು ಸಂವತ್ಸರಗಳು ಇರುವುದಿಲ್ಲ. ಮೊದಲನೆಯ ವರ್ಷಕ್ಕೆ 'ಪ್ರಥಮ ವರ್ಷೀ' ಎಂದೂ ಎರಡನೆಯ ವರ್ಷಕ್ಕೆ 'ದ್ವಿತೀಯ ವರ್ಷೀ' ಎಂದೂ ಕರೆಯಲಾಗುತ್ತದೆ. ಮಾಸಗಳನ್ನೂ ಅದರಂತೆಯೆ ಕರೆಯಲಾಗುತ್ತದೆ.

ಬ್ರಹ್ಮನಿಗೆ ದೇವಮಾನದ ಪ್ರಕಾರ ೧೦೦ ವರ್ಷ ಆಯುಷ್ಯ. ವರ್ಷಕ್ಕೆ ೩೬೦ ದಿನಗಳಂತೆ ೧೦೦ ವರ್ಷಕ್ಕೆ ೩೬ ಸಾವಿರ ದಿನಗಳು (ಅಂದರೆ ಕಲ್ಪ) ಇರುತ್ತದೆ. ೩೬೦೦ ಬಾರಿ ಈ ಕಲ್ಪಗಳ ಚಕ್ರ ತಿರುಗುತ್ತದೆಯಲ್ಲದೆ ಪ್ರತಿ ಕಲ್ಪಾಂತ್ಯದಲ್ಲೂ 'ಮಹಾಪ್ರಳಯ' ಸಂಭವಿಸುತ್ತದೆಯಂತೆ! ಅಂದರೆ ಬ್ರಹ್ಮನ ಜೀವಿತದಲ್ಲಿ ೩೬ ಸಾವಿರ ಬಾರಿ ಮಹಾಪ್ರಳಯ ಉಂಟಾಗಬೇಕು.

ಬ್ರಹ್ಮನ ನೂರು ವರ್ಷ ಎಂದರೆ ನಮ್ಮ ಲೆಕ್ಕದಲ್ಲಿ ೩೧೧೦೪ x ೧೦^೧೦ ವರ್ಷಗಳು (೩೧೧೦೪ರ ಮುಂದೆ ಹತ್ತು ಸೊನ್ನೆಗಳು)ಎಂದು ನಾನು ಇತ್ತೀಚೆಗೆ ಗಣಕಯಂತ್ರದಿಂದ ಗಣಿಸಿದೆ. ಈಗ ದೊರೆತಿರುವ ಆಧಾರದ ಪ್ರಕಾರ ಬ್ರಹ್ಮನಿಗೆ ೫೦ ವರ್ಷ ಕಳೆದು ೫೧ನೆಯ ವರ್ಷ ನಡೆಯುತ್ತಿದ್ದು ೧೯೯೪ನೆಯ ಇಸವಿಯ ಮೊದಲ ದಿನ ಸರಿಯಾಗಿ ಬ್ರಹ್ಮ ಜನಿಸಿ ೧೫೫೫೨೧೯೭೨೯೪೯೦೯೫ ವರ್ಷ ಕಳೆದಿವೆ ಎಂದು ತಿಳಿದುಬಂತು. ಇನ್ನೂ ಬ್ರಹ್ಮ ೧೫೫೫೧೮೦೨೭೦೫೦೯೦೫ ವರ್ಷಗಳನ್ನು ಕಳೆದನಂತರ ಇನ್ನೊಬ್ಬ ಬ್ರಹ್ಮ ಅಧಿಕಾರ

## ಜ್ಞಾನನಿಧಿ

### ಕಲ್ಪಗಳ ಹೆಸರುಗಳು

| | |
|---|---|
| ೧. ಶ್ವೇತ | ೧೬. ನಾರಸಿಂಹ |
| ೨. ನೀಲ ಲೋಹಿತ | ೧೭. ಸಮಾನ |
| ೩. ವಾಸುದೇವ | ೧೮. ಆಗ್ನೇಯ |
| ೪. ರಥಂತರ | ೧೯. ಸೋಮ |
| ೫. ಕೌರವ | ೨೦. ಮಾನವ |
| ೬. ಪ್ರಾಣ | ೨೧. ತತ್ಪುರುಷ |
| ೭. ಬೃಹತ್ | ೨೨. ವೈಕುಂಠ |
| ೮. ಕಂದರ್ಪ | ೨೩. ಲಕ್ಷ್ಮಿ |
| ೯. ಸದ್ಯ | ೨೪. ಸಾವಿತ್ರಿ |
| ೧೦. ಈಶಾನ | ೨೫. ಘೋರ |
| ೧೧. ವ್ಯಾನ | ೨೬. ವಾರಾಹ |
| ೧೨. ಸಾರಸ್ವತ | ೨೭. ವೈರಾಜ |
| ೧೩. ಉದಾನ | ೨೮. ಗೌರಿ |
| ೧೪. ಗಾರುಡ | ೨೯. ಮಾಹೇಶ್ವರ |
| ೧೫. ಕೌರ್ಮ | ೩೦. ಪಿತೃ |

ವಹಿಸಿಕೊಳ್ಳಲಿದ್ದಾನೆ. ನಮ್ಮ ಒಂದು ಲಕ್ಷ ವರ್ಷ ಆವನಿಗೆ ಒಂದು ಸೆಕೆಂಡ್ ಇದ್ದ ಹಾಗೆ!

ಈಗ ನಡೆಯುತ್ತಿರುವುದು ಶ್ವೇತ (ಶ್ವೇತ ವರಾಹ)ಕಲ್ಪ. ಪ್ರತಿ ಕಲ್ಪದ ಪ್ರಮಾಣ ೮೬೪ಕೋಟಿ ವರ್ಷಗಳು. ಓದುಗರಿಗೆ ಉಪಯೋಗವಾಗಲೆಂದು ೩೦ ಕಲ್ಪಗಳ ಹೆಸರುಗಳನ್ನು ಇಲ್ಲಿ ನೀಡಿದ್ದೇನೆ.

ಭಾಗವತದ ಮೊದಲ ಸಂಪುಟದ ಕೊನೆಯ ಪುಟದಲ್ಲಿ ೩೦ ಕಲ್ಪಗಳ ಹೆಸರುಗಳನ್ನು ನೀಡಿ ೨೮ನೆಯ ಗೌರೀ ಕಲ್ಪದ ಮುಂದೆ ಆವರಣದಲ್ಲಿ ಈಗಿನ 'ಶ್ವೇತ ವರಾಹ ಕಲ್ಪ' ಎಂದು ಸೂಚಿಸಿರುವುದು ಸರಿಯಲ್ಲ. ಬ್ರಹ್ಮನಿಗೆ ೫೧ನೆಯ ವರ್ಷದಲ್ಲಿ ಮೊದಲನೆಯ ದಿನ (ಶ್ವೇತಕಲ್ಪ) ನಡೆಯುತ್ತಿರುವುದರಿಂದಲೂ ದಿನದ ಪ್ರಮಾಣ ೮೬೪ಕೋಟಿ ವರ್ಷಗಳಾಗಿರುವುದರಿಂದಲೂ ಈಗ ನಡೆಯುತ್ತಿರುವುದೇ ಮೊದಲನೆಯ ಶ್ವೇತ ಕಲ್ಪ. ಈ ಶ್ವೇತದ ಮುಂದೆ 'ವರಾಹ' ಹೇಗೆ ಸೇರ್ಪಡೆಗೊಂಡಿತೆಂಬುದು ಯಕ್ಷ ಪ್ರಶ್ನೆ.

ಹಿಂದೂ ಖಗೋಳ ಶಾಸ್ತ್ರದಲ್ಲಿ ೪೩೨ ಕೋಟಿ ವರ್ಷಗಳೇ ಅತಿ ದೀರ್ಘ ಕಾಲಾವಧಿ ಎಂದು ಗಿನ್ನೆಸ್ ಪುಸ್ತಕದಲ್ಲಿ ದಾಖಲಿಸಲಾಗಿದೆ. ಈ ಅವಧಿಯನ್ನು 'ಕಲ್ಪ' ಎಂದು ಮುದ್ರಿಸಲಾಗಿದೆ. 'ಕಲ್ಪ'ದ ಪ್ರಮಾಣ ೮೬೪ ಕೋಟಿ ವರ್ಷಗಳೇ ಹೊರತು ೪೩೨ ಕೋಟಿ ವರ್ಷಗಳಲ್ಲ. ಮಾನವನ ಅಳತೆಗೆ ಸಿಕ್ಕ ಅತಿ ದೀರ್ಘ ಕಾಲಾವಧಿ ಎಂದರೆ ಬ್ರಹ್ಮನ ಆಯುಷ್ಯ. ಬ್ರಹ್ಮನ ಆಯುಷ್ಯದ ಒಟ್ಟು ಅವಧಿ ೩೧೧೦೪ x ೧೦^೧೦ ವರ್ಷಗಳು. ಮುಂದಿನ ಗಿನ್ನೆಸ್ ಪುಸ್ತಕದ ಆವೃತ್ತಿಯಲ್ಲಿ ಈ ಅಂಶ ಪ್ರಕಟವಾಗಲಿದೆ.

ಮುಂದಿನ ಬ್ರಹ್ಮ ಹನುಮಂತ. ಆವನು ಅಧಿಕಾರ ಸ್ವೀಕರಿಸಬೇಕಾದರೆ ಈಗಿರುವ ಬ್ರಹ್ಮ ಇನ್ನೂ ೧೮ ಸಾವಿರ ಕಲ್ಪಗಳನ್ನು ಕಳೆಯಬೇಕು. ಏನೇ ಆದರೂ ಈ 'ಕಾಲ'ದ ರಹಸ್ಯ ಸಂಪೂರ್ಣವಾಗಿ ಅರ್ಥವಾಗಲು ಮನುಜರಿಗೆ ಇನ್ನೆಷ್ಟು ಕಾಲ ಬೇಕಾಗಬಹುದೋ ಯಾರಿಗೆ ಗೊತ್ತು?

● ಎಸ್.ಸುಧೀಂದ್ರ



# ಸಂಖ್ಯಾ ವಿನೋದಗಳು

## ಜ್ಞಾನನಿಧಿ

೧. ಹಕ್ಕಿಗಳು ಮತ್ತು ನಾಯಿಗಳು ಇವುಗಳ ಗುಂಪೊಂದಿದೆ. ಒಟ್ಟಿನಲ್ಲಿ ೨೫ ತಲೆಗಳೂ ೬೬ ಕಾಲುಗಳೂ ಇದ್ದರೆ ಹಕ್ಕಿಗಳು ಎಷ್ಟು? ನಾಯಿಗಳು ಎಷ್ಟು?

೨. ಗೋಡೆಗೆ ತಗುಲಿ ಹಾಕಿರುವ ಒಂದು ಗಡಿಯಾರ ಗಂಟೆಗಳನ್ನೂ, ಅರ್ಧ ಗಂಟೆಗಳನ್ನೂ ಹೊಡೆಯುತ್ತದೆ. ಒಂದು ದಿನದಲ್ಲಿ ಅಂದರೆ ೨೪ ಗಂಟೆಗಳಲ್ಲಿ ಈ [illegible] ತ್ತದೆ?

೩. ರೈತರೊಬ್ಬರು ಸಂತೆಗೆ ಹೋದರು. ಹಸುವೊಂದನ್ನು ಅವರು ೫೦೦ ರೂಪಾಯಿಗೆ ಕೊಂಡು ನಂತರ ೬೦೦ ರೂ.ಗಳಿಗೆ ಮಾರಿದರು. ಇನ್ನೂ ಸ್ವಲ್ಪ ಕಾಲವಾದ ಮೇಲೆ ಅವರು ಸಂತೆಯಲ್ಲಿ ಅದೇ ಹಸುವನ್ನು ೭೪೦ ರೂಪಾಯಿಗೆ ಕೊಂಡರು. ಈ ಮೂರು ವ್ಯವಹಾರಗಳ ನಂತರ ಆ ರೈತನಿಗೆ ಒಟ್ಟಿನಲ್ಲಿ ಲಾಭವಾಗಿದೆಯೋ? ಅಥವಾ ನಷ್ಟವಾಗಿದೆಯೆ? ಆಗಿದ್ದರೆ, ಎಷ್ಟು?

೪. ಒಂದು ಮನೆಯಲ್ಲಿ ಐವರು ಸಹೋದರರಿದ್ದಾರೆ. ಇವರ ಪೈಕಿ ಕಡೆಯ ಇಬ್ಬರು ಅವಳಿ ಮಕ್ಕಳು. ಇವರೆಲ್ಲರ ಜನನ ಎರಡೆರಡು ವರ್ಷಗಳ ಅಂತರದಲ್ಲಿ ಆಗಿರುತ್ತದೆ. ಐವರ ವಯಸ್ಸಿನ ಮೊತ್ತ ೫೨. ಹಾಗಾದರೆ ಪ್ರತಿಯೊಬ್ಬರ ವಯಸ್ಸು ಎಷ್ಟು?

೫. ಒಂದು ಪೆಟ್ಟಿಗೆಯಿದೆ. ಅದರಲ್ಲಿ ಆರು ಸಣ್ಣ ಪೆಟ್ಟಿಗೆಗಳಿವೆ. ಈ ಆರು ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲೂ ಇನ್ನೂ ಆರಾರು ಸಣ್ಣ ಸಣ್ಣ ಪೆಟ್ಟಿಗೆಗಳು. ಹೀಗಿದ್ದಲ್ಲಿ ಒಟ್ಟು ಎಷ್ಟು ಪೆಟ್ಟಿಗೆಗಳಿವೆ?

೬. ಆಟದ ಸಾಮಾನಿನ ಅಂಗಡಿಯೊಂದರಲ್ಲಿ ಬೆಲೆಗಳು ಹೀಗಿವೆ: ೧ ಚೆಂಡಿಗೆ ೪ ರೂ, ಬುಗುರಿಗೆ ೩ ರೂ. ಹಾಗೂ ಗೋಲಿಗಳು ೪ಕ್ಕೆ ೧ರೂ. ನೀವು ಒಟ್ಟು ೧೦೦ ರೂ.ಗಳನ್ನು ಕೊಟ್ಟು ಈ ಮೂರು ರೀತಿಯ ಒಟ್ಟು ೧೦೦ ಪದಾರ್ಥಗಳನ್ನು ಕೊಳ್ಳಬ [illegible]

೭. ಒಂದು ಗಡಿಯಾರ ೬ ಗಂಟೆ ತೋರಿಸುತ್ತಿದೆ. ಅದರ ಎರಡು ಮುಳ್ಳುಗಳನ್ನೂ ಅದಲು ಬದಲು ಮಾಡಿದರೆ ಗಡಿಯಾರ ಎಷ್ಟು ಗಂಟೆಯನ್ನು ತೋರಿಸುತ್ತದೆ?

ಉತ್ತರಗಳು

೧) ೧೭ ಹಕ್ಕಿಗಳು ೮ ನಾಯಿಗಳು.

೨) ೧೫೦ ಬಾರಿ

೩) ೧೦೦ ರೂ. ಲಾಭವಾಗಿದೆ. ಹೇಗೆಂದರೆ ೫೦೦ ರೂ.ಗೆ ಕೊಂಡು ೬೦೦ ರೂ.ಗೆ ಮಾರಿದ್ದರಿಂದ ೧೦೦ರೂ. ಲಾಭ ಬಂತು. ಮೂರನೆಯ ವ್ಯವಹಾರದ ಪರಿಣಾಮ ಲಾಭ-ನಷ್ಟದ ಮೇಲೆ ಆಗುವುದಿಲ್ಲ. ಏಕೆಂದರೆ ೭೪೦ ರೂಪಾಯಿ ಅಸಲು ಬೆಲೆಯ ಹಸುವನ್ನು ಅವರು ಕೊಂಡರೇ ವಿನಾ ಮಾರಲಿಲ್ಲ. ಆದ್ದರಿಂದ ಹಸು ಅವರ ಬಳಿ ಇದೆ.

೪) ೧೪, ೧೨, ೧೦, ೮ ಮತ್ತು ೮ ವರ್ಷಗಳು.

೫) ೪೩ ಪೆಟ್ಟಿಗೆಗಳು.

೬) ೯ ಚೆಂಡುಗಳು, ೧೫ ಬುಗುರಿಗಳು ಮತ್ತು ೭೬ ಗೋಲಿಗಳು.

೭) ಏನೂ ಗಂಟೆಯನ್ನು ತೋರಿಸುವುದಿಲ್ಲ. ಏಕೆಂದರೆ ದೊಡ್ಡ ಮುಳ್ಳು ಆರರಲ್ಲಿರುವಾಗ ಚಿಕ್ಕ ಮುಳ್ಳು ೧೨ ರಲ್ಲಿ ಇರಲು ಸಾಧ್ಯವೇ?

# ಜ್ಞಾನನಿಧಿ

## ನೀರಿನ ಮೇಲೆ ನಡೆಯುವ ಜೀವಿ

ನೀರಿನಲ್ಲಿ ಈಜುವುದು, ನೆಲದ ಮೇಲೆ ನಡೆಯುವುದು ನಮಗೆಲ್ಲ ಅರ್ಥವಾಗುವ ವಿಷಯ. ನೀರಿನ ಮೇಲೆ ನಡೆಯುವುದನ್ನು ಎಲ್ಲಿಯಾದರೂ ಕೇಳಿದ್ದೀರಾ? ಕೆಲವು ವರ್ಷಗಳ ಕೆಳಗೆ ಹಠಯೋಗಿಯೊಬ್ಬರು ಒಂದು ಗೊತ್ತಾದ ದಿನ ಎಲ್ಲರೆದುರಿಗೆ ನೀರಿನ ಮೇಲೆ ನಡೆದು ತೋರಿಸುವುದಾಗಿ ಹೇಳಿಕೆ ಕೊಟ್ಟು ಕೊನೆಗಳಿಗೆಯಲ್ಲಿ ಅಲ್ಲಿಂದ ಕಾಲ್ಕಿತ್ತ ಸುದ್ದಿ ಅನೇಕ ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು. ಮನುಷ್ಯನಿಗೆ ಸಾಧ್ಯವಾಗದ ಈ ಕೆಲಸವನ್ನು ಹಲ್ಲಿಯ ವರ್ಗಕ್ಕೆ ಸೇರಿದಂತಹ ಪ್ರಾಣಿಯೊಂದು ಸರ್ವೇ ಸಾಮಾನ್ಯವಾಗಿ ಮಾಡುತ್ತದೆ. ಅದನ್ನು ಬ್ಯಾಸಿಲಿಸ್ಕ್ ಎನ್ನುತ್ತಾರೆ. ತಲೆ ಮೇಲೆ ಉದ್ದವಾಗಿರುತ್ತದೆ. ಅದರ ಬಾಲ ದೇಹ ಭಾಗದ ಎರಡರಷ್ಟು ಉದ್ದವಾಗಿರುತ್ತದೆ.

ಬ್ಯಾಸಿಲಿಸ್ಕ್ ಇತರ ಹಲ್ಲಿಗಳಂತೆ ಸಾಮಾನ್ಯವಾಗಿ ನಾಲ್ಕು ಕಾಲುಗಳ ಮೇಲೆ ನಡೆಯುವುದಾದರೂ ನದಿ ಸರೋವರಗಳು ಸಿಕ್ಕಾಗ ಮುಂದಿನ ಕಾಲುಗಳನ್ನೂ ಮೇಲಕ್ಕೆತ್ತಿ ಹಿಂಗಾಲುಗಳ ಮೇಲೆ ಸರಸರನೆ ನೀರಿನ ಮೇಲೆ ನಡೆದು ಹೋಗುತ್ತದೆ. ಅದು ಮನುಷ್ಯನ ನಡಿಗೆಯನ್ನು ಎಷ್ಟರ ಮಟ್ಟಿಗೆ ಹೋಲುವುದೆಂದರೆ ಅದು ವಾಸಿಸುವ ಕೆಲವು ಪ್ರದೇಶಗಳಲ್ಲಿ ಅದಕ್ಕೆ 'ಲೆಗಾರ್ಟೋ ಜೀಸಸ್ ಕ್ರಿಸ್ಟೋ' (ಏಸು ಕ್ರಿಸ್ತ ಹಲ್ಲಿ) ಎಂಬ ಹೆಸರು ಬಂದಿದೆ.

ಅದಕ್ಕೆ ನೀರಿನ ಮೇಲೆ ನಡೆಯಲು ಹೇಗೆ ಸಾಧ್ಯವಾಗುತ್ತದೆಂದು ಪರೀಕ್ಷಿಸಲು ಅಮೆರಿ[illegible] ವಿಶ್ವವಿದ್ಯಾನಿಲಯದ ವಿಜ್ಞಾನಿಗಳು ವೇಗವಾಗಿ ಚಲಿಸುವ ಸಿನೆಮಾ ಕ್ಯಾಮರಾದ ಸಹಾಯದಿಂದ ಅದರ ನಡಿಗೆಯ ಚಲನ ಚಿತ್ರವನ್ನು ತೆಗೆದರು. ಅನಂತರ ಬಿಡಿ ಚಿತ್ರಗಳನ್ನು ಒಂದೊಂದಾಗಿ ಪರೀಕ್ಷಿಸಿದಾಗ ಅದು ನಿಜವಾಗಿಯೂ ನೀರಿನ ಮೇಲೆ ನಡೆಯುವುದಿಲ್ಲ ಎಂಬುದು ಗೊತ್ತಾಯಿತು. ಅದರ ಪಾದ, ಕಾಲುಗಳ ಕೆಳಭಾಗ ಹಾಗೂ ಸ್ವಲ್ಪ ಭಾಗ ಬಾಲ ನೀರಿನಲ್ಲಿ ಮುಳುಗಿರುತ್ತದೆ. ಅದರ ಪಾದದ ಮೇಲಿನ ಗಡಸು ಪೊರೆ ವಿಶಾಲವಾಗಿರುವುದರಿಂದ ಪಾದದಿಂದ ಚಾಚಿಕೊಂಡಿದ್ದು ಪಾದಕ್ಕೆ ಹ್ಯಾಟ್ ಹಾಕಿದಂತಿರುತ್ತವೆ. ಪಾದದ ವಿಸ್ತೀರ್ಣ ಈ ರೀತಿ ಹೆಚ್ಚಾಗಿರುವುದರಿಂದ ಅದು ವೇಗವಾಗಿ ನಡೆಯುವಾಗ ನೀರನ್ನು ಯಶಸ್ವಿಯಾಗಿ ಕೆಳಕ್ಕೆ ತಳ್ಳಿ ನೀರಿನ ಮೇಲೆಯೇ ಉಳಿಯಲು ಅದಕ್ಕೆ ಸಾಧ್ಯವಾಗುತ್ತದೆ. ಬಾಲ ಉದ್ದವಾಗಿರುವುದರಿಂದ ಅದನ್ನು ನೀರಿನ ಮೇಲೆ ಊರಿಕೊಂಡು ಮುಂಗಾಲನ್ನೂ ಮೇಲಕ್ಕೆ ಎತ್ತುವುದು ಅದಕ್ಕೆ ಸಾಧ್ಯವಾಗುವುದು. ಬಹಳ ವೇಗವಾಗಿ ಓಡುವಾಗ ಹೆಜ್ಜೆ ಹಾಕಲು ಎತ್ತಿದ ಕಾಲು ಅನೇಕ ವೇಳೆ ನೀರಿನ ಮೇಲ್ಮೈಯಿಂದ ಮೇಲಕ್ಕೆ ಬಂದುಬಿಡುವುದು ಉಂಟು. ಶಸ್ತ್ರ ಚಿಕಿತ್ಸೆಯಿಂದ ಪಾದದ ಮೇಲಿನ ಗಡಸು ಪೊರೆಯನ್ನು ಕತ್ತರಿಸಿಹಾಕಿದರೂ ನಡಿಗೆಗೆ ತೊಂದರೆಯಾಗುವುದಿಲ್ಲವೆಂದು ಕಂಡುಬಂದಿತು. ಆಗ ಕೆಳಕಾಲಿನ ಇನ್ನೂ ಸ್ವಲ್ಪ ಹೆಚ್ಚು ಭಾಗ ನೀರಿನಲ್ಲಿ ಮುಳುಗಿರುತ್ತದೆ ಅಷ್ಟೆ.

● ಎಚ್. ಎಮ್. ಮಹೇಶ್ವರ್

# ಜ್ಞಾನನಿಧಿ

## ಡಿ.ಎನ್.ಎ. ದಿಂದ ಪತ್ತೇದಾರಿ ಕೆಲಸ

ಡಿ ಆಕ್ಸಿ ರೈಬೋನ್ಯೂಕ್ಲಿಯಿಕ್ ಆಸಿಡ್ ಅಥವಾ ಡಿ.ಎನ್.ಎ. ಮಾನವದೇಹದ ಜೀವ ಕೋಶದಲ್ಲಿರುವ ವರ್ಣತಂತುಗಳೊಳಗೆ ಹುದುಗಿರುವ ರಾಸಾಯನಿಕ ಸುರುಳಿ. ಇದೊಂದು ಪ್ರೋಟಿನ್. ಆನುವಂಶಿಕ ಗುಣ ಗಳನ್ನು ಮುಂದಿನ ಪೀಳಿಗೆಗೋಸುಗ ಹಿಡಿದಿಟ್ಟುಕೊಂಡಿದ್ದು ಹೊಸ ಜೀವ ನಿರ್ಮಾಣ ಸಂದರ್ಭದಲ್ಲಿ ಆ ಎಲ್ಲವನ್ನೂ ಹೊಸ ಜೀವಕ್ಕೆ ದಾಟಿಸುವುದು ಡಿ.ಎನ್.ಎ.ದ ಕೆಲಸ. ಉದ್ದಗೆರೆ, ಅಡ್ಡಗೆರೆ, ವೃತ್ತ, ಅರ್ಧವೃತ್ತಗಳನ್ನು ಬಳಸಿ ಭಾಷೆಯ ಅಕ್ಷರಮಾಲೆಯನ್ನು ನಿರ್ಮಿಸಿ, ಆ ಅಕ್ಷರ ಮಾಲೆಯಿಂದ ಪದ ಪುಂಜಗಳನ್ನೂ ವಾಕ್ಯಗಳನ್ನೂ ರಚಿಸಿ ಆ ಮುಖಾಂತರ ನಮ್ಮೆಲ್ಲ ಅನುಭವಗಳನ್ನೂ ದಾಖಲಿಸುತ್ತೇವಲ್ಲವೆ? ಅಂತೆಯೇ ಡಿ.ಎನ್.ಎ. ಕೂಡ ನಾಲ್ಕು ಮೂಲ ತಂತುಗಳನ್ನು ಬಳಸಿ ಲಕ್ಷಾಂತರ ಸಂಜ್ಞೆಗಳನ್ನು ರಚಿಸಿಕೊಂಡಿದೆ. ಈ ಸಂಜ್ಞೆಗಳ ಮುಖಾಂತರ ಅದು ಎಲ್ಲಾ ಮಾಹಿತಿಯನ್ನು ದಾಖಲಿಸಿಕೊಳ್ಳುತ್ತದೆ. ಹಲವು ವೈಜ್ಞಾನಿಕ ಕ್ಷೇತ್ರಗಳಲ್ಲಿ ಡಿ.ಎನ್.ಎ.ಯನ್ನು ಮಾನವನಿಗೆ ಉಪಯುಕ್ತವಾಗುವಂತೆ ವಿಜ್ಞಾನಿಗಳೀಗ ಬಳಸುತ್ತಿದ್ದಾರೆ. ಡಿ.ಎನ್.ಎ. ಬೆರಳಚ್ಚು ವಿಧಾನದಿಂದ ಅಪರಾಧಪತ್ತೆ ಹಚ್ಚುವುದು ಅವುಗಳಲ್ಲಿ ಒಂದು. ಅಪರಾಧ ನಡೆದ ಸ್ಥಳದಲ್ಲಿ ಸಿಕ್ಕುವ ರಕ್ತದ ತೊಟ್ಟು, ಮಾಂಸದ ಚೂರು, ಚರ್ಮ, ಮೂಳೆ, ಕೂದಲು, ವೀರ್ಯದಂಥ ವಸ್ತುಗಳಲ್ಲಿ ಸಿಕ್ಕುವ ಒಂದೇಒಂದು ಜೀವಕೋಶದಿಂದ ಡಿ.ಎನ್.ಎ.ಯನ್ನು ಬೇರ್ಪಡಿಸಿ, ವಿಶ್ಲೇಷಿಸಿ ಅಪರಾಧಿಯನ್ನು ಈ ವಿಧಾನದಿಂದ ಕರಾರುವಾಕ್ಕಾಗಿ ಗುರುತಿಸಬಹುದು. ಈ ವಿಧಾನದ ಹಿಂದಿರುವ ತತ್ವ ಸಂಕೀರ್ಣವಾದದ್ದು. ಅದನ್ನು ಸ್ಥೂಲವಾಗಿ ಹೀಗೆ ವಿವರಿಸಬಹುದು:

ಮಾನವನ ದೇಹ ಹಲವಾರು ಕೋಟಿ ಜೀವಕೋಶಗಳಿಂದ ನಿರ್ಮಾಣಗೊಂಡಿದೆ. ಈ ಜೀವಕೋಶಗಳೆಲ್ಲಾ ಒಂದೇ ಒಂದು ಜೀವಕೋಶದಿಂದ ಅದರ ಅಚ್ಚಿನಲ್ಲಿಯೇ ಸೃಷ್ಟಿಸಲ್ಪಟ್ಟವು. ಈ ಮೂಲ ಜೀವಕೋಶ ಗಂಡಿನ ಒಂದು ವೀರ್ಯಾಣು ಮತ್ತು ಹೆಣ್ಣಿನ ಒಂದು ಅಂಡಾಣುವಿನ ಸಂಯೋಜನೆಯಿಂದ ಸೃಷ್ಟಿಗೊಂಡಿದೆ. ಈ ಕೋಶ ಆ ಗಂಡು ಮತ್ತು ಆ ಹೆಣ್ಣಿನ ವರ್ಣತಂತುಗಳನ್ನು ನಿರ್ದಿಷ್ಟ ಪ್ರಮಾಣದಲ್ಲಿ ಹೊಂದಿರುತ್ತದೆ. ಹಾಗಾಗಿ ಈ ಇಬ್ಬರ ಡಿ.ಎನ್.ಎಗಳನ್ನು ನಿರ್ದಿಷ್ಟ ಪ್ರಮಾಣದಲ್ಲಿಯೇ ಹೊಂದಿರುತ್ತದೆ. ಇಂತಹ ಒಂದು ಜೀವಕೋಶದಲ್ಲಿರುವ ಡಿ.ಎನ್.ಎ. ಸರಪಳಿಯ ಪಾರ್ಶ್ವ ಚಿತ್ರಣ ಆ ವ್ಯಕ್ತಿಯದನ್ನುಳಿದು ಬೇರಾರದ್ದಕ್ಕೂ ತಾಳೆಯಾಗುವುದಿಲ್ಲ. (ಹಾಗೆ ತಾಳೆಯಾಗುವ ಸಾಧ್ಯತೆಗಳು ೩೦,೦೦೦ ಬಿಲಿಯನ್ನಿನಲ್ಲಿ ಒಂದು ಭಾಗದಷ್ಟು ಮಾತ್ರವಾಗಿದೆ.) ಇದರಿಂದಾಗಿ ವ್ಯಕ್ತಿಯ ಬೆರಳಗುರುತಿನಂತೆಯೇ ಡಿ.ಎನ್.ಎ. ಫಿಂಗರ್ ಪ್ರಿಂಟಿಂಗ್ ಕೂಡ ಆ ವ್ಯಕ್ತಿಯನ್ನು ಗುರುತಿಸಲು ಸಹಕಾರಿಯಾಗಿದೆ.

ಈ ವಿಧಾನವನ್ನು ೧೯೮೫ರಲ್ಲಿ ಇಂಗ್ಲೆಂಡಿನ ಅಲೆಕ್ ಜೆಫ್ರಿಸ್ ಮೊಟ್ಟ ಮೊದಲು

## ಜ್ಞಾನನಿಧಿ

ರೂಪಿಸಿ ಬಳಸಿದರು. ಭಾರತದಲ್ಲಿ ೧೯೮೮ರಲ್ಲಿ ಡಾ. ಲಾಲ್‌ಜಿ ಸಿಂಗ್ ಮತ್ತು ಡಾ.ವಿ.ಕೆ. ಕಶ್ಯಪ್ ಹೈದರಾಬಾದಿನಲ್ಲಿ ಈ ವಿಧಾನವನ್ನು ಮೊಟ್ಟಮೊದಲು ಬಳಸಿದರು. ಈ ವಿಧಾನವನ್ನು ಬಳಸಿ ಅಪರಾಧಿಗಳನ್ನು ಪತ್ತೆಹಚ್ಚಬಹುದು. ಅಲ್ಲದೆ ಅಸಲಿ ತಂದೆಯನ್ನೂ ತಾಯಿಯನ್ನೂ ಗುರುತಿಸಬಹುದು. ಲಿಂಗ ನಿರ್ಧರಿಸುವುದಕ್ಕೂ ಈ ವಿಧಾನವನ್ನು ಬಳಸಬಹುದು.

• ಕೆ. ಗಣೇಶ್

# ಮನಸ್ಸಿದ್ದಲ್ಲಿ ಮಾರ್ಗ

ಮನಸ್ಸಿದ್ದಲ್ಲಿ ಮಾರ್ಗವಿದೆಯೆನ್ನುವುದಕ್ಕೆ ಅಮೆರಿಕದ ರಾಬರ್ಟ್ ಅಲೆನ್ನನೇ ಸಾಕ್ಷಿ. ತಂದೆತಾಯಿಗಳಿಬ್ಬರೂ ಡೈವೋರ್ಸ್ ಪಡೆದಿದ್ದರಿಂದ ಬಾಲ್ಯವನ್ನೆಲ್ಲಾ ತಾತನ ಬಳಿಯೇ ಕಳೆದ. ಶಾಲೆಗೆ ಕಳಿಸುವಷ್ಟು ದುಡ್ಡು ಬಳಿ ಇಲ್ಲದ್ದರಿಂದ ತಾತನೇ ಅವನ ಗುರುವಾದ. ಏಳನೆಯ ವರ್ಷಕ್ಕೇ ರಾಬರ್ಟ್ ಬೈಬಲ್ ಓದುವಷ್ಟು ವಿದ್ಯೆಯನ್ನು ಕಲಿತ.

ಆತನ ಜ್ಞಾನದಾಹ ಶುರುವಾದದ್ದು ಇಲ್ಲಿಂದಲೇ. ಕೈಗೆ ಸಿಕ್ಕದ್ದನ್ನೆಲ್ಲಾ ಓದಿದ. ಅದು ಸಾಲದೆಂದಾಗ ತಾತ ಕೊಟ್ಟ ಪುಡಿಗಾಸನ್ನೆಲ್ಲಾ ಕೂಡಿ ಹಾಕಿ ಹಳೆ ಪುಸ್ತಕದ ಅಂಗಡಿಗಳಿಗೆ ಹೋಗಿ ಪುಸ್ತಕಗಳನ್ನು ಕೊಳ್ಳತೊಡಗಿದ. ಇಪ್ಪತ್ತನೆಯ ವರ್ಷ ನಡೆಯುತ್ತಿದ್ದಾಗ ಅವನ ಬಳಿ ಎರಡು ಸಾವಿರದಷ್ಟು ಪುಸ್ತಕಗಳ ಸಂಗ್ರಹವಿತ್ತು.

ಇಷ್ಟೆಲ್ಲ ಆದರೂ ರಾಬರ್ಟ್ ಅಲೆನ್ ಶಾಲೆಯ ಕಟ್ಟೆಯನ್ನೇ ಹತ್ತಿರಲಿಲ್ಲ. ಮೂವತ್ತನೆಯ ವರ್ಷ ನಡೆಯುತ್ತಿದ್ದಾಗ ವಯಸ್ಸಿನ ಬಲದಿಂದ ನಮ್ಮಲ್ಲಿನ ಎಸ್‌ಎಸ್‌ಎಲ್‌ಸಿಗೆ ಸಮಾನವಾದ ಪರೀಕ್ಷೆಗೆ ಕುಳಿತ. ಕಾಲೇಜು ಕಟ್ಟೆಯೇರಿದಾಗ ಅವನಿಗೆ ಮೈಮೇಲೆ ಹಾಕಿಕೊಳ್ಳಲು ಸರಿಯಾದ ಒಂದು ಬಟ್ಟೆಯೂ ಇರಲಿಲ್ಲ. ಶರ್ಟ್ ಬಹಳ ಕಡೆ ಹರಿದಿದ್ದರಿಂದ ಹರಿದಲ್ಲೆಲ್ಲ ಪಿನ್ ಹಾಕಿ ಮೈ ಮುಚ್ಚಿಕೊಂಡಿದ್ದ. ಇದೇ ಸ್ಥಿತಿಯಲ್ಲಿ ಶಿಕ್ಷಣ ಮುಂದುವರೆಸಿ ಕ್ಲಾಸಿಗೇ ಮೊದಲಿಗನಾಗಿ ಕೊನೆಯ ಹಂತದ ಪರೀಕ್ಷೆಯಲ್ಲಿ ಪಾಸಾಗಿ ಪದವೀಧರನಾದ. ಆಗ ಸಹಪಾಠಿಗಳೆಲ್ಲ ಸೇರಿ ಅವನಿಗೆ ಅಭಿಮಾನದಿಂದ ಒಂದು ಜೊತೆ ಸೂಟ್ ಹೊಲಿಸಿಕೊಟ್ಟರು. ಅವನು ಜೀವನದಲ್ಲಿ ಮೊದಲ ಸಲ ಹೊಸ ಬಟ್ಟೆಯನ್ನು ತೊಟ್ಟದ್ದು ಪದವೀಧರನಾದ ಮೇಲೆಯೆ. ಇದು ನಡೆದದ್ದು ಸುಮಾರು ಹತ್ತು ವರ್ಷಗಳ ಹಿಂದೆ.

ಅನಂತರ ರಾಬರ್ಟ್ ವಾಂಡರ್‌ಬಿಲ್ಟ್ ಯೂನಿವರ್ಸಿಟಿಯಲ್ಲಿ ಶಿಕ್ಷಣ ಮುಂದುವರೆಸಿ ಎರಡು ವರ್ಷಗಳ ಹಿಂದೆ ಪಿಹೆಚ್‌ಡಿ ಪದವಿಯನ್ನೂ ಪಡೆದ. ಈಗಾತ ಅಮೇರಿಕದ ಮುರ್ರೆ ಸ್ಟೇಟ್ ಯೂನಿವರ್ಸಿಟಿಯಲ್ಲಿ ಇಂಗ್ಲೀಷ್ ಕಲಿಸುತ್ತಾ ಇದ್ದಾನೆ. ಅವನ ಹಾಗೆ ನಮ್ಮಲ್ಲೂ ಎಷ್ಟೋ ಜನರಿಗೆ ಬಡತನದಿಂದಾಗಿ ಶಿಕ್ಷಣವನ್ನು ಮುಂದುವರಿಸಲು ಕಷ್ಟವಾಗಿರಬಹುದು. ಆದರೆ ದೃಢ ಮನಸ್ಸಿದ್ದರೆ; ಸಾಧಿಸಿಯೇತೀರುತ್ತೇನೆಂಬ ಛಲವಿದ್ದರೆ ಅವನ ಹಾಗೇ ಉಚ್ಚ ಶಿಕ್ಷಣ ಪಡೆಯಬಹುದು. ಜೀವನದಲ್ಲಿ ಒಂದು ನೆಲೆಯನ್ನು ಕಂಡುಕೊಳ್ಳಬಹುದು. ಮನಸ್ಸಿದ್ದಲ್ಲಿ ಮಾರ್ಗ ಇದ್ದೇ ಇದೆ. ಗುರಿ ಮುಟ್ಟುವ ಛಲವಿರುವವರಿಗೆ ಕತ್ತಲಲ್ಲಾದರೂ ಮಾರ್ಗ ಗೋಚರಿಸಿಯೇ ತೀರುತ್ತದೆ.

• 'ಎಂ. ದೀಪಾ'

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. ದುರತ್ಯಯ
(ಅ) ದಾಟಲಾರದ
(ಆ) ದುಃಖಪೂರ್ಣ
(ಇ) ಕಲಿಯಲು ಬಾರದ
(ಈ) ಮಿತಿಮೀರಿದ

೨. ತನಿ
(ಅ) ತಂಪಾಗು
(ಆ) ಶರೀರ
(ಇ) ಪೂರ್ಣ
(ಈ) ಸೋತು-ಹೋಗು

೩. ಪಡಿನೆಳಲು
(ಅ) ದಟ್ಟವಾದ ನೆರಳು
(ಆ) ಪ್ರತಿಬಿಂಬ
(ಇ) ಸಂಜೆಗತ್ತಲು
(ಈ) ಕಗ್ಗತ್ತಲು

೪. ಮಾರ್ಮಲೆ
(ಅ) ಬಹಳ ನೋವು ಮಾಡು
(ಆ) ಕೊಳೆತ ನೀರು
(ಇ) ವಿರೋಧಿಸು
(ಈ) ಸೈನ್ಯ

೫. ಮಿದಿ
(ಅ) ತಾರೀಕು
(ಆ) ಕುಟ್ಟು
(ಇ) ಮೀರಿಸು
(ಈ) ಮೆತ್ತಗಾಗು

೬. ಹಣಿ
(ಅ) ಬಡಿ
(ಆ) ಏತ
(ಇ) ಕದ್ದು ನೋಡು
(ಈ) ನಮಸ್ಕರಿಸು

೭. ಆಸ್ತಿಕ್ಯ
(ಅ) ಹೆಚ್ಚಳ
(ಆ) ಆಸ್ತಿ ಉಳ್ಳವ
(ಇ) ಎಲುಬಿನ ಗೂಡು
(ಈ) ದೇವರಿದ್ದಾನೆಂಬ ನಂಬಿಕೆ

೮. ಆಸತ್ತು
(ಅ) ಹಿಟ್ಟಿನ ಮುದ್ದೆ
(ಆ) ಕೂದಲು ಬೆಳೆದು
(ಇ) ಹಂಬಲ
(ಈ) ಆಯಾಸ

೯. ಉಪಜ್ಞ
(ಅ) ಸ್ವತಂತ್ರ ವಿಚಾರವುಳ್ಳ
(ಆ) ಪುರೋಹಿತ
(ಇ) ಸ್ವಲ್ಪ ಕಲಿತವ
(ಈ) ಶಿಷ್ಯ

೧೦. ಉದ್ಯಾಪನ
(ಅ) ಬೆಳಕು ಬೀರು
(ಆ) ಹೂದೋಟ
(ಇ) ಮೇರೆದಪ್ಪಿ ವರ್ತಿಸುವುದು
(ಈ) ಕೊನೆಗೊಳಿಸುವುದು

೧೧. ಕಾಷಾಯ
(ಅ) ಕೊಳಕು ನೀರು
(ಆ) ಕಾವಿ
(ಇ) ಹೊಟ್ಟೆ ಕಿಚ್ಚು
(ಈ) ಪ್ರಭೆ

೧೨. ಧುನಿ
(ಅ) ಹಾಡು
(ಆ) ಹೊಗೆ
(ಇ) ನದಿ
(ಈ) ಭೂಮಿ

# ಶಬ್ದ ಭಾಂಡಾರದ ಸರಿಯಾದ ಅರ್ಥಗಳು

. ದುರತ್ಯಯ

(ಅ) ದಾಟಲಾರದ, ಬಲು ಕಷ್ಟದಿಂದ ದಾಟ ಹುದಾದ; ಮೀರಿಸಲಾರದ. ಉದಾ: ದುರತ್ಯಯ ಾದ ಕಷ್ಟಗಳು, ಅವನ ಪರಾಕ್ರಮ ದುರತ್ಯಯ ಾಗಿತ್ತು. (ಸಂ. ದುರ್ = ಕಷ್ಟದಿಂದ. ಅತ್ಯಯ = ಾಟಿಹೋಗುವಂಥಾದ್ದು.)

. ತನಿ

(ಇ) ಪೂರ್ಣ, ತುಂಬಿದ, ಬಲಿಷ್ಠ; ಮಾಗಿದ, ಳೆದ, ಸುಖಾವಹ. ಉದಾ: ತನಿಗಂಪು, ತನಿ ಣ್ಣು, ತನಿರಸ, ತನಿವಾಲು. (ಕನ್ನಡ.)

. ಪಡಿನೆಳಲು

(ಅ) ಪ್ರತಿಬಿಂಬ, ಪ್ರತಿಚ್ಛಾಯೆ, ನೀರು, ದ್ರವ ಲ್ಲವೆ ಕನ್ನಡಿಯಲ್ಲಿ ಕಾಣಿಸುವ ಪ್ರತಿಬಿಂಬ. (ಪಡಿ ಪ್ರತಿ, ನೆಳಲು = ನೆರಳು)

. ಮಾರ್ಮಲೆ

(ಇ) ವಿರೋಧಿಸು, ಎದುರುಬೀಳು, ಪ್ರತಿಭ ಸು. ಉದಾ: ಕೊನೆಗೊಮ್ಮೆ ಬಡವರು ಮಾರ್ಮ ಯುವುದು ಖಂಡಿತ. (ಕನ್ನಡ. ಮಾರ್ = ್ರತಿಯಾಗಿ, ಮಲೆ = ಎದುರಿಸು.)

. ಮಿದಿ

(ಆ) ಕುಟ್ಟು, ಬಡಿ; ತಿಕ್ಕು, ಅರೆ, ಮರ್ದಿಸು; ಲ್ಲು, ನಾಶಮಾಡು, (ಕನ್ನಡ.)

. ಹಣಿ

(ಅ) ಬಡಿ, ಕುಟ್ಟಿ ತೆಳ್ಳಗೆ ಮಾಡು; ಬಡಿದು ರಿತವಾಗಿಸು. ಉದಾ: ಕಬ್ಬಿಣವನ್ನು ಹಣಿದು ತ್ತಿ ಮಾಡಿದ. (ಕನ್ನಡ.)

. ಆಸ್ತಿಕ್ಯ

(ಈ) ದೇವರಿದ್ದಾನೆಂಬ ನಂಬಿಕೆ, ಧರ್ಮದಲ್ಲಿ ವಿಶ್ವಾಸ, ಸಾತ್ವಿಕತೆ. (ಸಂ. ಆಸ್ತಿಕ = ಅಸ್ತಿ, ಅಂದರೆ ಇದೆ, ಎಂದು ನಂಬುವವ.)

೮. ಆಸತ್ತು

(ಈ) ಆಯಾಸಪಟ್ಟು, ಶ್ರಮಗೊಂಡು; ಬೇಸತ್ತು, ಉದಾ: ಬಿಸಿಲಿನಲ್ಲಿ ಆಸತ್ತು ಬಂದಿದ್ದಾನೆ. (ಕನ್ನಡ. ಆಸರು = ಶ್ರಮಗೊಳ್ಳು ಎಂಬುವದರಿಂದ.)

೯. ಉಪಜ್ಞ

(ಅ) ಸ್ವತಂತ್ರವಿಚಾರ ಶಕ್ತಿಯುಳ್ಳ, ಸ್ವಯಂಜ್ಞಾನವುಳ್ಳ, ಸ್ವಂತವಾಗಿ ಕಲಿತುಕೊಂಡವ. ಉದಾ: ಅವನು ಈ ವಿಚಾರದಲ್ಲಿ ಉಪಜ್ಞ (ಸಂ. ಉಪ = ಹತ್ತಿರ = ತಿಳಿವಳಿಕೆಯುಳ್ಳವ.)

೧೦. ಉದ್ಯಾಪನ

(ಈ) ಕೊನೆಗೊಳಿಸುವುದು, ಮುಕ್ತಾಯ; ಯಾವುದಾದರೂ ಧಾರ್ಮಿಕ ವ್ರತವನ್ನು ಮುಗಿಸುವ ಸಮಾರಂಭ. ಉದಾ: ಇಂದು ಚಂಡೀಯಾಗದ ಉದ್ಯಾಪನ. (ಸಂ. ಉದ್ = ಮೇಲೆ, ಯಾಪನ = ಕಳಿಸುವುದು.)

೧೧. ಕಾಷಾಯ

(ಅ) ಕಾವಿ, ಕಾವಿಬಟ್ಟೆ; ಕೆಂಪು, ಕೆಂಪುಬಟ್ಟೆ. ಉದಾ: ಕಾಷಾಯ ಧರಿಸಿದರೆ ಸಂನ್ಯಾಸಿಯೆ? (ಸಂ.)

೧೨. ಧುನಿ

(ಇ) ನದಿ, ಹೊಳೆ; ಅಬ್ಬರಿಸುವ ಗರ್ಜಿಸುವ ಸಪ್ಪಳ. (ಸಂ.)

### ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿವೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದ ಶಕ್ತಿಯ ತರಗತಿಗಳನ್ನು ತಿಳಿಯಿರಿ.

೬–೮ ಸರಿಯಿದ್ದರೆ .... ಸಾಧಾರಣ

೯–೧೦ ಸರಿಯಿದ್ದರೆ .... ಉತ್ತಮ

೧೧–೧೨ ಸರಿಯಿದ್ದರೆ .... ಅತ್ಯುತ್ತಮ

## ಅಸಾಮಾನ್ಯರು



# 'ಬೇಗಮ್' ಜೇನಾಬಾಯಿ ಖಬರಿ

ಅವರೆಲ್ಲ ತಣ್ಣಗೆ ಕುಳಿತಿದ್ದರು. ತಲೆಗಳು ತಗ್ಗಿದ್ದವು. ಕೈ ಬೆರಳುಗಳು ನೆಲದ ಮೇಲೆ ಕಾಣದಂಥ ಚಿತ್ತಾರಗಳನ್ನು ಬಿಡಿಸುತ್ತಿದ್ದವು. ಅವರಿಗೆಲ್ಲ ಒಳಗೊಳಗೇ ನಡುಕ. ತಮ್ಮ ಮೇಲೆ ಸುರಿಯುತ್ತಿದ್ದ ವಾಚಾಮಗೋಚರ ಬಯ್ಗುಳ ಮಳೆ ನಿಲ್ಲುವ ನಿರೀಕ್ಷೆಯೇ ಅವರಿಗಿರಲಿಲ್ಲ.

"ಥೂ, ನಾಚಿಕೆಗೆಟ್ಟವರಾ.... ದೇಶದಿಂದ ಸಾವಿರಾರು ಮೈಲು ದೂರದಲ್ಲಿ, ಈ ಪುಣ್ಯ ಭೂಮಿಯ ಮೇಲೆ ನಿಂತುಕೊಂಡು, ಸಲ್ಲದ ಯೋಜನೆ ಹಾಕುತ್ತಿದ್ದೀರಲ್ಲ..... ನೀವೇನು ಮನುಷ್ಯರಾ? ಸೈತಾನರು. ಅರೆ.... ಖುದಾನ್ನ ನೆನಿಸ್ಕೊಳ್ರೋ. ಆಗಲಾದ್ರೂ ನೀವೀಗ ಮಾಡ್ತಿರೋದು ತಪ್ಪು ಅನ್ನಿಸಬೌದು ನಿಮಗೆ.... ನಾನಿಲ್ಲಿಗೆ ಬರೋ ಹಾಗೆ ಮಾಡಿದೋನು ಆ ಖುದಾನೇ ಅನ್ನೋದನ್ನ ಮರೀಬೇಡಿ. ಒಂದೆರಡೇ ದಿನ ಇದ್ದು ಹೋಗೋಳು ನಾನು. ಅಷ್ಟರೊಳಗೇ ನಿಮಗಿಷ್ಟು ಕಿವಿ ಹಿಂಡಬೇಕೂಂತ್ಲೆ ಇಲ್ಲಿ ಕೂತಿದ್ದೀನಿ....."

ಎದುರಿಗೆ ಕೂತವರೇನೂ ಸಾಮಾನ್ಯ ಹುಡುಗರಾಗಿರಲಿಲ್ಲ. ಪೋಲೀ-ಘಟಿಂಗ ತರುಣರೂ ಆಗಿರಲಿಲ್ಲ. ಅವರಲ್ಲಿ ಕೆಲವರ ದನಿ ಕೇಳಿದರೇ ಜನ ಹೆದರಿ ಕಂಗಾಲಾಗಬೇಕು. ಇನ್ನು ಎದುರಿಗೆ ಕಂಡರಂತೂ ಎದೆಯೊಡೆದುಕೊಳ್ಳೋದು ಗ್ಯಾರಂಟಿ.

ಮಾಫಿಯಾ ಲೋಕದ ಇಂಥ ಘಟಾನುಘಟಿಗಳನ್ನೇ ಕಿಮಕ್ಕೆನ್ನದ ಹಾಗೆ ಕುಳ್ಳಿರಿಸಿದ್ದ ಆಕೆಯ ಹೆಸರು ಜೇನಾಬಾಯಿ ಖಬರಿ. ಮುಂಬಯಿಯ ಅಪರಾಧ ಜಗತ್ತಿನ ಮಂದಿಯಷ್ಟೇ ಅಲ್ಲ, ಪೊಲೀಸರೂ ಸಲಾಮು ಹೊಡೆಯುತ್ತಿದ್ದಂಥ ವ್ಯಕ್ತಿ ಆಕೆಯದು. ಜೇನಾಬಾಯಿ ಎಂದರೆ ಸಾಕು ಜಗಿದಾಡುತ್ತ ಸಂಭ್ರಮ ವ್ಯಕ್ತಪಡಿಸುತ್ತಿದ್ದವರಿಗು ಕಮ್ಮಿ ಇಲ್ಲ. ಒಂದೇ ಮಾತಿನಲ್ಲಿ ಹೇಳುವುದಾದ

• ಗೋವಾ

ಈ ಘಟವಾಣಿ ಹೆಂಗಸಿನ ಮನೆಯತ್ತ ತಿರುಗಿ ನೋಡುವ ಧೈರ್ಯ ಯಾರಿಗೂ ಇರಲಿಲ್ಲ; ಅದೇ ಹೊತ್ತಿಗೆ ತಮ್ಮ ಬುಡಕ್ಕೆ ಬೆಂಕಿ ಬಿದ್ದಾಗ ಅದನ್ನಾರಿಸು ಎಂದು ಅಂಗಲಾಚಿ ಆಕೆಯ ಬಳಿ ಓಡಿ ಬರದೇ ಬೇರೆ ವಿಧಿಯೂ ಇರಲಿಲ್ಲ.

ಜೇನಾಬಾಯಿಯನ್ನು ಮುಂಬಯಿ ಮಾಫಿಯಾ ಲೋಕದ ಮಂದಿ ತಮ್ಮ ಪಾಲಿನ 'ನ್ಯಾಯಾಧೀಶೆ' ಎಂದೇ ತಿಳಿದುಕೊಂಡಿದ್ದರು. ಪರಸ್ಪರರ ಜಗಳ ಬಂದೂಕಿನಿಂದ ಮುಗಿಯದಾದಾಗ ಅವರೆಲ್ಲ ಈ ಅಜ್ಜಿಯ ಆಸ್ಥಾನದಲ್ಲಿ ಹಾಜರಾಗುತ್ತಿದ್ದರು. ಆಕೆ ಹೇಳಿದ್ದನ್ನು ಅಕ್ಷರಶಃ ಪಾಲಿಸುತ್ತಿದ್ದರು. ಹಾಜಿ ಮಸ್ತಾನನಿಂದ ಅರವಿಂದ ಘೋಲಕಿಯಾ, ದಾವೂದ್ ಇಬ್ರಾಹಿಂವರೆಗೆ ಎಲ್ಲರೂ ಒಂದಿಲ್ಲೊಂದು ಸಂದರ್ಭದಲ್ಲಿ ಜೇನಾಬಾಯಿಯ ಅದಾಲತ್ತಿನಲ್ಲಿ ಹಾಜರಾದವರೆ. ಅಪರಾಧ ತಂತ್ರಗಳ ಮೇಲಿನ ತಮ್ಮ ನಿಯಂತ್ರಣವನ್ನು ಕಳಕೊಂಡಿದ್ದೇವೆಂದು ಅನ್ನಿಸಿದಾಗಲೆಲ್ಲ ಪೊಲೀಸರು ಸಹಾಯ ಯಾಚಿಸಿ ಜೇನಾಬಾಯಿಯ ಬಾಗಿಲು ಬಡಿಯುತ್ತಿದ್ದರು.

೧೯೮೬-೮೭ರಲ್ಲಿ ದಾವೂದ್ ಇಬ್ರಾಹಿಂ ಮತ್ತು ಕರೀಂ ಲಾಲಾರ ಗುಂಪುಗಳಲ್ಲಿನ ವೈಷಮ್ಯ ಅತ್ಯಂತ ತೀವ್ರವಾಯಿತು. ನಿತ್ಯವೂ ಹೊಡೆದಾಟವಂತೂ ಇದ್ದದ್ದೆ. ಒಬ್ಬರಿನ್ನೊಬ್ಬರ ಮೇಲೆ ಏರಿ ಬರುವ ಅವಕಾಶವನ್ನೇ ಕಾಯುತ್ತಿದ್ದರು. ಆಗಾಗ ದಾಳಿಯ ತಂತ್ರಗಳನ್ನೂ ತಮ್ಮ ಅಡಗುದಾಣಗಳನ್ನೂ ಬದಲಿಸುತ್ತಿದ್ದರು. ಹೀಗೊಮ್ಮೆ ಮುಂಬಯಿಯಿಂದ ಗುಜರಾತದವರೆಗೂ ಜಾಗ ಬದಲಿಸುತ್ತ ಆ ರಾಜ್ಯದ ಶಾಂತಿಯನ್ನು ಕದಡಿದ್ದವು ಈ ಎರಡೂ ತಂಡಗಳು. ಪೊಲೀಸು ಅಲ್ಲಿಗೂ ಜಾಲ ಬೀಸಿದಾಗ ದಾವೂದ್ ಇಬ್ರಾಹಿಂ ತಲೆಮರೆಸಿಕೊಂಡು ಓಡಿ ದುಬಾಯಿ ಸೇರಿದ. ಹಾಗೂ ಇನ್ನೊಬ್ಬ 'ಮಾಫಿಯಾ ಡಾನ್' ಕರೀಂ ಲಾಲಾ ಭೂಗತನಾದ.

ಆದರೆ ಈ ತಂಡಗಳ ಉಳಿದ ಜನ ದ್ವೇಷ ಸಾಧಿಸುತ್ತಲೇ ಇದ್ದರು. ೧೯೮೮-೮೯ರಲ್ಲಿ ರಕ್ತಪಾತ ಮೇರೆ ಮೀರಿತು. ಉಭಯ ತಂಡಗಳ ನಡುವೆ ರಾಜೀ ಮಾಡಿಸಲೇಬೇಕಾದ್ದು ಅನಿವಾರ್ಯವೆನಿಸಿತಾದರೂ "ಆ ಕೆಲಸವನ್ನು ಮಾಡುವವರಾರು?" ಎಂಬ ಪ್ರಶ್ನೆ ಧುತ್ತೆಂದು ನಿಂತಿತು. ಆಗ ಹೊಳೆದದ್ದು ಒಂದೇ ಹೆಸರು- ಜೇನಾಬಾಯಿ. ಪೊಲೀಸರು ಇದರಲ್ಲಿ ಕೈ ಹಾಕಿದ್ದಾರೆ ಎಂಬ ಸಂಶಯ ಬಂದರೂ ಆ ತಂಡಗಳ ಜನ ಒಂದೆಡೆ ಸೇರಲು ಹಿಂದೇಟು ಹಾಕುತ್ತಾರೆಂಬುದಂತೂ ದಿಟವಾಗಿತ್ತು.

ಜೇನಾಬಾಯಿ ಈ ಗುರುತರ ಕಾರ್ಯವನ್ನು ನೆರವೇರಿಸಲೊಪ್ಪಿ ಮಕ್ಕಾ ಯಾತ್ರೆಗೆ ಹೊರಟಳು. ಅಲ್ಲಿಯೇ ಆಕೆ ಆ ಮಾಫಿಯಾ ಮಂದಿಯನ್ನು ಎದುರಿಗೆ ಕೂರಿಸಿಕೊಂಡು ಉಗಿದದ್ದು.

ಮುಂಬಯಿಯ ಮೊಹಮ್ಮದ್ ಅಲಿ ರಸ್ತೆಗೆ ಹೊಂದಿಕೊಂಡಂತೆ ಒಂದಷ್ಟು ಜಾಗ ಪುಟ್ಟ ಬೆಟ್ಟದಂತಿದೆ. ಅಲ್ಲಿ ಬ್ರಿಟಿಶರು ಸೆರೆಮನೆಯೊಂದನ್ನು ಕಟ್ಟಿಸಿದ್ದರಂತೆ. ವೀರ ಸಾವರಕರರಂಥ ಸ್ವಾತಂತ್ರ್ಯ ಸೇನಾನಿಗಳನ್ನು ಒಂದು ಕಡೆ, ಕುಖ್ಯಾತ ಅಪರಾಧಿಗಳನ್ನು ಇನ್ನೊಂದು ಕಡೆ ಕೂಡಿ ಹಾಕಲಾಗುತ್ತಿತ್ತಂತೆ. ಅಲ್ಲೊಂದು ನೇಣುಗಂಬವೂ ಇತ್ತು. ಆಗೀಗ, ನೇಣಿಗೇರಿಸುವ ಸಂದರ್ಭಗಳಲ್ಲಿ, ಆ ದಪ್ಪ ಗೋಡೆಗಳನ್ನು ತೂರಿಕೊಂಡು ಈಚೆ ಕೇಳಿ ಬರುತ್ತಿದ್ದ ಚೀತ್ಕಾರಗಳು ಆಸುಪಾಸಿನ ಜನರನ್ನು ನಡುಗಿಸುತ್ತಿದ್ದವು.

ಈಗಲೂ ಆ ಸೆರೆಮನೆ ಇದೆ. ಆದರೆ ಪಾಳುಬಿದ್ದಿದೆ. ಜನಕ್ಕೆ ಈಗಲೂ ಆ ಜಾಗ ಭಯಹುಟ್ಟಿಸುತ್ತದೆ. ಜನಕ್ಕಷ್ಟೇ ಅಲ್ಲ, ಪೊಲೀಸರಿಗೂ ಅಲ್ಲಿ ಹೆಜ್ಜೆಹಾಕುವುದೆಂದರೆ ಮೈ ನಡುಕ. ಆ ಸೆರೆಮನೆ ಇಂದು ಮಾಫಿಯಾ ಮಂದಿಯ ಗುಪ್ತಸ್ಥಳ.

೧೯೧೮ರಲ್ಲಿ ಈ ಪ್ರದೇಶದಲ್ಲೇ ಒಂದು ಸಾಮಾನ್ಯ ಮೆಮನ್ ಮುಸ್ಲಿಂ ಕುಟುಂಬದಲ್ಲಿ ಹುಟ್ಟಿದವಳು ಜೇನಾಬಾಯಿ. ಅಪ್ಪ ಎರಡು ಟಾಂಗಾಗಳ ಮಾಲಿಕ. ಒಂದನ್ನು ಬಾಡಿಗೆಗೆ ಕಳಿಸುತ್ತಿದ್ದ, ಇನ್ನೊಂದನ್ನು ತಾನೇ ಹೊಡೆಯುತ್ತಿದ್ದ. ಹದಿನಾಲ್ಕು ವರ್ಷ ತುಂಬುವವರೆಗೂ ಅಪ್ಪನ ಟಾಂಗಾದಲ್ಲೇ ಸುತ್ತಿ ಬೆಳೆದ ಜೇನಾಬಾಯಿಗೆ ಸಾಕಷ್ಟು ಲೋಕಾನುಭವದ ಲಾಭವಾಯಿತು. ಹದಿನೈದನೆ ವಯಸ್ಸಿಗೇ ಮದುವೆ, ಹದಿ

ನೇಳರ ಹೊತ್ತಿಗೆ ತಾಯ್ತನ. ಜೇನಾಬಾಯಿ ೨೮ ತುಂಬುವುದರೊಳಗೆ ಹತ್ತು ಮಕ್ಕಳನ್ನು ಹೆತ್ತಳು. ಐದು ಮಕ್ಕಳು ಅಲ್ಪಾಯುಷ್ಯ ಪಡೆದು ಬಂದಿದ್ದವು.

ಇಪ್ಪತ್ತು ವರ್ಷದ ಮಗ ಕಮಾಲ್ ಅಹ್ಮದ್ ಕೊಲೆಯಾಗುವವರೆಗೂ ಜೇನಾಬಾಯಿಯ ಬಾಳಲ್ಲಿ ಜೇನು ಮಳೆ ಸುರಿಯುತ್ತಿತ್ತು.

ಆ ದಿನ ಯಾರನ್ನೋ ಕಾಣಲೆಂದು ಹೋಗಿದ್ದವಳನ್ನು ಇನ್ನೊಬ್ಬ ಮಗ ಇಕಬಾಲ್ ಓಡಿಬಂದವನೆ ಅವಸರದಲ್ಲಿ ಟ್ಯಾಕ್ಸಿಯಲ್ಲಿ ಕರೆದೊಯ್ದ. ಏನಾಯಿತೆಂದು ಊಹಿಸುವುದೂ ಆಕೆಗೆ ಆಗಲಿಲ್ಲ. ಟ್ಯಾಕ್ಸಿ ಮೊಹ್ಮದ್ ಅಲಿ ರಸ್ತೆಗೆ ಬಂದಾಗ ಕಮಾಲ್‌ನನ್ನು ಪೊಲೀಸರು ಜೆ.ಜೆ. ಆಸ್ಪತ್ರೆಗೆ ಕರೆದೊಯ್ದರೆಂದು ಅಲ್ಲಿದ್ದವರು ಹೇಳಿದರು. ಟ್ಯಾಕ್ಸಿ ಜೆ.ಜೆ. ಹಾಸ್ಪಿಟಲ್ಲಿಗೆ ಬಂತು. ಇಳಿದು ಧಡಪಡಿಸಿಕೊಂಡು ಹೊರಟವಳಿಗೆ ಸ್ಟ್ರೆಚರ್ ಮೇಲೆ ಮಲಗಿದ್ದ ಮಗನ ಹೆಣ ಎದುರಾಯಿತು. ಜೇನಾಬಾಯಿ ಕುಸಿದು ಕುಳಿತಳು.

ತಂಗಿ ರೇಶ್ಮಾ ಜೇನಾ ಬಾಯಿಯನ್ನು ಪೊಲೀಸು ಠಾಣೆಗೆ ಕರೆದೊಯ್ದು ದೂರು ದಾಖಲಿಸುತ್ತಿದ್ದ ಹಾಗೆಯೇ ನಾಲ್ವರು ಯುವಕರು- ದಾವೂದ್, ವಾಜಿದ್, ಬರೋದಾ ಮತ್ತು ಅಹ್ಮದ್ ಕಾಣಿಸಿಕೊಂಡರು.

"ಸಾಬ್, ಕಮಾಲ್ ಅಹ್ಮದ್ ದರವೇಶ್ ಎಂಬಾತ ನಮ್ಮನ್ನು ಚೂರಿಯಿಂದ ಇರಿದು ಗಾಯಗೊಳಿಸಿದ್ದಾನೆ," ಎಂದು ತಾವೂ ಒಂದು ದೂರು ದಾಖಲಿಸಿದರು.

"ನೋಡಿದಿರಾ ಸಾರ್? ಇವರೇ ನಮ್ಮ ಕಮಾಲ್‌ನನ್ನು ಇರಿದು ಕೊಂದವರು. ನೋಡಿದವರು ನಮಗೆ ಹೇಳಿದ್ದಾರೆ. ಈಗ ಉಲ್ಟಾ ದೂರು ನೀಡಲು ಬಂದಿದ್ದಾರೆ...." ರೇಶ್ಮಾ ಗುಡುಗಿದಳು.

ಜೇನಾಬಾಯಿ ತಣ್ಣಗೆ ಒಮ್ಮೆ ಆ ನಾಲ್ಕು ಮುಖಗಳನ್ನು ನೋಡಿದಳು. ಆ ಕಣ್ಣುಗಳನ್ನು ಇದುರಿಸಲಾಗದೆ ಆ ಮುಖಗಳು ನೆಲ ನೋಡತೊಡಗಿದವು. ಸಬ್ ಇನ್ಸ್‌ಪೆಕ್ಟರ್ ಕೂಡಲೇ ಅವರನ್ನೆಲ್ಲ ಲಾಕಪ್‌ಗೆ ತಳ್ಳುವಂತೆ ಆಜ್ಞೆ ಮಾಡಿದ.

ಜೇನಾಬಾಯಿ ಆ ಹುಡುಗರನ್ನೆ ನೋಡುತ್ತಿ



ದ್ದಳು. 'ಜೀವಕೊಡುವಂಥ ಗೆಳೆಯರಾಗಿದ್ದವರು ಗೆಳೆಯನ ಜೀವವನ್ನೇ ಕೊಂಡರಲ್ಲ, ಯಾಕೆ?' ಎಂದು ಯೋಚಿಸುತ್ತಲೇ ಕುಳಿತಳು. ಸಣ್ಣ ಜಗಳ ದೊಡ್ಡ ಅನಾಹುತಕ್ಕೆ ಕಾರಣವಾಗಿತ್ತು.

ಆದರೆ ಗಟ್ಟಿ ಸಾಕ್ಷಿಗಳೇ ಇರಲಿಲ್ಲ. ನ್ಯಾಯಾಲಯದಿಂದ ನಗುನಗುತ್ತಲೇ ಹೊರಬಂದರು ಪಾತಕಿಗಳು.

ದೇಶಕ್ಕೆ ಸ್ವಾತಂತ್ರ್ಯ ಬಂತು. ಪಾಕ್ ವಿಭಜನೆಯ ನಂತರ ಬಹುತೇಕ ಮುಸಲ್ಮಾನರು ಆ ದೇಶಕ್ಕೆ ನಡೆದರು. ಜೇನಾಬಾಯಿಯ ಗಂಡ ಮೊಹ್ಮದ್ ಹಾಜಿ ಅಲಿ ದರವೇಶ್ ಗಂಟು ಮೂಟೆ ಕಟ್ಟತೊಡಗಿದ. ಜೇನಾ ವಿರೋಧಿಸಿದಳು. ಎಷ್ಟೇ ಮನವೊಲಿಸಿದರೂ, ಒತ್ತಾಯಿಸಿದರೂ ಜೇನಾ ಒಪ್ಪಲಿಲ್ಲ. ಗಂಡ ಸಿಟ್ಟಿಗೆದ್ದ. ಮಕ್ಕಳನ್ನೆಲ್ಲ ಈಕೆಯ ಬಳಿಯೇ ಬಿಟ್ಟು ಪಾಕಿಸ್ತಾನದ ಗಾಡಿ ಹತ್ತಿದ. ನಾಲ್ಕು ದಿನಗಳ ನಂತರ ಪತ್ರ ಬಂತು: "ಮುಟ್ಟಿದ್ದೇನೆ. ಸುಖದಿಂದಿದ್ದೇನೆ," ಎಂದಲ್ಲ, "ತಲಾಕ್ ನೀಡಿದ್ದೇನೆ" ಎಂದು.

ಓದು ಬರಹ ಗೊತ್ತಿರದ, ಒಂದು ಹೊತ್ತಿನ

ಊಟಕ್ಕೂ ತೊಂದರೆಪಡುತ್ತಿದ್ದ ಜೇನಾಬಾಯಿ ಮಕ್ಕಳ ಹೊಟ್ಟೆಯನ್ನಾದರೂ ತುಂಬುವ ಅನಿವಾರ್ಯತೆಯಿಂದ ಹೋಲಿಗೆಯ ಕೆಲಸಕ್ಕೆ ನಿಂತಳು.

ಹಿಂದಿನಿಂದಲೇ ಕೋಮುಗಲಭೆಗಳ ದಳ್ಳುರಿ ಎದ್ದಿತ್ತು. ಮುಂಬಯಿಗೆ ಮುಂಬಯಿಯೆ ಎಡಗೈಯಲ್ಲಿ ಜೀವ ಹಿಡಿದುಕೊಂಡಿತು. ಮೊಹಮ್ಮದ್ ಅಲಿ ರಸ್ತೆಯಲ್ಲಂತೂ ಎತ್ತರೆತ್ತರ ಅಗ್ನಿ ಜ್ವಾಲೆಗಳು, ಚಾಕು ಚೂರಿಗಳೇ ಮೆರೆದವು.

ದಳ್ಳುರಿಯನ್ನು ಆರಿಸಲು ಅಲ್ಲಿನವರೇ ಮುಂದಾಗಬೇಕಲ್ಲ. ಸ್ತ್ರೀ-ಪುರುಷರೆಲ್ಲ ಅದಕ್ಕಾಗಿ ಟೊಂಕಕಟ್ಟಿ ನಿಂತರು. ಜೇನಾಬಾಯಿ ಅವರೊಂದಿಗೆ ಸೇರಲು ತಡಮಾಡಲಿಲ್ಲ. ಸೇರಿದಳಷ್ಟೇ ಅಲ್ಲ, ಮುಂಚೂಣಿಯಲ್ಲೆ ನಿಂತಳು. ಆ ನಂತರ ದಶಕಗಳ ಕಾಲ ಮೊಹಮ್ಮದ್ ಅಲಿ ರಸ್ತೆಯತ್ತ ಕೋಮುಗಲಭೆ ಎಂಬುದು ಕಣ್ಣೆತ್ತಿ ಕೂಡ ನೋಡುವ ಧೈರ್ಯ ಮಾಡಲಿಲ್ಲ.

ಎಲ್ಲ ಮತ್ತೆ ಶಾಂತವಾಯಿತೆಂಬಷ್ಟರಲ್ಲೇ ಮತ್ತೊಂದು ಆತಂಕ ಅವುಕ್ಕೆಂದಿತು. ಮೊಹಮ್ಮದ್ ಹಾಜಿ ಅಲಿ ದರವೇಶ್ ತಾನು ಪಾಕಿಸ್ತಾನಕ್ಕೆ ಹೋಗುವ ಮೊದಲು ಘನಂದಾರಿ ಕೆಲಸವೊಂದನ್ನು ಮಾಡಿಟ್ಟಿದ್ದ. ಸರಕಾರಕ್ಕೆ ಪತ್ರಬರೆದು ತಾನು ಆವರೆಗೆ ವಾಸಿಸಿದ್ದ ಮನೆ-ಇನ್ನುಳಿದ ಸಣ್ಣಪುಟ್ಟ ಆಸ್ತಿಗೂ ಜೇನಾಬಾಯಿ ಹಾಗೂ ಅವಳ ಮಕ್ಕಳಿಗೂ ಯಾವುದೇ ಸಂಬಂಧವಿಲ್ಲ ಎಂದು ತಿಳಿಸಿಬಿಟ್ಟಿದ್ದ.

ಸರಕಾರಿ ಅಧಿಕಾರಿಗಳು ಫರಮಾನಿನೊಂದಿಗೆ ಬಂದೇಬಿಟ್ಟರು. ಜೇನಾಬಾಯಿ ಮಕ್ಕಳನ್ನೂ ಹೊಲಿಗೆಯಂತ್ರವನ್ನೂ ಕಟ್ಟಿಕೊಂಡು ಹೊರಬೀಳಲೇಬೇಕಾಯಿತು. ಆ ಆದೇಶದ ವಿರುದ್ಧ ಕೋರ್ಟಿಗೆ ಹೋಗಬಹುದಾಗಿತ್ತು. ಆದರೆ ಅದಕ್ಕೆಲ್ಲ ಹಣ ಬೇಕು. ತನಗೆ ಮಾರ್ಗದರ್ಶನ ಮಾಡುವಂಥ ಒಬ್ಬ ಗಂಡಸು ಬೇಕು. ಒಂದು ವೇಳೆ ಅಂಥ ಸಹೃದಯಿಯೊಬ್ಬ ಸಹಾಯ ನೀಡಲು ಮುಂದೆ ಬಂದರೂ ಕಂಡವರ ಬಾಯಿಯನ್ನು ಕಟ್ಟಲಾಗುತ್ತದೆಯೆ? ಇಲ್ಲದ ಸಂಬಂಧ ಹಚ್ಚಿ ಹೆಸರು ಕೆಡಿಸಲು ಸಮಾಜ ಸದಾ ಸಜ್ಜಾಗಿಯೆ ಕುಳಿತಿರುತ್ತದಲ್ಲ!

ವಿವೇಕದಿಂದ ಮುಂದೆ ಹೆಜ್ಜೆ ಇಟ್ಟ ಜೇನಾಬಾಯಿಗೆ "ಖುದಾ ಕೈ ಬಿಡುವುದಿಲ್ಲ" ಎಂಬ ಅಚಲ ವಿಶ್ವಾಸ. ದೇವರು ನಿಜಕ್ಕೂ ಕೈ ಬಿಡಲಿಲ್ಲ. ದಳವಿ ಎಂಬೊಬ್ಬ ವಕೀಲರು ಜೇನಾಬಾಯಿಗೆ ನ್ಯಾಯ ದೊರಕಿಸಿಕೊಡುವ ಪಣತೊಟ್ಟರು. "ಹಣಕಾಸಿನ ವಿಚಾರ ಮಾಡಬೇಡ. ಕೇಸು ಹಾಕು," ಎಂದು ಧೈರ್ಯ ತುಂಬಿದರು. ಜೇನಾಬಾಯಿ ಆದೇಶ ತಂದ ಸರಕಾರಿ ಅಧಿಕಾರಿಗಳನ್ನು ಒಂದು ವರ್ಷ ಕೋರ್ಟಿಗೆ ಎಡತಾಕಿಸಿದಳು. ನ್ಯಾಯಾಲಯ ಈ ಬಡ ಹೆಂಗಸಿಗೆ ಮನೆ ಕೊಡಿಸಿಕೊಟ್ಟಿತು.

•

ಮೊರಾರ್ಜಿ ಆಗ ಮುಂಬಯಿಯ ಮುಖ್ಯಮಂತ್ರಿ. ಅವರು ಅಂತಾರಾಜ್ಯ ಅಕ್ಕಿ ಸಾಗಾಟದ ವಿರುದ್ಧ ಕಠಿಣವಾದ ಕ್ರಮಗಳನ್ನೇ ಕೈಗೊಂಡಿದ್ದರು. ಹೀಗಾಗಿ ಮುಕ್ತ ಮಾರುಕಟ್ಟೆಯಲ್ಲಿ ಅಕ್ಕಿ ಸಿಕ್ಕುತ್ತಿರಲಿಲ್ಲ. ಏನಿದ್ದರೂ ರೇಶನ್ ಮೂಲಕವೇ ಅದನ್ನು ಪಡೆಯಬೇಕು. ಮುಂಬಯಿಯಲ್ಲಿ ಅಕ್ಕಿಯನ್ನು ಆಹಾರವಾಗಿ ಬಳಸದ ಬಹಳ ಜನ ಇದ್ದರು. ಜೇನಾಬಾಯಿಗೊಂದು ವಿಚಾರ ಹೊಳೆಯಿತು: ಅಂಥವರ ಕಾರ್ಡಿನ ಅಕ್ಕಿಯನ್ನು ತಾನೇ ಖರೀದಿಸಿ ಸ್ವಲ್ಪ ಹೆಚ್ಚಿನ ಬೆಲೆಗೆ ಇತರರಿಗೆ ಮಾರಿ ಅಷ್ಟಿಷ್ಟು ಲಾಭ ಗಳಿಸಿದರೆ ಹೇಗೆ? ಯೋಚನೆ ಫಲಪ್ರದವಾಯಿತು. ಆಕೆಯೂ ಮಕ್ಕಳೂ ತೃಪ್ತಿಯಿಂದಿರುವಂತಾಯಿತು.

ಈಕೆಯೇನೋ ಕುಟುಂಬ ನಿರ್ವಹಣೆಗಾಗಿ ಇಂಥ ಕೆಲಸಕ್ಕಿಳಿದಿದ್ದಳೇ ವಿನಾ 'ಕಳ್ಳ ದಾಸ್ತಾನು-ಕಾಳ ಸಂತೆ' ಎಂಬ ಪದಗಳೇ ಆಕೆಗೆ ಗೊತ್ತಿರಲಿಲ್ಲ. ಆದರೆ ಇಂಥ ದಾಸ್ತಾನನ್ನು ಮಾಡುತ್ತಿದ್ದವರಿಗೆ ಮಾತ್ರ ಜೇನಾಬಾಯಿ ತಮ್ಮ ದಾರಿಯಲ್ಲಿನ ಮುಳ್ಳು ಎಂದೆನಿಸಿತು. ಅವರು ಪುಂಡರನ್ನು ಛೂ ಬಿಟ್ಟರು. "ಹಫ್ತಾ ಕೊಡು, ಇಲ್ಲದಿದ್ದರೆ ನಿನ್ನಾಟ ನಡೆಯದಂತೆ ಮಾಡುತ್ತೇವೆ ನೋಡು," ಎಂದು ಹೆದರಿಸಿ ಹಣ ಕೀಳುವ ಹುನ್ನಾರು ನಡೆಸಿದರು. "ಕೊಡದಿದ್ದರೆ ಜೀವ ಸಹಿತ ಬಿಡುವುದಿಲ್ಲ. ಒಂದೋ ಹಫ್ತಾ ಕೊಡು; ಇಲ್ಲ, ಈ ರೇಶನ್ ಅಕ್ಕಿ ಖರೀದಿಸಿ ಮಾರುವ ಧಂದೆಯನ್ನಾದರೂ ಬಂದು ಮಾಡು,"

ಎಂದವರು ಗಂಟುಬಿದ್ದರು.

ಜೇನಾಬಾಯಿಗೆ ನಿದ್ರೆಯೆಂಬುದೇ ಮರೆತು ಹೋಯಿತು. ಧಿನವಿಡೀ ದುಡಿದು, ದಣಿದು ಹೀಗೆ ಕಣ್ಣುಮುಚ್ಚಬೇಕು ಎಂಬಷ್ಟರಲ್ಲೇ ಆ ಪುಂಡರದೇ ಹಳವಂಡವಾಗಿ ಎದ್ದು ಕೂಡಬೇಕು. ನಿದ್ರೆಗೇಡಿನ ಸ್ಥಿತಿಯನ್ನು ಎಷ್ಟು ದಿನ ತಾನೇ ಸಹಿಸಿಯಾಳು?

ಒಂದು ದಿನ ಆಕೆ ದವೆ ಎಂಬೊಬ್ಬ ವಕೀಲರ ಬಳಿ ಹೋದಳು. ಆಕೆಯ ಕಷ್ಟವನ್ನೆಲ್ಲ ಅರಿತುಕೊಂಡಳ ವಕೀಲರು, "ನೋಡಮ್ಮಾ... ನೀನು ಚಿಂತಿಸಬೇಕಾದ ಕಾರಣವೇ ಇಲ್ಲ. ನಾಳೆ ಬಾ. ಮೊರಾರ್ಜಿ ಭಾಯಿಯ ಬಳಿ ಹೋಗೋಣ. ಅವರಿಗೆ ಹೇಳಿ, ನಿನಗೆ ನೆರವು ದೊರಕಿಸಿಕೊಡುವೆ," ಎಂಬ ಭರವಸೆಯನ್ನಿತ್ತರು. ಅದನ್ನು ಜೇನಾಬಾಯಿ ಅರೆ ಮನಸ್ಸಿನಿಂದಲೆ ನಂಬಬೇಕಾಯಿತು.

ಆದರೆ ಆಕೆ ಅಂದುಕೊಂಡದ್ದು ಸುಳ್ಳಾಯಿತು. "ನೀನೇನೂ ಯೋಚಿಸಬೇಡಮ್ಮ ಇಂದಿನಿಂದ ಯಾವ ಪುಂಡನೂ ನಿನ್ನ ಸಮೀಪವೂ ಸುಳಿಯುವ ಧೈರ್ಯ ಮಾಡಲಾರ," ಎಂದ ಮೊರಾರ್ಜಿ ತಮ್ಮ ಆಪ್ತ ಕಾರ್ಯದರ್ಶಿಯನ್ನು ಕರೆದು ಆ ಸಂಬಂಧದಲ್ಲಿ ಕೆಲವು ನಿರ್ದೇಶನಗಳನ್ನು ನೀಡಿದರು.

ಮರುದಿನ ಮುಂಜಾನೆ ಎದ್ದು ಮುಖ ತೊಳೆದುಕೊಳ್ಳುತ್ತಿದ್ದ ಜೇನಾಬಾಯಿಗೆ ಪೊಲೀಸು ಜೀಪುಗಳು ತನ್ನ ಮನೆಯ ಮುಂದೆ ನಿಂತದ್ದು ಕಂಡಿತು. ಬಾಗಿಲು ತೆರೆದು ಅವರನ್ನು ಒಳಗೆ ಕರೆದಳು. ಬಂದವರು ಪೊಲೀಸ್ ಉಪ ಆಯುಕ್ತ (ಸಿಐಡಿ ಬ್ರಾಂಚ್) ಅಹ್ಮದ್ ಖಾನ್ ಹಾಗೂ ಅದೇ ವಿಭಾಗದ ಇಬ್ಬರು ಹವಾಲ್ದಾರರು (ಇಬ್ರಾಹಿಂ ಹಕ್ಸರ್ ಮತ್ತು ಇಸ್ರಾರ್ ಖಾನ್.) ಆಕೆ ಕೈ ಮುಗಿದುಕೊಂಡೇ ತನ್ನ ತೊಂದರೆಯನ್ನು ಹೇಳಿಕೊಂಡಳು. ತನ್ನನ್ನು ಸತಾಯಿಸುತ್ತಿರುವ ಗೂಂಡಾಗಳಾದ ಸಲೀಂ ದಾದಾ ಮತ್ತು ಇಬ್ರಾಹಿಂ ದಾದಾರ ಹೆಸರುಗಳನ್ನು ಹೇಳಲು ಜೇನಾಬಾಯಿ ಹಿಂಜರಿಯಲಿಲ್ಲ.

ಅವಳ ಮನೆಯಿಂದ ಹೊರಟ ಪೊಲೀಸು ಉಪ ಆಯುಕ್ತರು ಆ ಇಬ್ಬರೂ ಗೂಂಡಾಗಳನ್ನು ಕೂಡಲೇ ಬಂಧಿಸಿದರು.

ನಂತರದ ದಿನಗಳಲ್ಲಿ ಜೇನಾಬಾಯಿ ಸಚಿವಾಲಯಕ್ಕೆ ಮೊರಾರ್ಜಿ ದೇಸಾಯಿಯವರನ್ನು ಕಾಣಲು ಹೋಗುವುದು ಮಾಮೂಲಾಯಿತು. ಜನ ಇದನ್ನು ಲೇವಡಿ ಮಾಡಲಾರಂಭಿಸಿದರು. ಯಾರೋ ಒಬ್ಬ "ಮೊರಾರ್ಜಿಭಾಯಿಯ 'ಖಬರಿ' (ವರದಿಗಾತಿ)" ಎಂದು ವ್ಯಂಗ್ಯವಾಡಿಬಿಟ್ಟ. ಆದರೆ ಹಾಗೆ ಹೆಸರಿಡುವಾಗ ಅದೇ ಜೇನಾಬಾಯಿಗೆ ಹೆಸರು ತರುತ್ತದೆಂಬುದು ಆತನಿಗೆ ಹೇಗೆ ಗೊತ್ತಾಗಬೇಕು? ಒಂದು ಮಾತಂತೂ ನಿಜ. ಜೇನಾಬಾಯಿಯ ಮನೆಗೆ ಪೊಲೀಸು ಅಧಿಕಾರಿಗಳು ನಿತ್ಯದ ಅತಿಥಿಗಳಾದರು. ಕ್ರಮೇಣ ಆಕೆಯ ಅಣ್ಣತಮ್ಮಂದಿರೂ ಆಗಿಬಿಟ್ಟರು. ಆ ಮೊಹಲ್ಲಾದಲ್ಲಿ ಜೇನಾಭಾಯಿ ಗಣ್ಯರಲ್ಲಿ ಗಣ್ಯಳಾದಳು.

ಮುಂಬಯಿಯಲ್ಲಿ ಮೂರು ವರ್ಷಗಳ ಹಿಂದೆ ಸರಣಿ ಬಾಂಬ್ ಸ್ಫೋಟ ನಡೆಯಿತಷ್ಟೆ. ಅದರ ಸೂತ್ರಧಾರ ದಾವೂದ್ ಇಬ್ರಾಹಿಂ ಬೇರಾರೂ ಅಲ್ಲ; ಜೇನಾಬಾಯಿಯ ಮನೆಗೆ ಬಂದಿದ್ದ ಸಿಐಡಿ ಹವಾಲ್ದಾರ್ ಇಬ್ರಾಹಿಂ ಹಕ್ಸರ್‌ನ ಮಗ.

ಜೇನಾಬಾಯಿಗೆ ಆಮೇಲಾದರೂ ನೆಮ್ಮದಿಯಿತ್ತೇ? ಊಹುಂ, ಜೀವ ತೆಗೆಯುವ ಬೆದರಿಕೆಗಳು ಸಾಲುಗಟ್ಟಿದುವು. ಆದರೆ ಆಕೆಯ ಜೀವವನ್ನು ಬಲಿಗೊಳ್ಳುವುದು ಅಷ್ಟು ಸುಲಭದ ಕೆಲಸವಲ್ಲ ಎಂಬ ಸತ್ಯ ಹೀಗೆ ಬೆದರಿಕೆಯೊಡ್ಡುತ್ತಿದ್ದವರಿಗೂ ಗೊತ್ತಿತ್ತು.

ಒಂದು ದಿನ ಜೇನಾಬಾಯಿಗೆ ಪೊಲೀಸು ಆಯುಕ್ತರ ಕಚೇರಿಯಿಂದ ಬುಲಾವಣೆ ಬಂತು. ಆಯುಕ್ತರು, "ನೋಡಿ, ನಿಮ್ಮ ಪ್ರದೇಶದಲ್ಲಿ ಕಳ್ಳಭಟ್ಟಿ ತಯಾರಿಕೆ ಜೋರಾಗಿದೆಯಂತೆ. ನಮಗೆ ಅವುಗಳ ಜಾಗಗಳೇ ಪತ್ತೆಯಾಗುತ್ತಿಲ್ಲ. ನಮಗೆ ಈ ವಿಷಯದಲ್ಲಿ ನಿಮ್ಮ ನೆರವು ಬೇಕು," ಅಂದರು.

ಕಳ್ಳ ಭಟ್ಟಿ ಸೆರೆ ತಯಾರಿಕೆ ಹೇಗೆ ನಡೆಯುತ್ತದೆ, ಎಲ್ಲಿ ನಡೆಯುತ್ತದೆ ಎಂಬುದನ್ನೆಲ್ಲ ಕಾಗದದ ಮೇಲೆ ತನಗೆ ತೋಚಿದಂತೆ ಚಿತ್ರಿಸಿಬಿಟ್ಟಳು.

"ಹಾಗಾದರೆ ಇವುಗಳನ್ನು ನಡೆಸುವವರು ಯಾರೆಂಬುದೂ ನಿಮಗೆ ಖಂಡಿತ ಗೊತ್ತಿರ

ಬೇಕು."

"ಅವರು ತುಂಬ ಕ್ರೂರಿಗಳು ಸಾಹೇಬ್ರೆ."

"ನೀವೇನೂ ಕಾಳಜಿ ಮಾಡಬೇಡಿ. ನೀವು ಪೊಲೀಸರಿಗೆ ನೆರವಾಗುತ್ತಿದ್ದೀರಿ ಎಂಬುದನ್ನು ನೆನಪಿನಲ್ಲಿಟ್ಟುಕೊಳ್ಳಿ. ನಿಮ್ಮತ್ತ ತಲೆಯೆತ್ತಿ ನೋಡುವ ಧೈರ್ಯವೂ ಅವರಿಗಿರಲಾರದು."

ಜೇನಾಬಾಯಿ ಭಟ್ಟಿಗಳಿರುವ ಜಾಗ ಹಾಗೂ ಅವುಗಳನ್ನು ನಡೆಸುವವರ ಹೆಸರುಗಳನ್ನು ತಿಳಿಸಿದಳು. ಆದರೆ, ತಪ್ಪು ಜಾಗದ ಮೇಲೆ ದಾಳಿ ನಡೆಸಿಯಾರೆಂಬ ಭಯದಿಂದ ಪೊಲೀಸು ವ್ಯಾನಿನಲ್ಲಿ ಜೇನಾಬಾಯಿಯೂ ಇರಬೇಕೆಂದು ಪೊಲೀಸು ಆಯುಕ್ತರು ವಿನಂತಿಸಿಕೊಂಡರು.

ಮುಂಬಯಿಯ ಇತಿಹಾಸದಲ್ಲೇ ಅದು ಹಿಂದೆಂದೂ ನಡೆಯದಿದ್ದಂಥ ದಾಳಿ ಅನಿಸಿತು. ವಶಪಡಿಸಿಕೊಂಡ ಕಳ್ಳಭಟ್ಟಿ ಸೆರೆಯನ್ನು ನಾಶ ಮಾಡುವುದು ಹೇಗೆ, ನಾಶ ಮಾಡುವವರೆಗೂ ಅದನ್ನು ಇಡುವುದೆಲ್ಲಿ ಎಂಬ ಸಮಸ್ಯೆಯುಂಟಾಗುವಷ್ಟು ಪ್ರಮಾಣದಲ್ಲಿತ್ತು ಆ ಮುದ್ದೆ ಮಾಲು.

ಜೇನಾಬಾಯಿಯ ಈ ಕಾರ್ಯವನ್ನು 'ಸಮಾಜ ಸೇವೆ' ಎಂದೇ ಪತ್ರಿಕೆಗಳು ಕರೆದವು. ಆದರೆ ಅದುವರೆಗೂ ಇದಕ್ಕೇ ಸಮಾಜಸೇವೆ ಎನ್ನುತ್ತಾರೆಂಬುದು ಗೊತ್ತಿರದ ಜೇನಾಬಾಯಿ ಮಾತ್ರ ಇಂಥ ಕೆಲಸಗಳಲ್ಲೇ ಸಂತೋಷ ಪಡತೊಡಗಿದ್ದಂತೂ ನಿಜ.

●

ನಲವತ್ತೈದು ವರ್ಷಗಳ ಹಿಂದೆ ಮುಂಬಯಿಯನ್ನೇ ನಡುಗಿಸುತ್ತಿದ್ದಂಥವ ಯಾಕೂಬ್ ಪಿಸ್ತೂಲ್‌ಬಾಜ್ ಎಂಬ ಗೂಂಡಾ. ಒಮ್ಮೆ ಆತ ತನ್ನ ಉಪಪತ್ನಿ ರತ್ನಾಬಾಯಿ ಹಾಗೂ ಆಕೆಯ ಸೋದರ ಶಂಕರ್ ಭೈಯಾರೊಂದಿಗೆ ಜಗಳಕ್ಕಿಳಿದ. ಕೋಪಾವೇಶದಲ್ಲಿ ಕುರುಡನೇ ಆಗಿ ಹೋಗಿದ್ದ ಯಾಕೂಬ್ ಅವರಿಬ್ಬರನ್ನೂ ಕಡಿದು ಚೂರು ಚೂರು ಮಾಡಿದ. ನಂತರ ಆ ತಲೆ, ಕೈ, ಕಾಲು ಮತ್ತು ಮೂಳೆಗಳನ್ನು ಠಾಣಾ ಬಳಿಯ ಕಾಡಿಗೊಯ್ದು ಹುಗಿದುಬಿಟ್ಟ.

ಸರಿಯಾಗಿ ಒಂದು ವರ್ಷದ ನಂತರ, ಈ ಬಗ್ಗೆ ಅದಾಗಲೇ ಸಾಕಷ್ಟು ಮಾಹಿತಿ ಸಂಗ್ರಹಿಸಿದ್ದ



ಜೇನಾಬಾಯಿ ಪೊಲೀಸರಿಗೆ ತಿಳಿಸಿದಳು. ಕೂಡಲೇ ಅವರು ಯಾಕೂಬ್‌ನನ್ನು ಬಂಧಿಸಿದರು. ಪೊಲೀಸರ ಕೈಗೆ ಸಿಕ್ಕಿ ಒದ್ದಾಡಿದ ಯಾಕೂಬ್ ತಾನು ಆ ಇಬ್ಬರನ್ನೂ ಕೊಲೆಗೈದು ಹೂತು ಹಾಕಿರುವ ವಿಷಯವನ್ನು ಒಪ್ಪಿಕೊಂಡ.

ಈ ಘಟನೆಯ ನಂತರ ಜೇನಾಬಾಯಿ ಪೊಲೀಸು ವಲಯದಲ್ಲಿ ಇನ್ನಷ್ಟು ಗೌರವಾನ್ವಿತಳಾದಳು. ಹೀಗಾಗಿ ಆಕೆಯನ್ನು ಹೆದರಿಸಿಕೊಳ್ಳುತ್ತಿದ್ದವರೆಲ್ಲ ಆಕೆಗೆ ಹೆದರತೊಡಗಿದರು. ಅಷ್ಟೇ ಅಲ್ಲ, ಅಕ್ಷರಶಃ ಆಕೆಯ 'ಸಾಕು ನಾಯಿ'ಗಳಂತಾದರು.

ಪೊಲೀಸರೊಂದಿಗೆ ಅಪರಾಧಲೋಕದ ಸಣ್ಣಪುಟ್ಟ ಮಂದಿಯ ಬಿಡುಗಡೆಯೆ ಮೊದಲಾದ ಮಾತುಕತೆಗಳಿಂದ ಶುರುಮಾಡಿದ ಜೇನಾಬಾಯಿ ಮುಂದೊಂದು ದಿನ ನಿರ್ಣಾಯಕ ಸ್ಥಾನದಲ್ಲಿ ನಿಂತದ್ದರಲ್ಲೇನೂ ಅಚ್ಚರಿಯಿಲ್ಲ. ಇದರಿಂದಾಗಿ ಪ್ರತಿಯೊಬ್ಬ ಮಾಫಿಯಾ ವ್ಯಕ್ತಿಯೂ ಈಕೆಯೆದುರು ಡೊಗ್ಗಿ ಸಲಾಮು ಹೊಡೆಯದೇ ಗತ್ಯಂತರವಿರಲಿಲ್ಲ.

●

ದಾವೂದ್‌ನ ಅಪ್ಪ ಇಬ್ರಾಹಿಂ ಹಸ್ಕರ್ ಜೇನಾಬಾಯಿಯ ಮನೆಯಿಂದ ಸ್ವಲ್ಪ ದೂರದಲ್ಲೇ

ವಾಸಿಸುತ್ತಿದ್ದ. ಆಗೀಗ ಈಕೆಯ ಬಳಿ ಬಂದು ಹೋಗಿ ಮಾಡುತ್ತಿದ್ದ. ದೊಡ್ಡ ಮನುಷ್ಯನಾಗುವ ಆಸೆ ಯಾರಿಗಿರುವುದಿಲ್ಲ? ಪೊಲೀಸು ಇಲಾಖೆಯಲ್ಲಿದ್ದುಬಿಟ್ಟರೆ ಆ ಆಸೆ ಪೂರೈಸುವುದೇ? ಇಬ್ರಾಹಿಂ ಹಕ್ಸರ್ ನೌಕರಿಗೆ ರಾಜೀನಾಮೆ ನೀಡಿದ. ಆತನಿಗೆ ಐವರು ಪುತ್ರರು- ಸಾಬಿರ್, ದಾವೂದ್, ಇಕ್ಬಾಲ್, ನೂರಾ ಮತ್ತು ಅನೀಸ್. ಆತ ಸಾಬಿರ್ ಮತ್ತು ದಾವೂದ್‌ಗಾಗಿ ಮನೀಷ್ ಮಾರ್ಕೆಟ್ಟಿನಲ್ಲಿ ಅಂಗಡಿ ತೆಗೆದುಕೊಟ್ಟಿದ್ದ. ಕಳ್ಳಸಾಗಾಟದಿಂದ ಬಂದ ಸಾಮಾನುಗಳಿಗೆ ಆ ಅಂಗಡಿ ಹೆಸರಾಯಿತು.

ಆಗ ದಾವೂದ್ ಇನ್ನೂ ಹದಿನಾರು-ಹದಿನೇಳರ ಹುಡುಗ. ಮೀಸೆ ಆಗಷ್ಟೇ ಮೂಡುತ್ತಿದ್ದುದರಿಂದ 'ಮಸ್ತಿ'ಯಲ್ಲೇ ಇರುತ್ತಿದ್ದ. ಕೋಪವಂತೂ ಮೂಗಿನ ತುದಿಯಲ್ಲೇ. ಜಗಳ-ಹೊಡೆದಾಟಗಳು ನಿತ್ಯದ ಮಾತಾಗಿದ್ದವು. ಅಪ್ಪನೊಂದಿಗೊ ಇಲ್ಲ ಒಬ್ಬಂಟಿಯಾಗಿಯೋ ಆತ ಜೇನಾಬಾಯಿಯ ಮನೆಗೆ ಬರುವುದಿತ್ತು. ಆಕೆಗೂ ಆತನೆಂದರೆ ಪುತ್ರವಾತ್ಸಲ್ಯ. ದಾವೂದ್‌ನ ಇಬ್ಬರು ಗೆಳೆಯರು ಒಮ್ಮೆ ದಾಂಧಲೆ ಹಾಕಿದರು. ಜನ ರೊಚ್ಚಿಗೆದ್ದು ದೊಡ್ಡ ಗಲಾಟೆಯೇ ಆಗುವ ಸಂಭವವಿದ್ದುದರಿಂದ ಪೊಲೀಸರು ದಾವೂದ್ ಸಹಿತ ಆ ಇಬ್ಬರನ್ನೂ ಬಂಧಿಸಿಬಿಟ್ಟರು. ಜಾಮೀನೂ ಸಿಗದಂಥ ಸ್ಥಿತಿ. ಇಬ್ರಾಹಿಂ ಹಕ್ಸರ್ ತನ್ನೆಲ್ಲ ವಶೀಲಿ ಉಪಯೋಗಿಸಿದರೂ ಪ್ರಯೋಜನವಾಗಲಿಲ್ಲ. ಜೇನಾಬಾಯಿಯ ಬಳಿ ಬಂದ. ಕ್ಷಣಾರ್ಧದಲ್ಲೇ ಜಾಮೀನು ಮೇಲೆ ದಾವೂದ್ ಮತ್ತು ಆತನ ಗೆಳೆಯರು ಹೊರಬರುವಂತಾಯಿತು.

ಇದಾಗಿ ಕೆಲ ವರ್ಷಗಳು ಉರುಳಿರಬೇಕು. ದಾವೂದ್ ಮತ್ತು ಆತನ ಅಣ್ಣ ಸಾಬಿರ್ ಯಾವುದೋ ಕಾರಣದಿಂದ ಮತ್ತೆ ಪೊಲೀಸರ 'ಅತಿಥಿ'ಗಳಾದರು. ಆ ಹೊತ್ತಿಗೆ ದಾವೂದ್ ಅಪರಾಧ ಜಗತ್ತಿನಲ್ಲಿ ಹೆಸರು ಮಾಡಿದ್ದ ಕರೀಂ ಲಾಲಾನ ಖಾಸಾ ಮನುಷ್ಯರಾಗಿದ್ದ ಆಲಮ್ ಜೆಬ್, ಅಮೀರ್ ಜಾದಾ, ಸಮದ್ ಖಾನ್ ಮತ್ತು ಸಯೀದ್ ಬಟ್ಟಿಯೊಂದಿಗೆ ಟಕರಾಯಿಸಿದ್ದ. ದಾವೂದ್ ಹಾಗೂ ಸಾಬಿರ್‌ರನ್ನು ಬಿಡಿಸಿಕೊಳ್ಳಲು ಹಾಜಿ ಮಸ್ತಾನ ಆದಿಯಾಗಿ ಎಲ್ಲ 'ತಾಕತ್ತುಳ್ಳ'ವರೂ ತಿಣುಕಿದರು. ಆದರೆ ಪ್ರಯತ್ನ ವಿಫಲವೆನಿಸಿತು. ಜೇನಾಬಾಯಿ ಬಂದದ್ದು ಆಮೇಲೆ. ಆಕೆ ತನ್ನ ಮಗ ರಜ್ಜ ಹಾಗೂ ಅರವಿಂದ ಢೋಲಕಿಯಾರನ್ನು ಜಾಮೀನಾಗಿಸಿದಳು. ದಾವೂದ್ ಹಾಗೂ ಸಾಬಿರ್ ನಿಟ್ಟುಸಿರುಬಿಟ್ಟರು.

ಈ ಘಟನೆಯ ನಂತರವೇ ಜೇನಾಬಾಯಿಗೆ 'ಮೊಹಮ್ಮದ್ ಅಲಿ ರಸ್ತೆಯ ಬೇಗಮ್' ಎಂಬ ಅಭಿಧಾನ ಪ್ರಾಪ್ತವಾದದ್ದು.

ಆಕೆಗೆ ಮುಂಬಯಿಯ 'ಕಪ್ಪು ಮುಖ'ಗಳೆಲ್ಲ ಗೊತ್ತಿದ್ದದ್ದು ಕ್ರಾಯಿಂ ಬ್ರಾಂಚಿನವರಿಗೆ ವರದಾನದಂತಾಗಿತ್ತು. ಜೇನಾಬಾಯಿ ತನ್ನ ಐವತ್ತು ವರ್ಷದ 'ವರದಿಗಾತಿ'ಯ ಬದುಕಿನಲ್ಲಿ ಸಾವಿರಾರು ಪ್ರಕರಣಗಳನ್ನು ಪತ್ತೆ ಹಚ್ಚಲು ಪೊಲೀಸರಿಗೆ ನೆರವಾದಳು.

ಇಷ್ಟಾದರೂ ಯಾವೊಬ್ಬ ನಿರಪರಾಧಿಯೂ ಪೊಲೀಸರಿಂದ ತೊಂದರೆಪಡಬಾರದೆಂಬ ಎಚ್ಚರಿಕೆ ಆಕೆಗೆ. ಮನಸ್ಸು ಮಾಡಿದ್ದರೆ ತನ್ನ 'ವಶೀಲಿ'ಯಿಂದ ಪೊಲೀಸರನ್ನು ಒಪ್ಪಿಸಿ ಮಾಫಿಯಾ ಲೋಕದ ಮಂದಿಯಿಂದ ಸಾಕಷ್ಟು ಲಾಭ ಪಡೆಯಬಹುದಾಗಿತ್ತು. ಇಲ್ಲವೆ "ಒಳಗೆ ಹಾಕಿಸುತ್ತೇನೆ" ಎಂದು ಹೆದರಿಸಿ ಹಣ ಮಾಡಿಕೊಳ್ಳಲೂಬಹುದಾಗಿತ್ತು. ಜೇನಾಬಾಯಿ ಅದನ್ನೆಂದೂ ಇಷ್ಟಪಡಲಿಲ್ಲ.

●

ಹದಿನೈದು ವರ್ಷಗಳ ಹಿಂದೆ ಕೆಲವು ಗೂಂಡಾಗಳು ಡಾಕ್ ಯಾರ್ಡ್ ರಸ್ತೆಯಲ್ಲಿ ಬೇಕಾಬಿಟ್ಟಿಯಾಗಿ ಗುಂಡು ಹಾರಿಸಿ ಓಡಿಹೋದರು. ಬಹು ಹೊತ್ತಿನ ಮೇಲೆ ಬಂದ ಪೊಲೀಸರಿಗೆ ಸಿಕ್ಕವರು ಕೆಲವು ನಿಷ್ಪಾಪಿ ಮುಗ್ಧರು. ಅದ್ಯಾಕೋ ಆ ಹೊತ್ತಿಗೆ ಜೇನಾಬಾಯಿಯೂ ಅಲ್ಲಿಗೆ ಬಂದಳು. ಹಿಡಿಯಲ್ಪಟ್ಟವರತ್ತ ಲಕ್ಷ್ಯ ಹರಿಯಿಸಿದ ಆಕೆಗೆ ಕೈಯಲ್ಲಿ ಚೀಲ ಹಿಡಿದು ಅಳುತ್ತಿದ್ದ ಇಬ್ಬರು ಯುವಕರು ಕಂಡರು. ಅವರು ಏನೂ ಅರಿಯದವರೆಂಬುದು ಜೇನಾಬಾಯಿಗೆ ಗೊತ್ತಾಗದೇ ಇರಲಿಲ್ಲ. "ಸಾಮಾನು ಖರೀದಿಸಲು ಪೇಟೆಗೆ ಹೊರಟಿದ್ದೆವು. ಇವರ ಕೈಗೆ ಸಿಕ್ಕಿ ಹಾಕಿಕೊಂಡೆವು," ಎಂದು ಭೋರಾಡಿ ಅಳತೊಡಗಿ

ದರು.

"ನಾನು ಜೇನಾಬಾಯಿ ಅಂತ. ನೋಡಿ, ನೀವಿಬ್ಬರೂ ಪೊಲೀಸ್ ಕಮೀಶ್ನರ್ ಸಾಹೇಬರ ಮುಂದೆ 'ನಾವು ಜೇನಾಬಾಯಿಯ ಪರಿಚಿತರು. ಆಗಾಗ ಅವರ ಮನೆಗೆ ಹೋಗುತ್ತಿರುತ್ತೇವೆ' ಅಂತ ಬರೆದುಕೊಟ್ಟುಬಿಡಿ. ನೀವಿಬ್ಬರೂ ಪಾತ್ರೆಗೆ ಕಲಾಯಿ ಹಾಕುವವರೆಂದು ಹೇಳಿಕೊಳ್ಳಿ," ಎಂದವಳೇ ಅಲ್ಲಿಂದ ನಡೆದುಬಿಟ್ಟಳು.

ತುಸು ಹೊತ್ತಿನಲ್ಲೇ ಬಂಧಿಸಲ್ಪಟ್ಟವರನ್ನೆಲ್ಲ ಪೊಲೀಸ್ ಕಮೀಶ್ನರರ ಎದುರು ಹಾಜರು ಪಡಿಸಲಾಯಿತು. ಅವರನ್ನೆಲ್ಲ ಸೂಕ್ಷ್ಮವಾಗಿ ಗಮನಿಸಿ ಪೊಲೀಸ್ ಕಮೀಶ್ನರರು ತಮ್ಮ ಚೇಂಬರಿಗೆ ಬಂದಾಗ ಎದುರಿಗೆ ಜೇನಾಬಾಯಿ!

"ಈ ದೊಂಬಿ ಗಿಂಬಿಯ ಸಂದರ್ಭಗಳಲ್ಲಿ ಯಾರ್‍ಯಾರೋ ಸಿಕ್ಕಿಬೀಳುತ್ತಾರೆ ನೋಡಿ. ಈಗ ಯಾರೋ ಇಬ್ಬರು ಸಾದುಗಪ್ಪು ಹುಡುಗರು ನಿಮ್ಮ ಪರಿಚಿತರೆಂದು ಹೇಳಿಕೊಳ್ಳುತ್ತಿದ್ದಾರೆ. ಕಲಾಯಿಗಾರರ ಹುಡುಗರಂತೆ.... " ಎನ್ನುತ್ತ ಕಮೀಶ್ನರ್ ಸಾಹೇಬರು ತಮ್ಮ ಕುರ್ಚಿಯಲ್ಲಿ ಕೂಡುತ್ತಿದ್ದಂತೆಯೆ ಆಕೆ,

"ಕೈಯಲ್ಲಿ ಚೀಲವಿತ್ತೇನು? ಇದ್ದುದಾದರೆ ಅವರು ಕಲಾಯಿಗಾರ ಹುಡುಗರೇ ಹೌದು. ನನ್ನ ಮನೆಗೆ ಆಗೀಗ ಬರುತ್ತಿರುತ್ತಾರೆ. ಪಾಪ, ಬಿಟ್ಟುಬಿಡಿ ಸಾಹೇಬ್," ಎಂದುಬಿಟ್ಟಳು.

ಬಿಡುಗಡೆಯಾದ ಆ ಹುಡುಗರು ನಂತರ ಆಕೆಯನ್ನು ಅಮ್ಮಾ ಎಂದೇ ಕರೆಯುತ್ತ ಆ ಈ ಕೆಲಸ ಮಾಡಿಕೊಡತೊಡಗಿದರು.

ಹದಿಮೂರು ವರ್ಷಗಳ ಹಿಂದೆ ಜಕಾರಿಯಾ ಮಸೀದೆಯ ಬಳಿ ಬಸ್ಸೊಂದರ ಗಾಲಿಗೆ ಆರು ವರ್ಷದ ಹಸುಳೆ ಬಿದ್ದುಬಿಟ್ಟ. ಜನ ರೊಚ್ಚಿಗೇಳಲು ಇದಕ್ಕಿಂತ ಇನ್ನಾವ ಕಾರಣ ಬೇಕು? ಡ್ರೈವರ್-ಕಂಡಕ್ಟರ್ ಸಹಿತ ಬಸ್ಸನ್ನು ಸುಟ್ಟು ಹಾಕುವ ಪ್ರಯತ್ನವೂ ನಡೆಯಿತು. ಸುದ್ದಿ ಗೊತ್ತಾದ ಜೇನಾಬಾಯಿ ಅಲ್ಲಿಗೆ ಧಾವಿಸಿದಳು. ಡ್ರೈವರ್ ಮತ್ತು ಕಂಡಕ್ಟರನನ್ನು ಹೇಗೋ ಪಾರುಮಾಡಿ ಮನೆಗೆ ಕರೆತಂದು ಬಚ್ಚಿಟ್ಟಳು. ಹುಚ್ಚೆದ್ದ ಜನರನ್ನು ನಿಯಂತ್ರಿಸಲು ಪೊಲೀಸರಿಗೆ ಸಾಧ್ಯವಾಗದಾಗಿ ಪೊಲೀಸ್ ಆಯುಕ್ತರೇ ಬಂದದ್ದು ಇನ್ನಷ್ಟು ಗದ್ದಲಕ್ಕೆ ಕಾರಣವಾಗಿತ್ತು. ಈ ಗದ್ದಲದಲ್ಲೇ ಜೇನಾಬಾಯಿ ಆ ಇಬ್ಬರನ್ನು ಪಾರುಮಾಡಿದ್ದು. ಅಲ್ಲದೇ ಯಾರೋ ಕುದಿಯುತ್ತಿದ್ದ ನೀರು ಸುರುವಿದ್ದರಿಂದ ಮೈ ಸುಟ್ಟುಕೊಂಡ ಇಬ್ಬರು ಪೊಲೀಸರನ್ನು ಜೇನಾಬಾಯಿ ತನ್ನ ಮನೆಗೆ ಕರೆತಂದು ಗಾಯಗಳಿಗೆ ಪ್ರಥಮ ಚಿಕಿತ್ಸೆ ನಡೆಸಿದಳು.

ಆಕೆಯ ಬದುಕಿನಲ್ಲಿ ಇಂಥ ಪ್ರಸಂಗಗಳು ಅದೆಷ್ಟೋ. ಅವನ್ನೆಲ್ಲ ಕ್ರಮಬದ್ಧವಾಗಿ ನಿರೂಪಿಸಿದರೆ ಅದೊಂದು ರೋಮಾಂಚಕಾರಿ ಪುಸ್ತಕವೇ ಆಗುತ್ತದೆ. ಜೇನಾಬಾಯಿ, ಬಹುಶಃ ಜಗತ್ತಿನಲ್ಲಿ, ಮಾಫಿಯಾ ಹಾಗೂ ಪೊಲೀಸು ಎರಡೂ ಕ್ಷೇತ್ರಗಳವರಿಗೆ ಬೇಕಾದ ಏಕೈಕ ಮಹಿಳೆಯೇನೋ. ಜನಕ್ಕಂತೂ ಆಕೆಯೆಂದರೆ ಆಪದ್ಬಾಂಧವಳೆ ಸೈ.

ವಯಸ್ಸಾದರೂ ಆಕೆಯ 'ಸಮಾಜ ಸೇವೆ'ಯ ಹಂಬಲಕ್ಕೆ ಮಾತ್ರ ಕುಂದುಂಟಾಗಲೇ ಇಲ್ಲ. ●

---

## ಉಸಿರು ಬಿಗಿ ಹಿಡಿಯುವುದರಲ್ಲಿ ದಾಖಲೆ

ಆಮ್ಲಜನಕವಿಲ್ಲದೆ, ಉಸಿರು ಎಳೆಯದೆ ಒಬ್ಬ ಮನುಷ್ಯ ಎಷ್ಟು ಸಮಯ ಇರಬಹುದೆಂದು ತಿಳಿದುಕೊಳ್ಳಲು ಸ್ವೀಡನ್ನಿನಲ್ಲಿರುವ ಜಿಯೋಫಿಜಿಕಲ್ ಲ್ಯಾಬೋರೇಟರಿ ೧೯೯೩ರ ಫೆಬ್ರುವರಿ ೨೫ನೇ ತಾರೀಖಿನಂದು ಒಂದು ಒಂದು ಪ್ರಯೋಗ ನಡೆಸಿತು. ಆ ಪ್ರಯೋಗದಲ್ಲಿ ಪೀಟರ್ ಹಾರ್ವೆಲ್ ಎಂಬ ೨೭ ವರ್ಷದ ಯುವಕ ಮುಖಕ್ಕೆ ಯಾವುದೇ ವಿಧವಾದ ಪರಿಕರವನ್ನೂ ಧರಿಸದೇ ೬ ನಿಮಿಷ ೩ ಸೆಕೆಂಡುಗಳ ಕಾಲ ನೀರಿನಲ್ಲಿ ಮುಳುಗಿದ್ದು ಉಸಿರು ಬಿಗಿ ಹಿಡಿಯುವುದರಲ್ಲಿ ಹೊಸ ದಾಖಲೆ ಸೃಷ್ಟಿಸಿದ.

● ಎಚ್.ಆರ್. ವಸ್ತದ

# ಮರೆಗುಳಿತನ ಹೇಗೆ ಬರುತ್ತದೆ?

ಆ ಕುರಿತು ಹೆಲ್ಸಿಂಕಿಯಲ್ಲಿ ಇಷ್ಟರಲ್ಲೇ ಪ್ರಯೋಗಗಳು ನಡೆಯಲಿವೆ

• ಶ್ರೀಕಾಂತ

ಮರೆಗುಳಿತನ ಯಾರನ್ನೂ ಬಿಟ್ಟಿಲ್ಲ. ಸ್ಮರಣ ಶಕ್ತಿ ಎಷ್ಟು ಪ್ರಗಾಢವಾಗಿದೆಯೆಂದರೂ ಅದು ಒಂದಿಲ್ಲೊಂದು ರೀತಿಯಲ್ಲಿ ಕೈಕೊಡುವಂಥಾದ್ದೆ. ಆ ಕುರಿತು ನಿಯತಕಾಲಿಕವೊಂದರಲ್ಲಿ ಇತ್ತೀಚೆ ಬಂದ ಜೋಕ್ ಹೀಗಿದೆ: ಒಬ್ಬಾತ ಸ್ಮರಣಶಕ್ತಿಯನ್ನು ಹೆಚ್ಚಿಸಿಕೊಳ್ಳುವ ತರಬೇತಿ ವರ್ಗಕ್ಕೆ ಸೇರಿದ. ತರಬೇತಿ ಮುಗಿದ ಮೇಲೆ ತನ್ನ ಸ್ಮರಣಶಕ್ತಿ ಇಷ್ಟು ಅಗಾಧವಾಗಿ ಬೆಳೆದಿದೆಯಲ್ಲಾ! ಎಂದು ಅವನಿಗೇ ಆಶ್ಚರ್ಯವಾಯಿತು. ಸಂಜೆ ಮನೆಗೆ ಬಂದವನೇ ಹೆಂಡತಿಯ ಮುಂದೆ ಬಡಾಯಿಕೊಚ್ಚಿಕೊಂಡ. ಆಕೆ ದಿನಸಿಪಟ್ಟಿಯನ್ನು ನೀಡಿ, "ಅವನ್ನೆಲ್ಲ ಮರೆಯದೆ ತನ್ನಿ ಸಾಕು," ಅಂದಳು. ಆತ ಲಿಸ್ಟ್ ನೋಡಿದ. ಒಂದಲ್ಲ, ಎರಡಲ್ಲ ೬೭ ಐಟೆಮ್ಮುಗಳು. ಆ ೬೭ ಐಟೆಮ್ಮುಗಳನ್ನೂ ಪಟಪಟ ಹೇಳಿ, "ಇಷ್ಟು ತಂದರೆ ಆಯಿತಲ್ಲ," ಅಂದ. ಗಂಡನ ಸ್ಮರಣಶಕ್ತಿ ಇಷ್ಟು ಅಗಾಧವಾಗಿ ಸುಧಾರಿಸಿದ್ದಕ್ಕೆ ಹೆಂಡತಿಗೆ ಆಶ್ಚರ್ಯವೆ ಆಶ್ಚರ್ಯ. ಆದರೆ ಸಂಜೆ ಆತ ಬರಿಗೈಯಲ್ಲೇ ಮನೆಗೆ ಬಂದ. ವಾಸ್ತವವಾಗಿ ಆತ ಸಾಮಾನು ತರುತ್ತೇನೆಂದು ಹೆಂಡತಿಗೆ ಹೇಳಿದ್ದನ್ನೇ ಮರೆತಿದ್ದ.

ಮರೆಗುಳಿತನ ನಾನಾ ವಿಧವಾದದ್ದು. ಕೆಲವರಿಗೆ ಮುಖ ನೆನಪಿರುವುದಿಲ್ಲವಾದರೆ ಇನ್ನು ಕೆಲವರಿಗೆ ಹೆಸರು ನೆನಪಿರುವುದಿಲ್ಲ. ಕೆಲವರಿಗೆ ಓದಿದ್ದು ಬೇಗ ಮರೆತುಹೋದರೆ ಇನ್ನು ಕೆಲವರಿಗೆ ಹಿಂದಿನ ದಿನ ನೋಡಿದ ಸಿನೆಮಾದ ಕಥೆಯೆ ಇಂದು ನೆನಪಿರುವುದಿಲ್ಲ. ಅಪ್ರಿಯವಾದದ್ದು ಬಹಳ ಕಾಲ ಸ್ಮರಣೆಯಲ್ಲಿ ನಿಲ್ಲುವುದಿಲ್ಲವೆನ್ನುವುದು ಒಂದು ಸಾರ್ವಕಾಲಿಕ ಸತ್ಯ.

ಇದೆಲ್ಲಕ್ಕಿಂತ ಭಿನ್ನವಾದ ಮರೆಗುಳಿತನವೂ ಒಂದಿದೆ. ಮಾತನಾಡುವಾಗ ಒಮ್ಮೊಮ್ಮೆ ಶಬ್ದವೇ ನಮಗೆ ಸಿಗುವುದಿಲ್ಲ. ಏಕೆ ಹೀಗಾಗುತ್ತದೆ? ಯೋಚನೆ ಮಾತಿಗೆ ರೂಪಾಂತರಗೊಳ್ಳುವಾಗ ತೊಡಕು ಹುಟ್ಟಿಕೊಳ್ಳುವುದೇಕೆ? ಎಂಬುದು ಇತ್ತೀಚೆ ವಿಜ್ಞಾನಿಗಳ ಲಕ್ಷ್ಯವನ್ನು ಸೆಳೆಯುತ್ತಿದೆ. ಅವರು ಕೈಗೊಂಡ ಪ್ರಯೋಗಗಳಿಂದ ಹೊರಬಿದ್ದ ಅಂಶಗಳು ಹಲವಾರು.

ಶಬ್ದಗಳಿಂದ ವಿಚಾರ ರೂಪುಗೊಳ್ಳುವುದೋ ಅಥವಾ ಶಬ್ದಗಳ ಸಹಾಯವೇ ಇಲ್ಲದೆ ವಿಚಾರ ರೂಪುಗೊಳ್ಳುವುದೋ ಎನ್ನುವುದು ಒಂದು ಜಿಜ್ಞಾಸೆಯ ಪ್ರಶ್ನೆ. ವಿಚಾರವೇ ಮೊದಲು ರೂಪುಗೊಳ್ಳುತ್ತದೆ. ಅದಕ್ಕೆ ಶಬ್ದದ ಆಧಾರ ಬೇಕಿಲ್ಲ ಎನ್ನುತ್ತಾರೆ ವಿಜ್ಞಾನಿಗಳು.

ಹಾಗೆ ನೋಡಿದರೆ ಮಾತನಾಡುವುದೇ ಒಂದು ಸಂಕೀರ್ಣ ಕ್ರಿಯೆ. ಮಿದುಳಿನಲ್ಲಿ ಒಮ್ಮೆ ವಿಚಾರ ರೂಪುಗೊಂಡಿತೆಂದರೆ ಅದನ್ನು ವ್ಯಕ್ತಪಡಿಸಲು ಮನಸ್ಸು ಮಿದುಳಿನ ನೂರಾಣುಗಳಲ್ಲಿ ಸಂಕೇತರೂಪದಲ್ಲಿ ಶೇಖರಿಸಲ್ಪಟ್ಟ ಸಾವಿರಾರು ಕೇಂದ್ರಗಳನ್ನು ತಡಕಾಡತೊಡಗುತ್ತದೆ. ಅವುಗಳಿಂದ ಸೆಕೆಂಡಿಗೆ ೧೫ ರಿಂದ ೨೦ ಶಬ್ದಗಳು ಹೊರಹೊಮ್ಮುತ್ತವೆ. ಇವುಗಳಲ್ಲಿ ಬೇಕಾದ್ದನ್ನು ಆಯ್ದುಕೊಂಡು ಯುಕ್ತಕ್ರಮದಲ್ಲಿ ಬಾಯಿಯ ಮೂಲಕ ಹೊರಡಿಸುವುದು ಮುಂದಿನ ಹಂತ. ಈ ಹಂತ ಸೆಕೆಂಡಿನ ಸಾವಿರದಲ್ಲೊಂದು ಭಾಗದಷ್ಟು ಶೀಘ್ರದಲ್ಲಿ ನಡೆದುಹೋಗುತ್ತದೆ.

ವಾಸ್ತವವಾಗಿ ಮಿದುಳು ಒಂದು ರೀತಿಯಲ್ಲಿ ದೊಡ್ಡದೊಂದು ಕಂಪ್ಯೂಟರ್ ಜಾಲವಿದ್ದಂತೆ. ವಿಚಾರಗಳಿಗೂ ಒಂದು ಜಾಲ; ಶಬ್ದಗಳಿಗೂ ಮತ್ತೊಂದು ಜಾಲ. ಈ ಎಲ್ಲ ಜಾಲಗಳೂ ಒಂದೇ ತೆರನಾಗಿಲ್ಲ. ಒಬ್ಬೊಬ್ಬರ ಮಿದುಳಿನಲ್ಲಿರುವ ಜಾಲವೂ ಒಂದೊಂದು ತೆರನಾದದ್ದು. ಹೀಗಾಗಿ ಒಬ್ಬರ ಮಿದುಳಿನಲ್ಲಿರುವ ಜಾಲ ಇನ್ನೊಬ್ಬರ ಮಿದುಳಿನ ಜಾಲದಂತಿರುವುದಿಲ್ಲ.

ವಿಚಾರ ಹೇಗೆ ವ್ಯಕ್ತಗೊಳ್ಳುತ್ತದೆ ಎನ್ನುವುದನ್ನು ತಿಳಿದುಕೊಳ್ಳುವುದೂ ಸ್ವಾರಸ್ಯಕರ. ಉದಾಹರಣೆಗೆ ನಿಮಗೆ 'ಒಂಟೆ' ಎಂಬ ಶಬ್ದವನ್ನು ಉಚ್ಚರಿಸಬೇಕಾಗಿದೆ ಎಂದಿಟ್ಟುಕೊಳ್ಳಿ. ತಟ್ಟನೆ ಮಿದುಳಿನಲ್ಲಿರುವ ವೈಚಾರಿಕಜಾಲ ಉದ್ದೀಪನಗೊಂಡು ಅದರ ಉಬ್ಬಿದ ನೆಯ ಕುತ್ತಿಗೆ, ಎತ್ತರದ ನಿಲುವು, ನೀರನ್ನು ಸಂಗ್ರಹಿಸಿಕೊಂಡಿರುವ ಡುಬ್ಬ, ಭಾರಹೊರುವ ಅದರ ಸಾಮರ್ಥ್ಯ ಮುಂತಾದವು ನಿಮ್ಮ ಗಮನಕ್ಕೆ ಬರುತ್ತವೆ. ಹೀಗೆ ನಿಮ್ಮ ಗಮನಕ್ಕೆ ಬರುವ ಸಮಯದಲ್ಲೇ ಮನಸ್ಸು ಶಾಬ್ದಿಕ ಜಾಲವನ್ನು ತಡಕಾಡತೊಡಗುತ್ತದೆ. ಕತ್ತೆಯಾಗಲಿ ಕುದುರೆಯಾಗಲಿ ಭಾರಹೊರುವ ಪ್ರಾಣಿಗಳು ತಾನೆ? ಹೀಗಾಗಿ ಶಬ್ದದ ಜಾಲದಲ್ಲಿ ಭಾರಹೊರುವ, ಎತ್ತರ ನಿಲುವಿನ, ಕ್ಷೀಣಕಾಯದ ಪ್ರಾಣಿಗಳಿಗೆ ಸಂಬಂಧಿಸಿದ ಕೇಂದ್ರಗಳೆಲ್ಲವೂ ಉದ್ದೀಪನಗೊಳ್ಳುತ್ತವೆ. ಇವುಗಳಲ್ಲಿ ರೂಪುಗೊಂಡ ಕಲ್ಪನೆಗೆ ಸರಿಯಾದ ಶಬ್ದವನ್ನು ಹೊಂದಿಸಿಕೊಳ್ಳುವುದು ಎರಡನೆಯ ಹಂತದ ಕೆಲಸ. ಕಲ್ಪನೆಗೆ ಸರಿಯಾದ ಶಬ್ದದ ಕೇಂದ್ರವೇ ಹೆಚ್ಚು ಉದ್ದೀಪನಗೊಂಡಿರುವುದರಿಂದ ಆ ಶಬ್ದವೇ ಆಯ್ಕೆಯಾಗುವ ಸಂಭವ ಹೆಚ್ಚು. ಆದರೆ ಉದ್ದೀಪನಗೊಂಡ ಕೇಂದ್ರದಿಂದ ವೈಚಾರಿಕ ಜಾಲಕ್ಕೆ ಸಂದೇಶ ಹೋಗುವಾಗ ತೊಂದರೆ ಬಂದಿತೆನ್ನಿ. ಆಗ ಒಂಟೆಯೆಂಬ ವಿಚಾರ ತಲೆಯಲ್ಲಿದ್ದರೂ ಅದು ಬಾಯಿಗೆ ಬರುವುದೇ ಇಲ್ಲ. ತಡೆಯಿರುವ ಅವಧಿ ಹೆಚ್ಚಾದಷ್ಟೂ ಮರೆಗುಳಿತನದ ಅವಧಿಯೂ ಜಾಸ್ತಿ.

ಒಂದು ವಸ್ತುವನ್ನು ಗುರುತಿಸಲು ಮಿದುಳು ಎಷ್ಟು ಸಮಯ ತೆಗೆದುಕೊಳ್ಳುತ್ತದೆ ಗೊತ್ತೆ? ಸೆಕೆಂಡಿನ ಎಂಭತ್ತು ಸಾವಿರದ ಭಾಗದ ಪೈಕಿ ಒಂದು ಭಾಗದಷ್ಟು ಅವಧಿಯನ್ನು. ಒಂದು ವಸ್ತುವನ್ನು- ಉದಾಹರಣೆಗೆ ಒಂಟೆಯ ಚಿತ್ರವನ್ನು- ತೋರಿಸಿ ಅದೇ ಸಮಯದಲ್ಲೆ 'ಕುದುರೆ' ಎಂಬ ಶಬ್ದವನ್ನು ಉಚ್ಚರಿಸಿದರೆನ್ನಿ. ಆಗ ಸರಿಯಾದದ್ದನ್ನು ಗುರುತಿಸಲು ಮಿದುಳು ತೆಗೆದುಕೊಳ್ಳುವ ಕಾಲ ಸೆಕೆಂಡಿನ ಎಪ್ಪತ್ತು ಸಾವಿರದ ಒಂದು ಭಾಗದಷ್ಟು. ಒಂಟೆಗೆ ಯಾವ ರೀತಿಯಿಂದಲೂ ಸಂಬಂಧಿಸಿರದ (ಉದಾ: ಮನೆ) ಶಬ್ದವನ್ನು ಉಚ್ಚರಿಸಿದರೂ ಮಿದುಳು ಸರಿಯಾದದ್ದನ್ನು ಗ್ರಹಿಸಲು ತೆಗೆದುಕೊಳ್ಳುವ ಸಮಯವೂ ಅಷ್ಟೆ.

ವಸ್ತುವನ್ನು ಗುರುತಿಸಿದ ನಂತರ ಅದನ್ನು ಶಾಬ್ದಿಕರೂಪಕ್ಕಿಳಿಸುವುದು ಮುಂದಿನ ಹಂತದ ಕೆಲಸ. ಒಂದು ಭಾಷೆಗೆ ಸಂಬಂಧಿಸಿದಂತೆ ಸಾವಿರಾರು ಧ್ವನಿಗಳನ್ನು, ಭಾಷೆಗೇ ವಿಶಿಷ್ಟವಾಗಿರುವ ಉಚ್ಚಾರಗಳನ್ನು ಮಿದುಳು ಸಾವಿರಾರು ಕೇಂದ್ರಗಳಲ್ಲಿ ಶೇಖರಿಸಿಟ್ಟುಕೊಂಡಿದೆ. ವೈಜ್ಞಾನಿಕ ಪರಿಭಾಷೆಯಲ್ಲಿ ಈ ಕೇಂದ್ರಗಳಿಗೆಲ್ಲ ಫಿನೋಮ್ ಕೇಂದ್ರಗಳೆಂದು ಹೆಸರು. ಈ ಎಲ್ಲ ಕೇಂದ್ರಗಳನ್ನೂ ಒಂದುಗೂಡಿಸುವ ವ್ಯವಸ್ಥೆಯೇ ಅಭಿಧಾನಜಾಲ. ವಸ್ತುವನ್ನು ಗುರುತಿಸಿದ ನಂತರ ಮಿದುಳು ಅದಕ್ಕೆ ಸರಿಹೊಂದುವ ಶಬ್ದಕ್ಕಾಗಿ ಈ ಫಿನೋಮ್ ಕೇಂದ್ರಗಳನ್ನು ತಡಕಾಡತೊಡಗುತ್ತದೆ. ಸರಿಯಾದ ಶಬ್ದವನ್ನು ಗ್ರಹಿಸಲು (ಉದಾಹ

ರಣೆಗೆ ಒಂಟಿ ಎನ್ನುವ ಪದಕ್ಕೆ 'ಒಂ' ಹಾಗೂ 'ಟಿ' ಎಂಬ ವಿಭಿನ್ನ ಫಿನೋಮ್ ಕೇಂದ್ರಗಳನ್ನು ಒಗ್ಗೂಡಿಸಲು) ಅದಕ್ಕೆ ಸೆಕೆಂಡಿನಲ್ಲಿ ಸಾವಿರದ ಒಂದು ಭಾಗದಷ್ಟು ಸಮಯವೂ ತಗಲುವುದಿಲ್ಲ. ಆದರೆ ಇದು ಹೇಳಿದಷ್ಟು ಸುಲಭದ ಕೆಲಸವಲ್ಲ. ಬರಿ ಶಾಬ್ದಿಕ ರೂಪಕ್ಕಿಳಿಸಿದರೆ ಕೆಲಸ ಮುಗಿಯ ಲಿಲ್ಲ. ವಿಚಾರಕ್ಕೆ ಅನುಗುಣವಾಗಿ ಆ ಶಬ್ದಗಳೆಲ್ಲ ಭಾಷೆಯ ಚೌಕಟ್ಟಿನಲ್ಲಿ ಬಂಧಿತವಾಗಿ ಅಭಿಧಾನ ಜಾಲದ ಮೂಲಕ ಹೊರಹೊಮ್ಮಬೇಕು. ಅಂದರೆ ಮಾತ್ರ ಮಿದುಳಿನಲ್ಲಿ ಮೂಡಿದ ಶಬ್ದ ಭಾಷೆಯ ಅಭಿವ್ಯಕ್ತಿಯನ್ನು ಪಡೆಯಲು ಸಾಧ್ಯ. ಆದರೆ ಕೆಲವು ಸಲ ಮಿದುಳಿಗೆ ಸರಿಯಾದ ಫಿನೋಮ್ ಕೇಂದ್ರ ಗಳನ್ನು ಗ್ರಹಿಸಲು ಆಗುವುದಿಲ್ಲ. ಈ ಸ್ಥಿತಿಯಿದ್ದಾ ಗಲೇ ನಮಗೆ 'ಬಾಯಿಗೆ ಬಂದ' ಅನುಭವವಾ ಗುವುದು. ಆಗ ಮಿದುಳು ಸರಿಯಾದದ್ದನ್ನು ಗ್ರಹಿ ಸಿರುತ್ತದೆ ನಿಜ. ಆದರೆ ಸರಿಯಾದ ಧ್ವನಿ ಸಂಕೇ ತಗಳನ್ನು ಅದಕ್ಕೆ ಒಗ್ಗೂಡಿಸಲು ಸಾಧ್ಯವಾಗುವುದಿಲ್ಲ ಅಷ್ಟೆ.

ಶಬ್ದ ಹೆಚ್ಚು ಹೆಚ್ಚು ಬಳಕೆಯಲ್ಲಿದಷ್ಟೂ ಮಿದು ಳಿಗೆ ಧ್ವನಿ ಸಂಕೇತಗಳನ್ನು ಒಗ್ಗೂಡಿಸಿಕೊಳ್ಳುವುದು ಸುಲಭ. ಹಾಗೆಯೆ, ಬಳಕೆ ವಿರಳವಾದಷ್ಟೂ ಈ ಕೆಲಸ ಕಠಿಣ. ಉದಾಹರಣೆಗೆ ಕುದುರೆಯ ಚಿತ್ರ ತೋರಿಸಿದಾಗ ಅದು ಕುದುರೆಯ ಚಿತ್ರವೆಂದು ತಟ್ಟನೆ ಹೇಳಿಬಿಡುತ್ತೀರಿ. ಆದರೆ ಬೇಕೆಂದೇ ಹಾದಿ ತಪ್ಪಿಸಲು ಕುದುರೆಯ ಚಿತ್ರ ತೋರಿಸುತ್ತೇನೆಂದು ಹೇಳಿ, ಕುರಿಯ ಚಿತ್ರವನ್ನು ತೋರಿಸಿದರೆ ಅದು ಕುರಿಯ ಚಿತ್ರವಲ್ಲ, ಎನ್ನುವುದನ್ನು ಗ್ರಹಿಸಲು ಕುದುರೆಯ ಚಿತ್ರವನ್ನು ಗ್ರಹಿಸುವುದಕ್ಕಿಂತ ಸೆಕಂ ಡಿನ ಲಕ್ಷ ಭಾಗದಲ್ಲಿ ಎರಡು ಭಾಗದಷ್ಟು ಹೆಚ್ಚು ಸಮಯವನ್ನು ಮಿದುಳು ತೆಗೆದುಕೊಳ್ಳುತ್ತದೆ.

ವಯಸ್ಸಾದಂತೆ ಸ್ಮರಣಶಕ್ತಿ ಕ್ಷೀಣಿಸುವುದೇಕೆ? ನ್ಯೂರಾಣುಗಳ ಸಂಖ್ಯೆ ಕುಗ್ಗಿದ್ದರೂ ವಾಸ್ತವವಾಗಿ ಸಂವಹನದ ವೇಗ ಕುಗ್ಗಿರುವುದಿಲ್ಲ. ಆದರೆ ನ್ಯೂರಾ ಣುಗಳ ಮಧ್ಯದ ಸಂಪರ್ಕಜಾಲಗಳ ಸಂಖ್ಯೆ ಕಡಿಮೆಯಾಗಿರುವುದರಿಂದ ಯಾವುದಾದ ರೊಂದು ವಿಷಯ ಸ್ಮರಣೆಗೆ ಬರಲು ತಡವಾಗು ತ್ತದೆ ಎಂದು ವಿಜ್ಞಾನಿಗಳು ಹೇಳುತ್ತಾರೆ.

ಅದಕ್ಕವರು ಒಂದು ಸ್ವಾರಸ್ಯಕರವಾದ ಉದಾ ಹರಣೆಯನ್ನೂ ಕೊಡುತ್ತಾರೆ. ಒಬ್ಬಾತನಿಗೆ ಪನ್ನಂ ಬರವೆಂಬ ಶಬ್ದ ಬೇಕಾಗಿದೆ ಎನ್ನಿ. ಅದು ತಿಮಿಂ ಗಿಲದಿಂದ ಬರುವ ಸುಗಂಧದ್ರವ್ಯವೆಂಬುದು ಆವ ನಿಗೆ ಗೊತ್ತು. ಆದರೆ ಶಬ್ದ ಮಾತ್ರ ನೆನಪಾಗುತ್ತಿಲ್ಲ. ಪನ್ನಂಬರಕ್ಕೂ ಅಂಬರಕ್ಕೂ ಸಂಬಂಧವಿಲ್ಲ ನಿಜ, ಆದರೆ ಆತ ಆ ಶಬ್ದವನ್ನು ನೆನಪಿಸಿಕೊಳ್ಳಲು ಪ್ರಯತ್ನಿಸುತ್ತಿರುವಾಗ ಬಹುಶಃ ಉಚ್ಚಾರಸಾಮ್ಯ ದಿಂದಲೋ ಏನೋ- ಅಂಬರವೆಂಬ ಶಬ್ದ ತಲೆಯಲ್ಲಿ ನಿನದಿಸತೊಡಗುತ್ತದೆ. ಕೆಲ ಸಮಯದ ನಂತರ ಪನ್ನಂಬರವೆಂಬ ಶಬ್ದ ಜಾಗೃತ ಪ್ರಜ್ಞೆಯ ಮೇಲೆ ಮೂಡಿ ಬರುತ್ತದೆ. ಶಾಬ್ದಿಕ ಜಾಲವನ್ನೆಲ್ಲ ತಡಕಾಡಿ ಅಂಬರವನ್ನು ಪನ್ನಂಬರವನ್ನಾಗಿಸಿಕೊ ಳ್ಳಲು ಮಿದುಳಿಗೆ ಅಷ್ಟು ಸಮಯ ಹಿಡಿದಿರುತ್ತದೆ.

ವಿಚಾರ ಶಾಬ್ದಿಕರೂಪದಲ್ಲಿ ಅಭಿವ್ಯಕ್ತಿಗೊಳ್ಳು ವಾಗ ಮಿದುಳಿನಲ್ಲಿ ಯಾವ ಯಾವ ಪ್ರಕ್ರಿಯೆಗಳು ನಡೆಯುತ್ತವೆ ಎನ್ನುವುದನ್ನು ನಿಖರವಾಗಿ ಪರಿಶೀ ಲಿಸಲು ಇದೇ ತಿಂಗಳು ಫಿನ್‌ಲಂಡಿನಲ್ಲಿ ವಿಜ್ಞಾ ನಿಗಳು ಕೆಲವು ಸಂಕೀರ್ಣವಾದ ಪ್ರಯೋಗಗಳನ್ನು ಕೈಗೊಳ್ಳಲಿದ್ದಾರೆ. ಅದರಿಂದಾಗಿ ಹಲವಾರು ಹೊಸ ವಿಷಯಗಳು ಹೊರಬೀಳಲೂಬಹುದು.

ವಿಕಾಸ ಪಥದಲ್ಲಿ ನಡೆಯುವಾಗ ಮಾನವನ ಮಿದುಳಿನಲ್ಲಿ ವಸ್ತುತಃ ವೈಚಾರಿಕ ಹಾಗೂ ಶಾಬ್ದಿಕ ವ್ಯವಸ್ಥೆಗಳು ಬೇರೆಯಾಗಿಯೆ ಅಭಿವೃದ್ಧಿಗೊಂಡವು. ಮುಂದೆ ಒಂದು ಹಂತದಲ್ಲಿ ಅವೆರಡೂ ಒಂದು ಗೂಡಿದಾಗ ಅದು ಭಾಷೆಯ ಉಗಮಕ್ಕೆ ಕಾರಣ ವಾಯಿತು ಎಂದು ಮಾನವಶಾಸ್ತ್ರಿಗಳು ಹೇಳು ತ್ತಾರೆ. ಫಿನ್‌ಲಂಡಿನ ಹೆಲ್‌ಸಿಂಕಿಯಲ್ಲಿ ನಡೆಯಲಿ ರುವ ಪ್ರಯೋಗಗಳು ಈ ವಾದದ ಸತ್ಯಾಸತ್ಯತೆ ಯನ್ನಲ್ಲದೆ ಮರೆಗುಳಿತನದ ಕಾರಣಗಳನ್ನೂ ಕಂಡು ಹಿಡಿಯಲಿವೆ. ಆದರೆ ಮರೆಗುಳಿತನಕ್ಕೆ ಮದ್ದನ್ನು ಕಂಡುಹಿಡಿಯುವಲ್ಲಿ ಮಾತ್ರ ವಿಜ್ಞಾನ ಇನ್ನೂ ಕ್ರಮಿಸಬೇಕಾದ ದಾರಿ ಬಹುದೂರ. ●



## ಮಜಾಶೀರ ಮಜಕೂರು

# ಹನ್ನೊಂದು ವರ್ಷಕ್ಕೆ ಅಜ್ಜಿಯಾದಳು!

● 'ಎಂ.ಆರ್.ಎಸ್.ರಾವ್'

ಮೆಕ್ಸಿಕೋದ ಆ ಹುಡುಗಿ ಐದೇ ವರ್ಷಕ್ಕೆ ತಾಯಿಯಾದಳೆಂದರೆ ನಂಬುತ್ತೀರಾ?

ನಂಬಿದರೆ ನಂಬಿ, ಬಿಟ್ಟರೆ ಬಿಡಿ, ಆಕೆ ಅಷ್ಟು ಚಿಕ್ಕ ವಯಸ್ಸಿನಲ್ಲೆ ತಾಯಿಯಾದದ್ದು ಮಾತ್ರ ಸುಳ್ಳಲ್ಲ.

ರೋಜಾಲಿತಾಳ ಜೀವನ ಶುರುವಾದದ್ದೇ ಕಷ್ಟಗಳ ಪರಂಪರೆಯಿಂದ. ಆಕೆಯ ತಂದೆಯು ತಾಯಿಯನ್ನು ತೊರೆದು ಎಲ್ಲಿಗೋ ಹೊರಟು ಹೋಗಿದ್ದ. ತಾಯಿಯಾದರೂ ಮಗಳನ್ನು ಸರಿಯಾಗಿ ನೋಡಿಕೊಂಡಳೆ? ಅದೂ ಇಲ್ಲ. ರೋಜಾಲಿತಾಳನ್ನು ಹೆತ್ತ ಕೆಲ ದಿನಗಳಲ್ಲೆ ಆಕೆ ಮಗುವನ್ನು ಅದರ ಪಾಲಿಗೆ ಬಿಟ್ಟು ತನ್ನ 'ಹಾದಿ'ಯನ್ನು ತಾನು ಕಂಡುಕೊಂಡಳು. ರೋಜಾಲಿತಾಳಿಗೆ ತಂದೆ ತಾಯಿಗಳಿದ್ದೂ ಇಲ್ಲದ ಸ್ಥಿತಿ. ಅನಾಥಾಲಯದಲ್ಲಿ ಆಶ್ರಯ ಪಡೆಯದೆ ಬೇರೆ ಮಾರ್ಗವೇ ಇರಲಿಲ್ಲ, ಅಲ್ಲಿನ ಪರಿಸ್ಥಿತಿಯೂ ಸರಿಯಾಗಿರಲಿಲ್ಲವಾದ್ದರಿಂದ ಮೇಲಿಂದ ಮೇಲೆ ಅನಾಥಾಲಯವನ್ನು ಬದಲಿಸಬೇಕಾಗುತ್ತಿತ್ತು. ಇಂಥಾ ವಿಕಟ ಪರಿಸ್ಥಿತಿಯಲ್ಲೆ ಆಕೆ ತಾಯಿಯಾದದ್ದು.

ಬಾಲಸಹಜ ಸ್ವಭಾವದಂತೆ ರೊಜಾಲಿತಾ ಕೂಡ ಇತರ ಹುಡುಗರೊಡನೆ ಆಡುತ್ತಿದ್ದಳು. ಅವರ ಪೈಕಿ ಹದಿಮೂರು ವರ್ಷದ ಬಾಲಕನೂ ಒಬ್ಬ. ಆಕೆಯ ಶಬ್ದಗಳಲ್ಲೆ ಹೇಳುವುದಾದರೆ, "ನಾವಿಬ್ಬರೂ ಬೇರೆ ಬೇರೆ ಆಟಗಳನ್ನು ಆಡುತ್ತಿದ್ದೆವು. ಅವುಗಳಲ್ಲಿ ಅಪ್ಪ-ಅಮ್ಮನ ಆಟವೂ ಒಂದು. ನಾನು ನಿಜವಾಗಿಯೂ ಅಮ್ಮನಾದಾಗ ಆತ ಎಲ್ಲಿಗೋ ಓಡಿಹೋದ. ಹೋದವ ಮತ್ತೆ ಬರಲಿಲ್ಲ."

"ಐದು ವರ್ಷದ ಮುಗ್ಧ ಬಾಲೆ ಗರ್ಭವತಿಯಾಗುತ್ತಾಳೆಂಬುದನ್ನು ಕಲ್ಪಿಸಲು ಕೂಡ ಸಾಧ್ಯವೇ? ಹೀಗಾಗಿ ಈ ಸುದ್ದಿ ತಿಳಿದಾಗ ಆಕೆಯ ಪರಿಚಯದವರೆಲ್ಲರಿಗೆ ಆಘಾತವೇ ಆಯಿತು. ನಾವು ಡಾಕ್ಟರರು ಕೂಡ ಸುಲಭವಾಗಿ ನಂಬುವಂತಹ ಸಂಗತಿಯಲ್ಲ ಇದು. ಆದರೆ ಸಂಭವಿಸಿದ ಮೇಲೆ ನಂಬಲೇಬೇಕಾಯಿತು," ಎಂದು ಆಕೆಯನ್ನು ಉಪಚರಿಸಿದ ಡಾ. ರಾಮೊನ್ ಇನೆಲ್ಲೋ ಹೇಳುತ್ತಾರೆ.

ಅವರಿಬ್ಬರನ್ನೂ ನೋಡಿಕೊಳ್ಳಲು ದಂಪತಿಗಳೊಬ್ಬರು ಮುಂದೆ ಬಂದದ್ದರಿಂದ ಅನಾಥಾಲಯದ ಅಧಿಕಾರಿಗಳು ತಾಯಿ-ಮಗಳಿಬ್ಬರನ್ನೂ ಅವರ ಮಡಿಲಿಗೆ ಹಾಕಿ ಸಮಾಧಾನದ ನಿಟ್ಟುಸಿರು ಬಿಟ್ಟರು.

ತಾಯಿ-ಮಗಳಿಬ್ಬರೂ ಶಾಲೆಗೆ ಹೋಗತೊಡಗಿದರು. ಇಬ್ಬರೂ ಸೇರಿ ಆಡುವರು, ಓದುವರು; ಜಗಳಾಡುವರು, ಜಗಳಾಡಿದ ಮರುಕ್ಷಣದಲ್ಲೆ ಒಂದುಗೂಡುವರು. ಇವರು ಗೆಳತಿಯರಲ್ಲ-ತಾಯಿ-ಮಗಳು ಎಂದು ಯಾರಾದರೂ ಹೇಳಿದರೆ ಅಪರಿಚಿತರಿಗೆ ನಂಬುವುದೇ ಕಷ್ಟವಾಗುತ್ತಿತ್ತು.

ಈಗ ಕೆಲ ವರ್ಷಗಳ ಹಿಂದಿನ ಮಾತು. ರೋಜಾಲಿತಾ ಐದನೆಯ ವರ್ಗದಲ್ಲಿ ಓದುತ್ತಿದ್ದರೆ ಫ್ರಾನ್ಸಿಸ್ಕಾ ಕಿಂಡರ್‌ಗಾರ್ಟನ್ನಿನಲ್ಲಿ. ಪಾಠ ನಡೆಯುತ್ತಿದ್ದಾಗಲೇ ಆಕೆ ಗಂಡುಮಗುವಿಗೆ ಜನ್ಮವಿತ್ತಳು. ಕೂಡಲೇ ಶಾಲೆಯ ಪ್ರಿನ್ಸಿಪಾಲ್ ರೋಜಾಲಿತಾಳನ್ನು ಕರೆದು ಈ ಸುದ್ದಿಯನ್ನು ತಿಳಿಸಿದರು. ಆದರೆ ಪಾಪ, ಸುಮ್ಮನೆ ಬೆರಗುಗಣ್ಣುಗಳಿಂದ ನವಜಾತ ಶಿಶುವನ್ನು ನೋಡುವುದನ್ನು ಹೊರತುಪಡಿಸಿ ಆಕೆ ಯಾದರೂ ಏನು ಮಾಡಬಹುದಾಗಿತ್ತು? ಸ್ವಾಭಾವಿಕವಾಗಿಯೆ ಆ ದಿನ ಇಡಿ ಶಾಲೆಯಲ್ಲಿ ಈ

ಕುರಿತು ಕೋಲಾಹಲವೋ ಕೋಲಾಹಲ.

ವಿಚಿತ್ರವೆಂದರೆ ಬರಿ ಮೂರು ಪೌಂಡುಗಳಷ್ಟು ತೂಗುತ್ತಿದ್ದರೂ ಆ ಮಗು ಆರೋಗ್ಯಕರವಾಗಿಯೇ ಇತ್ತು. ಹಿರಿಯರು ಈ ಸಲ ಬಹಳ ಯೋಚಿಸಿ ಫ್ರಾನ್ಸೆಸ್ಕಾಳನ್ನೂ ಅವಳ ಮಗುವನ್ನೂ ಬೇರ್ಪಡಿಸಿ, ಬೇರೆ ಊರಿನಲ್ಲಿಟ್ಟು ಅದರ ಪಾಲನೆ ಪೋಷಣೆಗೆ ಪ್ರತ್ಯೇಕ ವ್ಯವಸ್ಥೆಯನ್ನು ಮಾಡಿದರು.

ಇತ್ತ ಹಿರಿಯರು ಎಷ್ಟು ಪ್ರಯತ್ನಿಸಿದರೂ ಆ ಮಗುವಿನ ತಂದೆ ಯಾರೆಂಬುದು ತಿಳಿಯಲೇ ಇಲ್ಲ. ಅವಳ ಪರಿಚಯ ಸಾಕಷ್ಟಿದ್ದ ಸಮಾಜಸೇವಕರೊಬ್ಬರ ಪ್ರಕಾರ, ತಂದೆ ಯಾರೆಂಬುದು ಒತ್ತಟ್ಟಿಗಿರಲಿ, ಯಾವ ಕಾರಣದಿಂದ ತಾನು ತಾಯಿಯಾದಳೆಂಬುದನ್ನು ಕೂಡ ತಿಳಿದುಕೊಳ್ಳದಷ್ಟು ಫ್ರಾನ್ಸೆಸ್ಕಾ ಮುಗ್ಧಳಾಗಿದ್ದಳು. ●

# ಮನೆ ಮಂದಿಯೆಲ್ಲಾ ಖಲ್ವಾಟರು!

ಪಾಕಿಸ್ತಾನದ ಗುಜರಾವಾಲಾ ನಗರದ ಧೋಬೀಘಾಟಿನಲ್ಲೊಂದು ಖಲ್ವಾಟ ಕುಟುಂಬ. ಆ ಕುರಿತೇ ನಾನೀಗ ಹೇಳುತ್ತಿರುವುದು. ಅದೇನು ಮಹಾ! ನಮ್ಮ ಊರಿನಲ್ಲೂ ಸಾಕಷ್ಟು ಜನ ಖಲ್ವಾಟರಿದ್ದಾರೆ. ಮನೆಯಲ್ಲಿ ಅಣ್ಣ, ತಮ್ಮ ತಂದೆ, ತಾತ ಹೀಗೆ ಎಲ್ಲ ಗಂಡಸರೂ ಖಲ್ವಾಟರಾಗಿರುವ ಕುಟುಂಬಗಳು ನಮ್ಮಲ್ಲೂ ಇವೆ ಎಂದು ನೀವನ್ನಬಹುದು. ನಿಮ್ಮ ಮಾತು ಒಂದು ಮಿತಿಯ ಮಟ್ಟಿಗೆ ಮಾತ್ರ ಸರಿ. ನಾನು ಹೇಳಲಿರುವ ಕುಟುಂಬದ ವೃತ್ತಾಂತ ಬೇರೆಯೆ ತೆರನಾದದ್ದು. ಅದರ ಬಗೆಗಿನ ಸ್ವಾರಸ್ಯವನ್ನು ಆ ಮನೆತನದ ಮುಖ್ಯಸ್ಥನಾದ ಮೊಹಮ್ಮದ್ ಇಕ್ಬಾಲನ ಮಾತುಗಳಲ್ಲೇ ಕೇಳಿ:

"ಬರಿ ಈಗಿನಿಂದಲ್ಲ, ತಲೆತಲಾಂತರದಿಂದಲೂ ನಮ್ಮ ಮನೆತನದವರೆಲ್ಲ ಖಲ್ವಾಟರೆ. ಅಂದಾಕ್ಷಣ ಹುಟ್ಟಿನಿಂದಲೆ ಅವರು ಬೋಳು ತಲೆಯವರಾಗಿರುತ್ತಾರೆ ಎಂದೇನಿಲ್ಲ. ಹೊಸದಾಗಿ ಜನಿಸಿದ ಶಿಶುಗಳಿಗೆ ಉಳಿದ ಶಿಶುಗಳಿಗೆ ಇರುವ ಹಾಗೆಯೆ ಕೂದಲುಗಳಿರುತ್ತವೆ. ಉಳಿದ ಮಕ್ಕಳ ಕೂದಲು ಉದುರುವ ಹಾಗೂ ಹೊಸದಾಗಿ ಹುಟ್ಟಿಕೊಳ್ಳುವ ಪ್ರಕ್ರಿಯೆ ನಿರಂತರವಾಗಿ ನಡೆದಿದ್ದರೆ ನಮ್ಮ ಮಕ್ಕಳ ಕೂದಲು ಉದುರುವ ಪ್ರಕ್ರಿಯೆ ಮಾತ್ರ ನಿರಂತರವಾಗಿ ನಡೆದಿರುತ್ತದೆ- ಹೊಸದಾಗಿ ಕೂದಲು ಹುಟ್ಟಿಕೊಳ್ಳುವುದೇ ಇಲ್ಲ. ಹೀಗಾಗಿ ಅವಕ್ಕೆ ಎರಡು ಮೂರು ವರ್ಷಗಳಾಗುವ ಹೊತ್ತಿಗೆ ತಲೆಯ ಮೇಲಷ್ಟೆ ಅಲ್ಲ, ಮೈಮೇಲೆ ಸಹ ಒಂದು ಕೂದಲೂ ಉಳಿದಿರುವುದಿಲ್ಲ. ನಾವೆಲ್ಲ ನುಣುಪು ಮೈಯವರಾದದ್ದು ಈ ರೀತಿಯಾಗಿಯೆ.

"ನಾನು ಸೋದರಿಯ ಮಗಳನ್ನೇ ಲಗ್ನವಾಗಿದ್ದೇನೆ. ಅವಳ ಮೈಮೇಲೂ ಕೂದಲುಗಳಿಲ್ಲ. ಎರಡು ಗಂಡು ಹಾಗೂ ಒಂದು ಹೆಣ್ಣು ಹೀಗೆ ನನಗೆ ಮೂವರು ಮಕ್ಕಳು. ಅವರಿಗೂ ನನ್ನ ಹಾಗೆ ಕೂದಲುಗಳಿಲ್ಲ. ಮಗಳ ತಲೆಯ ಮೇಲಾದರೂ ಒಂದಿಷ್ಟು ಕೂದಲು ಇದ್ದರೆ ಎಷ್ಟು ಚೆನ್ನಾಗಿರುತ್ತಿತ್ತು! ಎಂಬ ವಿಚಾರ ಒಮ್ಮೊಮ್ಮೆ ಬಾರದಿರುವುದಿಲ್ಲ. ಆದರೆ ಈ ವಿಚಾರ ಬಂದ ಮರುಕ್ಷಣವೇ, ಈ ದೋಷದ ಬದಲು ಮತ್ತಾವುದಾದರೂ ಭಯಂಕರ ವ್ಯಾಧಿಯನ್ನು ಹೊತ್ತುಕೊಂಡೇ ಮಗು ಹುಟ್ಟಿದ್ದರೆ ಏನು ಮಾಡುವುದಿತ್ತು? ಎಂಬ ವಿಚಾರವೂ ಸುಳಿಯದೇ ಇರುವುದಿಲ್ಲ. ದೇವರು ದೊಡ್ಡವ. ಇದೊಂದನ್ನು ಹೊರತುಪಡಿಸಿದರೆ ಬೇರಾವ ದೋಷವೂ ನನ್ನ ಮಕ್ಕಳಿಗಿಲ್ಲ. ಉಳಿದ ಅನೇಕ ಅನುವಂಶಿಕ ರೋಗಗಳನ್ನು ನೋಡಿದರೆ ಈಗಿರುವ ದೋಷವೇ ಎಷ್ಟೋ ವಾಸಿ.

"ಈ ಖಲ್ವಾಟತ್ವವನ್ನು ದೂರಗೊಳಿಸಿಕೊಳ್ಳಬೇಕೆಂಬ ಉದ್ದೇಶದಿಂದ ಅನೇಕ ಡಾಕ್ಟರರನ್ನು ಸಂಪರ್ಕಿಸಿದ್ದೇನೆ. ಆದರೆ ಅದಕ್ಕೆ ಚಿಕಿತ್ಸೆಯಿದ್ದಹಾಗೆ ಕಾಣುವುದಿಲ್ಲ. ನನ್ನ ತಮ್ಮ ಅಬೀದ್ ಹುಸೇನ್ ಉದ್ದ ಕೂದಲಿನವಳನ್ನೇ ಮದುವೆಯಾಗಿದ್ದಾನೆ. ಹೀಗಾಗಿ ಅವನ ಮಕ್ಕಳಾರೂ ಖಲ್ವಾಟರಾಗಿಲ್ಲ. ಆ ಮಕ್ಕಳೂ ಉದ್ದ ಕೂದಲಿನವರನ್ನೇ ಮದುವೆಯಾದರೆ ಮುಂದೆ ಒಂದಿಲ್ಲ ಒಂದು ದಿನ ನಮ್ಮ ಮನೆತನಕ್ಕೆ ಅಂಟಿದ ಈ ಅಭಿಶಾಪ ಕೊನೆಗೊಳ್ಳಬಹುದು...." ●

# ಮರಣದ ಮರ್ಮ

ಸಾಮಾನ್ಯವಾಗಿ ಜನ ಮರಣವೆಂದರೆ ಮುದುಡಿಕೊಳ್ಳುತ್ತಾರೆ. ಅವರಿಗೆ ಮರಣದ ನೆನಹು ಕೂಡ ಭಯದ ಕಾರಣ. ಶರಣರಿಗೆ, ಸಂತರಿಗೆ ಹಾಗಲ್ಲ; ಅದು ಮಹಾನವಮಿಗೆ ಸಮಾನ, ಸಂತಸದ ಸಮಯ. ಕಠೋಪನಿಷತ್ತಿನ ಕಥಾನಾಯಕ ಬಾಲಕ ನಚಿಕೇತ ಈ ಮಾತಿಗೆ ನಿದರ್ಶನ. ಆತನ ತಂದೆ ವಾಜಶ್ರವಸ ಕಡುಜಿಪುಣ. ಕೈಕೊಂಡ ಯಾಗದ ಅಂಗವಾಗಿ ತನ್ನ ಬಳಿಯಲ್ಲಿದ್ದ ಬಡಕಲು ಶರೀರದ ಬರಡಾದ ಹಸುಗಳನ್ನು ದಾನವೀಯಲು ಮುಂದಾದ. ತಂದೆಯ ಈ "ಉದಾರ" ಕ್ರಮ ಎಂಟರ ಎಳವೆಯ ನಚಿಕೇತನಿಗೆ, ಎಳ್ಳಿನಿತೂ ಸರಿದೋರಲಿಲ್ಲ. ನೇರವಾಗಿ ಕೇಳಿಯೇಬಿಟ್ಟ, "ನನ್ನನ್ನು ಅದಾರಿಗೆ ದಾನವೆಂದು ಕೊಡುವಿ, ಅಪ್ಪಾ?" ಎಂದು. ತಂದೆ ಕಿಡಿಕಿಡಿಯಾದ, ಎತ್ತರ ಸ್ವರದಲ್ಲಿ ಮೂರು ಬಾರಿ ಗದ್ದರಿಸಿದ; "ಮೃತ್ಯುವೇ ತ್ವಾಂ ದದಾಮಿ" (ಮೃತ್ಯುವಿಗೆ ನಿನ್ನನ್ನು ಕೊಡುವೆ) ಎಂದು. ಸಾಮಾನ್ಯರು ಮೃತ್ಯುವೆಂದರೆ ಗಡಗಡ ನಡುಗುವರು. ಆದರೆ ನಚಿಕೇತ ಇದೊಂದು ತನಗೆ ದೊರೆತ ಅಪರೂಪದ ಅವಕಾಶವೆಂದು ಬಗೆದ. ಮರಣೋತ್ತರ ಜೀವನದ ರಹಸ್ಯವನ್ನು ಅರಿತುಕೊಳ್ಳಲು ಇದು ಪ್ರಯೋಜನಕಾರಿ ಎಂದುಕೊಂಡ.

ಸಾಮಾನ್ಯರ ಅನುಭವ ನಚಿಕೇತನಂತಹದಲ್ಲ. ಸಾವೆಂದರೆ ಎದೆ ಡವ ಡವ, ಹೊಟ್ಟೆಯಲ್ಲಿ ನಡುಕ, ಕೈ ಕಾಲು ಉಡುಗಿ ಹೋದ ಅನುಭವ. ಪೆಡಂಭೂತವೇ ಬೆಂಬತ್ತಿದೆಯೋ ಎನ್ನುವಂತಹ ಅತೀವ ಭೀತಿ. ಆಗಿನ ಸಂಕಟ ಶಬ್ದಗಳ ಚೌಕಟ್ಟಿಗೆ ನಿಲುಕದಂಥದ್ದು. ದುಃಖದ ಮೋಡ ಮುಸುಕುತ್ತದೆ. ಕಂಬನಿ ಧಾರಾಕಾರವಾಗಿ ಸುರಿಯುತ್ತದೆ. ಪತ್ರಿಕೆಯಂತಹ ಅಚೇತನಕ್ಕೂ 'ಎಲ್ಲಿಲ್ಲದ ವಿಷಾದ.' ಹಣೆಗೆ ಕಪ್ಪು ಪಟ್ಟಿಯನ್ನು ಹಚ್ಚಿಕೊಂಡೇ ಸುದ್ದಿಯ ಪ್ರಕಟಣೆ: 'ಇಂತಹ ಊರಿನ, ಇಂತಿಷ್ಟು ವಯಸ್ಸಿನ, ಇಂತಹ ಹೆಸರಿನ ವ್ಯಕ್ತಿ, ನಿಧನರಾದರೆಂದು ತಿಳಿಸಲು ವಿಷಾದವಾಗುತ್ತದೆ. ಅಂಚೆಯ ಪತ್ರಕ್ಕೂ ಒಂದು ಬಗೆಯ ತಲೆಶೂಲೆಯೇ. ಎರಡೇ ಸಾಲು ಮಾತ್ರ ಬರೆದುಕೊಂಡು ಕೈ ಸೇರುತ್ತದೆ. ತಂತಿಗೂ ಒಂದು ಬಗೆಯ ಬೇಗುದಿ. ಬೇಗನೆ ಕೈ ಸೇರಿ ಕಣ್ಣೀರು ಸುರಿಸುವಂತೆ ಮಾಡಿ, ತನ್ನ ಕೈ ತೊಳೆದುಕೊಳ್ಳುತ್ತದೆ. ಆಕಾಶವಾಣಿಗೂ ಕಸಿವಿಸಿ. ಭರಾಟೆಯಿಂದ ವಾರ್ತೆಯನ್ನು ಓದುತ್ತಿದ್ದವರ ಸ್ವರ ಹಠಾತ್ತನೆ ಕುಗ್ಗಿಹೋಗುತ್ತದೆ. ತೀರಿಹೋದ ವ್ಯಕ್ತಿ ರಾಷ್ಟ್ರೀಯ ಧುರೀಣರಾಗಿದ್ದರಂತೂ ತೀರಿಯೇ ಹೋಯಿತು. ತಾಳಬದ್ಧ ಸಂಗೀತವನ್ನು "ಬೇ-ತಾಳ"ವಾಗಿಸಿ ಶೋಕ ಸೂಚಕ ಸ್ವರಗಳ ಅಲೆಗಳನ್ನು ವಾರವಿಡೀ ಕೇಳಿಸುತ್ತದೆ. ದೂರದರ್ಶನಕ್ಕೂ ಈ ಶೋಕದ ಶಾಖ ಸೋಂಕದೇ ಇಲ್ಲ. ಮರಣ ನಿರ್ಮಿಸುವ ದಾರುಣ ವಾತಾವರಣವೇ ಇಂಥದು.

ನಿಧನ ಹೊಂದಿದ ವ್ಯಕ್ತಿ ಬಾಳ ಪಯಣವನ್ನು ಅರ್ಧಕ್ಕೆ ಮುಗಿಸಿದವನಾಗಿದ್ದರೆ, ಉಂಟಾಗುವ ಕಳವಳ ಹೇಳತೀರದು. ಕುಟುಂಬಭರಣದ ಭಾರವನ್ನು ಇನ್ನೂ ಹೊರಬೇಕಾದವನು ತಾನೇ ನಾಲ್ವರ ಹೆಗಲಿಗೆ ಭಾರವಾಗು

ತ್ತಾನೆಂದರೆ, ಅಂತಹ ದುರಂತ ಬೇರೊಂದಿರದು. "ಕೊಡವಾಲಿ ಕೆಡಿಸುವೊಡೆ ಆಮ್ಲವೆಸಿತಾಗಬೇಕು?" ಎಂಬ ರಾಘವಾಂಕ ಪ್ರಶ್ನಿಸುವಂತೆ ಬದುಕಿನ ನೆಮ್ಮದಿಯ ಕೊಡಹಾಲಿನಲ್ಲಿ ಹುಳಿ ಹಿಂಡುವ ಮೃತ್ಯುವಿನ ಕೃತ್ಯ ನಿಜಕ್ಕೂ ಕರುಣಾರಹಿತವೇ ಸರಿ!

ಜನುಮಕ್ಕೆ ಬಂದವನು ಸಾಯಲೇಬೇಕು. ಬಾಳೆಂಬ ಕೋಲಿಗೆ ಹುಟ್ಟು ಎಂಬುದು ಒಂದು ತುದಿಯಾದರೆ, ಸಾವು ಇನ್ನೊಂದು ತುದಿ. ಜನುಮ ಒಂದೇ ಇರಲಿ, ಸಾವು ಬರದಿರಲಿ ಎನ್ನುವಂತಿಲ್ಲ. ಮರಣ ಹತ್ತಿರ ಸುಳಿಯದಂತೆ ಏನೆಲ್ಲ ಎಚ್ಚರ ವಹಿಸುವ ವಿಶಿಷ್ಟ ವರವನ್ನು ಪಡೆದರೂ ಹಿರಣ್ಯಕಶ್ಯಪು ಮೃತ್ಯುವಶನಾದ. ಸರ್ಪದಂಶದಿಂದ ಬರಲಿರುವ ಸಾವನ್ನು ನಿವಾರಿಸಲು ಹೂಡಿದ ಎಲ್ಲ ಉಪಾಯಗಳೂ ವಿಫಲವಾಗಿ ಪರೀಕ್ಷಿತ ಅಸುನೀಗಿದ. ಮೃತ್ಯುಂಜಯನನ್ನೇ ಆರಾಧಿಸಿ ಆತ್ಮಲಿಂಗವನ್ನು ಪಡೆದುಕೊಂಡ ರಾವಣನಿಗೆ ಮೃತ್ಯುವನ್ನು ಜಯಿಸಲಾಗಲಿಲ್ಲ. ಹೀಗಿರುವಾಗ ಸಾಮಾನ್ಯರ ಪಾಡೇನು?

"ಜಾತಸ್ಯ ಹಿ ಧ್ರುವೋ ಮೃತ್ಯುಃ" ಎಂಬ ಗೀತೋಕ್ತಿಯಂತೆ ಸಾವು ಯಾರಿಗೂ ತಪ್ಪಿದುದಲ್ಲ, ಎಂದಾದ ಮೇಲೆ ಅದು ಒದಗುವುದು ಯಾವುದಕ್ಕೆ? – ವ್ಯಕ್ತಿಯ ಹೆಸರಿಗೋ, ಇಂದ್ರಿಯಕ್ಕೋ ಅಂಗಾಂಗಗಳಿಗೋ ಶರೀರಕ್ಕೋ ಅಥವಾ ಜೀವಕ್ಕೋ?

ವ್ಯಕ್ತಿ ಮೃತನಾದನೆಂದರೆ ಆತನ ಹೆಸರನ್ನು ರೇಶನ್ ಕಾರ್ಡಿನಿಂದ, ಮತದಾರರ ಯಾದಿಯಿಂದ, ಕಚೇರಿಯ ಹಾಜರಿಪುಸ್ತಕದಿಂದ, ಬ್ಯಾಂಕ್ ಪಾಸ್‌ಬುಕ್‌ನಿಂದ ಹೀಗೆ ಎಲ್ಲೆಲ್ಲೂ ತೆಗೆದು ಹಾಕಲಾಗುತ್ತದೆ. ಆದರೆ ಹೆಸರಿಗೆ ಸಾವುಂಟು ಎನ್ನಲಾಗದು. ಬದುಕಿರುವಾಗಲೇ ದತ್ತು ಹೋದಾಗ, ಸೊಸೆಯಾಗಿ ಹೊಸದಾಗಿ ಅತ್ತೆಮನೆ ಸೇರಿದಾಗ, ಅಪರಾಧಿ ತಲೆಮರೆಸಿಕೊಂಡಾಗ, ಲೇಖಕ ಕಾವ್ಯನಾಮ ಆರಿಸಿಕೊಂಡಾಗ, ಹಿರಿಯರಿಟ್ಟ ಹಳೆಯ ಹೆಸರು ರುಚಿಸದೆ ಬೇರೊಂದನ್ನು ಆಯ್ದುಕೊಂಡಾಗ, ಇತ್ಯಾದಿ ಇತ್ಯಾದಿ ಈ ರೀತಿ ಹಳೆಯ ಹೆಸರಿಗೆ ತಿಲಾಂಜಲಿ ಇತ್ತರೂ ವ್ಯಕ್ತಿಗೆ ಸಾವು ಒದಗುವುದಿಲ್ಲ. ಎಂದಮೇಲೆ ಸಾವು ಬರುವುದು ಹೆಸರಿಗಲ್ಲ ಎಂದಂತಾಯಿತು. ಅಷ್ಟೇ ಏಕೆ, ಸತ್ತ ಮೇಲೆ ಸತ್ತವರ ಹೆಸರಿಗೆ ಒಮ್ಮೊಮ್ಮೆ ಹೆಚ್ಚಿನ ಮಹತ್ವ ಬರುವುದೂ ಉಂಟು. ನಗರದ ಬೀದಿಗೋ-ವರ್ತುಲಕ್ಕೋ-ಬಡಾವಣೆಗೋ-ವಿದ್ಯಾಸಂಸ್ಥೆಗೋ-ಸಭಾಭವನಕ್ಕೋ-ರಂಗಮಂದಿರಕ್ಕೋ ಸತ್ತವರ ಹೆಸರುಗಳನ್ನು ಇಡುವುದು ಈಚೆಗಿನ ಚಪಲ. ಒಮ್ಮೊಮ್ಮೆ ಇದಕ್ಕಾಗಿ ಹೋರಾಟ, ಹೊಡೆದಾಟ ಕೂಡ.

"ಸತ್ತ ಎಮ್ಮೆಗೆ ಸೇರು ತುಪ್ಪ" ಎನ್ನುತ್ತಾರೆ. ಸತ್ತವರ ಹೆಸರನ್ನು ನೆನೆಸಿಕೊಂಡು ಶೋಕಸಭೆಯ ಏರ್ಪಾಟು. ಬಹಿರಂಗವಾಗಿ ದಿವಂಗತರ ಕೊನೆಮೊದಲಿಲ್ಲದ ಗುಣಗಾನ. ಅಂತರಂಗದಲ್ಲಿ ನಿಂದಿಸಿದರೂ ಅಚ್ಚರಿಪಡುವಂತಿಲ್ಲ. ಇದೆಲ್ಲ ಜರುಗುವುದು ಸತ್ತವರ ಹೆಸರಿನ ಸುತ್ತಮುತ್ತ ತಾನೆ? ಎಂದಮೇಲೆ ಸಾವು ಬರುವುದು ಹೆಸರಿಗಲ್ಲ ಎಂದಾಯಿತಲ್ಲವೆ? ಹಾಗಿದ್ದರೆ ಇನ್ನಾವುದಕ್ಕೆ?

ಇಂದ್ರಿಯಗಳಿಗೋ ಇಲ್ಲವೆ ಶರೀರದ ಅವಯವಗಳಿಗೋ? ಇಲ್ಲ; ಇವು ತಮ್ಮ ಸಾಮರ್ಥ್ಯವನ್ನು ಅರ್ಧಂಬರ್ಧವಾಗಿ ಇಲ್ಲವೆ ಪೂರ್ತಿಯಾಗಿ ಕಳೆದುಕೊಂಡಾವು. ಒಮ್ಮೊಮ್ಮೆ ತುಂಡರಿಸಿಯೂ ಹೋದಾವು- ಅಪಘಾತದಲ್ಲಿ, ಕಾರಖಾನೆಗಳಲ್ಲಿ ಕೈ ಕಾಲು ಕತ್ತರಿಸಿ ಹೋದಂತೆ. ಇಷ್ಟರಿಂದಲೇ ವ್ಯಕ್ತಿಗೆ ಸಾವು ಉಂಟಾಗದು.

ಹಾಗಾದರೆ, ದೇಹಕ್ಕೆ? ಅಹುದು. "ಜೀವಾ ಪೇತಂವಾವ ಕಿಲೇದಂ ಮ್ರಿಯತೇ, ನಜೀವೋ ಮ್ರಿಯತೇ" ಎಂದು ಉಪನಿಷತ್ತು ಸಾರುವಂತೆ, ಜೀವ ಯಾವುದನ್ನು ತೊರೆಯುತ್ತದೆಯೋ ಅದು ಮಾತ್ರ ಸಾಯುತ್ತದೆ; ಜೀವ ಸಾಯುವುದಿಲ್ಲ. ಮರದ ಕೊಂಬೆಯೊಂದನ್ನು ಕೊಡಲಿಯಿಂದ ಕತ್ತರಿಸಿದರೆ ತುಂಡಾದ ಭಾಗ ಒಣಗುತ್ತದೆಯೆ ಹೊರತು ಮರವಲ್ಲ. ಅದೇ ತೆರನಾಗಿ ಜೀವ ತೊರೆದ ಶರೀರ ಮರದ ಕೊರಡಿನಂತೆ ನಿಶ್ಚೇಷ್ಟಿತ; ವಿದ್ಯುತ್ ಪ್ರವಾಹ ನಿಲುಗಡೆಯಾದ ಬಲ್ಬಿನಂತೆ ನಿಸ್ತೇಜ. ಕೈ ಹಿಡಿದ ಹೆಂಡತಿ ಕೂಡ "ಗತವತಿ ವಾಯೌ ದೇಹಾಪಾಯೇ ಭಾರ್ಯಾ ಬಿಭ್ಯತಿ ತಸ್ಮಿನ್ ಕಾಯೇ" (ಭಜಗೋವಿಂದಂ) ಎಂಬಂತೆ ಮೃತ ಶರೀರವನ್ನು ಕಂಡು ಮುದುರಿಕೊಳ್ಳುತ್ತಾಳೆ, ಹೆದರುತ್ತಾಳೆ. ಪ್ರಪಂಚದ ವೈಚಿತ್ರ್ಯವೇ ಇಂಥದು.

• ಪ್ರೊ. ಶ್ರೀನಿವಾಸ ತೋಫಖಾನೆ

ಹರಟೆ



# ಹೀಗೂ ಒಂದು ದಿನ!

• ಪ್ರೊ. ಜೆ. ಡಿ. ನಾಡಕರ್ಣಿ

ಒಂದು ಇಡಿಯ ದಿನ- "ಹೀಗೇಕೆ ನಡೆದಿದೆ? ಇದು ಹೇಗೆ ಸಾಧ್ಯ?" ಎಂದು ನಾನು ಅಂದುಕೊಳ್ಳುವಂತೆ ಎಲ್ಲ ಘಟನೆಗಳು ನಡೆದುವು. ಬೆಳಗಿನಲ್ಲಿ ಎದ್ದೊಡನೆಯೆ, ಬಚ್ಚಲುಮನೆಗೆ ಹೋಗಿ, ನಾನು ನಳ ತಿರುವಿದೊಡನೆಯೆ ನೀರು ಬಂದೇ ಬಿಟ್ಟಿತು! ಆಶ್ಚರ್ಯ! ನನ್ನ ಕಣ್ಣುಗಳನ್ನು ನಾನೇ ನಂಬಲಿಕ್ಕಾಗಲಿಲ್ಲ. ಎರಡು-ಮೂರು ದಿನಕ್ಕೊಮ್ಮೆ ಬರುವ ನಳದ ನೀರಿನ ಮಾಮೂಲಿ ಸರಬರಾಜು ಹೀಗೇಕೆ ಒಮ್ಮೆಲೆ ಸರಿಯಾಯಿತು? ಎಂದು ನಾನು ತಲೆ ತುರಿಸಿಕೊಳ್ಳುವಂತಾಯಿತು. ಹಾಗೆಯೇ ಮುಂದೆ ಸ್ನಾನಕ್ಕೆ ನೀರು ಕಾಯಿಸುವದರ ಸಲುವಾಗಿ ಸ್ವಿಚ್ ಹಾಕಿದರೆ ಕರೆಂಟು ಹೋಗಿರಲೇ ಇಲ್ಲ! ದಿನಾಲು ಮುಂಜಾನೆ ಎರಡು ತಾಸು ಖಾತ್ರಿಯಾಗಿ ವಿದ್ಯುತ್ತಿನ ನಿಲುಗಡೆ ಮಾಡಲಾಗುತ್ತದೆ ಎಂದು ಭರವಸೆ ನೀಡಿದ್ದರಲ್ಲ? ಅದು ಹುಸಿಯಾಯಿತೇ?....

ಎಲ್ಲಾ ವಿಚಿತ್ರ ಎಂದುಕೊಳ್ಳುತ್ತ ಸ್ನಾನ ಮುಗಿಸಿ, ಕಾಫೀ ಸೇವಿಸುತ್ತ, ದಿನಪತ್ರಿಕೆಯ ಮೇಲೆ ಕಣ್ಣು ಹಾಯಿಸಿದೆ. ಇಲ್ಲಿಯೂ, ಅನಿರೀಕ್ಷಿತ ಅಚ್ಚರಿಯ ಸಂಗತಿಗಳು! ವಾಡಿಕೆಯಂತೆ ದಿನ ಪತ್ರಿಕೆಯ ಮುಖಪುಟದ ಮೇಲಿರಬೇಕಾದ ಸೆನ್ಸೇಶನಲ್ ಸುದ್ದಿ ಒಂದೂ ಇಲ್ಲ! ಬಾಂಬ್ ಸ್ಫೋಟದ ಸುದ್ದಿ ಇಲ್ಲ! ಕಳವು- ದರೋಡೆ ಇಲ್ಲ, ಅಪಘಾತ ಸುದ್ದಿ- ಚಿತ್ರ ಇಲ್ಲ. ಬಸ್ಸುಗಳಿಗೆ ಬೆಂಕಿ ಹಚ್ಚಿದ ವರದಿ ಹೋಗಲಿ, ನಿಧಾನ ಬಸ್ಸುಗಳ ಮೇಲೆ ಕಲ್ಲೆಸೆತದ (ಅಹಿಂಸಾತ್ಮಕ!) ಸುದ್ದಿಯಾಗಲಿ, ಫೋಟೋ ಆಗಲಿ ಇಲ್ಲವೇ ಇಲ್ಲ! ಇದು ಹೇಗೆ?- ಎಂದು ನಾನು ಮತ್ತೆ ತಲೆ ತುರಿಸಿಕೊಳ್ಳುವಂತಾಯಿತು. ಮುಖಪುಟದ ಮೇಲೆ, ಕೇವಲ ಒಬ್ಬ ಸತ್ಪುರುಷರ ಅಧ್ಯಾತ್ಮ ಪ್ರವಚನದ ವಿಸ್ತೃತ ವರದಿ; ಚಿಕ್ಕಮಕ್ಕಳು ಶಾಲೆಯಲ್ಲಿ ಕವಾಯತು ಮಾಡಿದ್ದು; ಕನ್ನಡ ಗ್ರಂಥ ಪ್ರಕಾಶನಕ್ಕೆ ಯಾರೋ ಒಬ್ಬರು ಧನ ಸಹಾಯ ಮಾಡಿದ್ದು- ಇಂಥ ನಿರುಪಯುಕ್ತ ಮಾಹಿತಿ ಮುದ್ರಿತವಾಗಿದೆ!

ಪ್ರತಿ ರವಿವಾರ, ಇಷ್ಟೊತ್ತಿಗೆ ನನ್ನ ಶ್ರೀಮತಿ ಒಳಗಿನಿಂದ ಬಂದು, ಎರಡು-ಮೂರು ಕೈ ಚೀಲಗಳನ್ನು ನನ್ನೆದುರು ಎಸೆದು, ನಾನು ಪೇಟೆಯಿಂದ ತರಬೇಕಾದ ಸಾಮಾನುಗಳ ಸುದೀರ್ಘ ಲಿಸ್ಟ್ ಕೊಡುವಳು. ಇಂದು ಅವಳಿಗೇನಾಗಿದೆ? "ಮನೆಯಲ್ಲಿ ಎಲ್ಲಾ ಸಾಮಾನುಗಳಿವೆ; ಪೇಟೆಯಿಂದ ಯಾವ ಸಾಮಾನೂ ತರಬೇಕಾಗಿಲ್ಲ." ಎಂದು ಅವಳು ನುಡಿದಾಗ, ಆಶ್ಚರ್ಯದಿಂದ ನಾನು ನನ್ನ ಕಿವಿಗಳನ್ನು ನಂಬದೇಹೋದೆ. ಆಮೇಲೆ ಒಳಗೆ ಬಂದು ನೋಡುತ್ತೇನೆ-ನನ್ನ ಕುಮಾರಕಂಠೀರವ ಸ್ನಾನ ಮಾಡಿ, ದೇವರಪೂಜೆ ಮಾಡುತ್ತಿದ್ದಾನೆ! ಇವನೆಂದು ದೇವರ ಪೂಜೆ

ಮಾಡಲು ಪ್ರಾರಂಭಿಸಿದ? ಎಂದು ಮತ್ತೆ ತಲೆ ತುರಿಸಿಕೊಂಡೆ. ರವಿವಾರವಂತೂ ಅವನು ಬೆಳಗಿನಲ್ಲಿ ಎದ್ದೊಡನೆಯೆ, ಚಹಾ ಕುಡಿದು ಹೊರಗೆ ಹೋದವನು, ಗೆಳೆಯರ ಗುಂಪಿನೊಡನೆ ದಿನವಿಡೀ ತಿರುಗಿ, ರಾತ್ರಿಯೇ ಮನೆಗೆ ಬರುತ್ತಿದ್ದನಲ್ಲ! ಕಾಲೇಜಿನಲ್ಲಿ ಓದುವ ನನ್ನ ಮಗಳಿಗೆ ಇಂದು ಯಾವ ರೋಗ ಬಡಿದಿದೆಯೋ? ನಿತ್ಯವೂ ಬೆಳಗಿನಲ್ಲಿ ಮೋರೆ ತೊಳೆಯದೆ ಬೆಡ್‌ಟೀ ಕುಡಿದು, ಟೀವಿ ಮುಂದೆ ಕುಳಿತು, ಹಿಂದೀ ಹಾಡುಗಳನ್ನು ಶ್ರದ್ಧೆಯಿಂದ ಅನುಕರಣೆ ಮಾಡುವವಳು- ಇಂದು ಬೇಗ ಸ್ನಾನ ಮಾಡಿ-ತುಳಸಿಕಟ್ಟೆಗೆ ನೀರು ಹಾಕಿ, ಮುಂದೆ ರಂಗವಲ್ಲಿ ಬಿಡಿಸುತ್ತಿದ್ದಾಳೆ! ಇವತ್ತು ಏಕೆ ಈ ಟ್ರಾನ್ಸ್‌ಫರ್ ಸೀನು? ಇನ್ನೊಂದು ಆಶ್ಚರ್ಯವೆಂದರೆ ಮನೆಗೆಲಸದವಳು ಬೇಗ ಬಂದು, ಪಾತ್ರೆ ತೊಳೆಯುವುದು-ಬಟ್ಟೆ ಒಗೆಯುವುದರಲ್ಲಿ ಈಗ ಆಕೆ ನಿರತಳು! ಕಳೆದ ರವಿವಾರ ಮನೆಗೆಲಸದವಳು ಬರಲಿಲ್ಲವಾದ್ದರಿಂದ, ಮನಸ್ಸಿಲ್ಲದೆ ಅವಳ ಮನೆ ಹುಡಕಿಕೊಂಡು ಹೋಗಿ ಕರೆದುಕೊಂಡು ಬಂದಿದ್ದೆ.

ಪ್ಯಾಂಟ್ ಧರಿಸಿ ಸುಮ್ಮನೆ ಪೇಟೆಯ ಕಡೆಗೆ ಹೊರಟೆ. ಸಿಟಿಬಸ್ ಹಿಡಿಯಲು ಜನರು ಸರಿಯಾಗಿ ಕ್ಯೂನಲ್ಲಿ ನಿಂತಿದ್ದರು. "ಇಂದು ಸಿಟಿಬಸ್ಸುಗಳೆಲ್ಲ ಎಷ್ಟು ವೇಳೆಗೆ ಸರಿಯಾಗಿ ಬರುತ್ತಲಿವೆಯಲ್ಲ!" ಎಂದು ಅವರ ಮುಖದ ಮೇಲೆಯೂ ಮಾತಿನಲ್ಲೂ ಆಶ್ಚರ್ಯಭಾವ ಲಾಸ್ಯವಾಡುತ್ತಿತ್ತು. ರಿಕ್ಷಾಚಾಲಕನೊಬ್ಬ ಪ್ರವಾಸಿಗೆ- "ಅಶೋಕನಗರಕ್ಕೆ ತಾನೇ? ಹೋಗೋಣ ಬನ್ನಿ; ಮೀಟರ್ ಪ್ರಕಾರ ಚಾರ್ಜ್ ಕೊಡಿರಿ" ಎಂದು ವಿನಯದಿಂದ ಹೇಳುವುದನ್ನು ಕೇಳಿ, ಮತ್ತೆ ನನ್ನ ಕಿವಿಗಳನ್ನು ನಾನೇ ನಂಬಬೇಕೋ ಬಿಡಬೇಕೋ ಎಂಬ ದಿಗಿಲಿಗೆ ಒಳಗಾದೆ; ಮುಂದೆ ಪೇಟೆಯ ಕಡೆಗೆ ಸಾಗುವಾಗ, ಯಾರೋ ಇಬ್ಬರು ಮಾತಾಡಿಕೊಳ್ಳುತ್ತಿದ್ದರು- "ಈಗ ನಗರದ ರಸ್ತೆಗಳೆಲ್ಲ ರಿಪೇರಿ ಆಗಿಬಿಟ್ಟಿವೆ. ತುಂಬಿದ್ದ ಗಟಾರಗಳಲ್ಲಿ ನೀರು ಹರಿದು ಎಲ್ಲ ಸ್ವಚ್ಛವಾಗಿವೆ."- ಎಂಬ ನಂಬಲು ಅನರ್ಹವಾದ ವಿಷಯ ನನಗೆ ತಿಳಿದುಬಂದಿತು. ಖಾತ್ರಿ ಮಾಡಿಕೊಳ್ಳಲು ನಾನು ರಸ್ತೆ ದಿಟ್ಟಿಸಿ ನೋಡಿದೆ- ಹೌದು! ರಸ್ತೆಯಲ್ಲಿ ತಗ್ಗು-ದಿನ್ನೆ ಇಲ್ಲ; ಕಲ್ಲು ಎದ್ದಿಲ್ಲ; ಅಲ್ಲಲ್ಲಿ ರಾಡಿ ನೀರು ನಿಂತಿಲ್ಲ! ಛೇ! ಇದ್ಹೇಗೆ ಸಾಧ್ಯ? ರಿಕ್ಷಾ-ಬಸ್ಸುಗಳು ಯಾವ ಧಡಕಿ ಇಲ್ಲದೆ, ಸಮವಾದ ರಸ್ತೆಯ ಮೇಲೆ ಸಂಚರಿಸುತ್ತಲಿವೆ. (ಅಮೇರಿಕೆಯಲ್ಲಿ ಸಹಾ ಹೀಗಿದೆ ಎಂದು ಅಲ್ಲಿಗೆ ಹೋಗಿ ಬಂದ ನನ್ನ ಮಿತ್ರನ ಮಾತು ನನಗೆ ನೆನಪಾಯಿತು.) ನಾಲ್ಕು ಹೆಜ್ಜೆ ಮುಂದೆ ಹೋದರೆ, ಬೀಡಿ ಸೇದಿದವನು ಅದರ ತುಂಡನ್ನು ರಸ್ತೆಯ ಮೇಲೇ ಎಸೆಯುವದರ ಬದಲು, ಖ್ಯಾಕರಿಸಿ ನಿಂತಲ್ಲಿಯೇ ಉಗುಳುವದರ ಬದಲು, ನಗರಸಭೆಯವರು ಇಟ್ಟಿದ್ದ ಕಸದತೊಟ್ಟಿಯಲ್ಲಿ ಸೇದಿದ ಬೀಡಿ ಒಗೆದು, ಉಗುಳುತ್ತಿದ್ದಾನೆ!

ಪೇಟೆಯ ಹತ್ತಿರದ ಗಾಂಧೀಜಿ ಪ್ರತಿಮೆಗೆ ಇಂದು ಯಾರೋ ಹೂಮಾಲೆ ಹಾಕಿದ್ದಾರೆ- ಗಾಂಧೀ ಜಯಂತಿ ಇವತ್ತು ಇಲ್ಲದಿದ್ದರೂ! ಮುಂದ ನಡೆದೆ-ಇನ್ನೊಂದು ಮಹದಾಶ್ಚರ್ಯದ ಸಂಗತಿ! ಇಲ್ಲಿಯ ಅಂಗಡಿಗಳ ಗೋಡೆಯ ಮೇಲೆ ದಿನಾಲು ರಾರಾಜಿಸುವ ಸಿನೇಮಾದ ದೊಡ್ಡ ಜಾಹೀರಾತುಗಳೇ ಕಾಣುತ್ತಿಲ್ಲ! ಯುವಕರ ಕಣ್ಮನ ಸೆಳೆಯುವ, ಹಿಂದೀ ಚಿತ್ರದ, ಮಳೆಯಲ್ಲಿ ತೋಯಿಸಿಕೊಂಡ ಜನಪ್ರಿಯ ನಾಯಕಿಯ ಚಿತ್ರವಿಲ್ಲ; ಹಾಗೆಯೇ, ನಾಯಕ-ಖಳನಾಯಕರು ಪಿಸ್ತೂಲು-ಚೂರಿ ಹಿಡಿದುನಿಂತಿದ್ದ ಭಯಾನಕ ಚಿತ್ರಕೂಡ ಇಲ್ಲ! ಲೈಂಗಿಕ ಶಿಕ್ಷಣವನ್ನು ನೀಡುತ್ತೇವೆಂದು ಹೇಳಿಕೊಳ್ಳುವ ಮಲೆಯಾಳಂ ಸಿನೇಮಾದ ಒಂದಾದರೂ ಮೋಹಕ ಜಾಹೀರಾತು ಇರಬಾರದೇ? ಛೇ! ಇವತ್ತು ಏನೋ ಆಗಿದೆ. ಅಥವಾ ನಾನೇ ಕನಸು ಕಾಣುತ್ತಿದ್ದೇನೇನೋ ಎಂಬ ಪ್ರಬಲ ಸಂಶಯ ಬಂದು, ಖಚಿತಪಡಿಸಲು ನನ್ನ ಮೈಯನ್ನೇ ಚಿವುಟಿ ಖಾತ್ರಿ ಮಾಡಿಕೊಂಡೆ.

ಪೇಟೆಯಲ್ಲಿ ಹೋಗಿ ತರಕಾರಿಯ ಧಾರಣೆ ವಿಚಾರಿಸಿದೆ. ಉಳ್ಳಾಗಡ್ಡಿ, ಸೌತೇಕಾಯಿ, ಮೆಣಸಿನಕಾಯಿ ಎಲ್ಲಾ ಕಿಲೋಗೆ ಒಂದೂವರೆ ರೂಪಾಯಿ ಮಾತ್ರ! ಟೊಮ್ಯಾಟೋದ ಬೆಲೆ ಒಂದು ರೂಪಾಯಿ! ಕಾಯಿಪಲ್ಲೆ ಎಲ್ಲಾ ಸಾಧಾರಣ ಕಿಲೋ ಒಂದಕ್ಕೆ ಎಳೆಂಟು ರೂಪಾಯಿ

ಇರಬೇಕಲ್ಲ! ಆಗ, ನನಗೆ ಸಿಟ್ಟು ಬಂದಿತು. ತರಕಾರಿ ಮಾರುತ್ತ ಕುಳಿತಿದ್ದ ಒಬ್ಬ ಹೆಣ್ಣು ಮಗಳಿಗೆ- "ಹಾಗಾದರೆ ಈ ಕೋತಂಬರಿಯ ದೊಡ್ಡ ಸಿವುಡಿಗೆ ಕೇವಲ ಹತ್ತು ಪೈಸೆ ಏನು?" ಎಂದು ನನಗೆ ತಡೆಯಲಾಗದೆ ಕೇಳಿದರೆ, ಅವಳು ನಸುನಗುತ್ತ, "ಹೌದರೀಯಪ್ಪಾ!" ಎನ್ನಬೇಕೇ? ಆಗ ಅವಳ ಕಪಾಳಕ್ಕೆ ಒಂದು ಏಟು ಕೊಡಬೇಕೆಂದು ಅನ್ನಿಸಿದರೂ, ಅದನ್ನು ಹೇಗೋ ತಡೆದುಕೊಂಡೆ. ಅಷ್ಟರಲ್ಲಿ, ನನ್ನ ಪರಿಚಯದ ಕಿರಾಣಿ, ಅಂಗಡಿಯ ಮಾಲಕ ನನ್ನನ್ನು ಕರೆದ- ಅಂಗಡಿಯಲ್ಲಿ ಹೋಗಿ, ರೇಟು-ಲಿಸ್ಟನ್ನು ನೋಡುತ್ತೇನೆ- ಸಣ್ಣಕ್ಕಿ ಕಿಲೋಗೆ ನಾಲ್ಕು ರೂಪಾಯಿ; ದಪ್ಪಕ್ಕಿ ಎರಡೂವರೆ ರೂಪಾಯಿ! ಸಕ್ಕರೆಯ ಬೆಲೆ ಕಿಲೋಗೆ ಮೂರು ರೂಪಾಯಿ; ಒಳ್ಳೇ ಎಣ್ಣೆ ಕಿಲೋಗೆ ೧೮ ರೂ.! "ಈ ರೇಟು-ಲಿಸ್ಟ್ ಹತ್ತಾರು ವರ್ಷ ಹಿಂದಿನದೇನು? ಆಕಸ್ಮಾತ್ ಕೈ ತಪ್ಪಿ ಯಾವುದೋ ಹಿಂದಿನ ಹಳೆಯ ಬೋರ್ಡ್ ಇಟ್ಟಿದ್ದೀರೇನು ಮತ್ತೆ?" ಎಂದು ಅಂಗಡಿಯ ಮಾಲೀಕನನ್ನು ವಿಚಾರಿಸಿದೆ. ಅವನು ನಗುತ್ತ- "ಛೇ! ಇದು ಕೇವಲ ಇಂದಿನ ರೇಟು!" ಎಂದು ಉತ್ತರಿಸಿ ನನ್ನ ದಿಗಿಲನ್ನು ಮತ್ತಿಷ್ಟು ಹೆಚ್ಚಿಸಿದ.

ಅಂಗಡಿಯಲ್ಲಿ ಯಾರೋ ಒಬ್ಬರು, ದಿನ ಪತ್ರಿಕೆಯಲ್ಲಿಯ ಬಂಗಾರದ ಇಂದಿನ ಧಾರಣೆಯನ್ನು ಓದುತ್ತಿದ್ದರು. "ಶೆಟ್ಟರೇ, ಬಂಗಾರದ ಧಾರಣೆ ಇವತ್ತು ತೊಲಿಗೆ ೧೧೬ ರೂ.ಗಳಿಂದ ೧೧೮ ರೂ.ಗೆ ಏರಿದೆ" ಎಂದರು. ನನಗೆ ದಿಗ್ಭ್ರಮೆಯಾಯಿತು. ತೊಲಿಗೆ ಐದು ಸಾವಿರ ರೂಪಾಯಿ ದಾಟಿತ್ತಲ್ಲ! ಎಂದು ಹೇಳಬೇಕೆಂಬ ಮನಸ್ಸಾದರೂ, ಹಾಗೆ ಮಾತಾಡಿ ಮತ್ತೆ ಹಾಸ್ಯಾಸ್ಪದನಾಗುವುದು ಬೇಡ ಎಂದು ಸುಮ್ಮನಾದೆ.



ಅವರಿಂದ ದಿನಪತ್ರಿಕೆಯ ಇನ್ನೊಂದು ಪುಟ ಪಡೆದು ಅಲ್ಲಲ್ಲಿ ಓದಿದೆ. ಚುನಾವಣೆಯ ಸುಧಾರಣೆಗಳು ಎಂಬ ಶೀರ್ಷಿಕೆಯಲ್ಲಿ, "ಈ ಸಲದ ಚುನಾವಣೆಯಲ್ಲಿ ಮತದಾರನ ವಯಸ್ಸನ್ನು ೧೮ರಿಂದ ೨೫ಕ್ಕೆ ಏರಿಸಲಾಗಿದೆ. ಅಲ್ಲದೆ ಮತದಾರ ಮತ್ತು ಅಭ್ಯರ್ಥಿಗಳಿಗೆ ಕೆಲವು ಕನಿಷ್ಠ ಶೈಕ್ಷಣಿಕ ಅರ್ಹತೆಗಳನ್ನು ವಿಧಿಸಲಾಗಿದೆ," ಎಂಬುದನ್ನೋದಿ ಸಂತೋಷವಾಯಿತು. ಮಂತ್ರಿ ಮಂಡಲದ ಗಾತ್ರವನ್ನು ಸಂವಿಧಾನದ ಪ್ರಕಾರ ಮಿತಗೊಳಿಸಲಾಗಿದೆ; ನಿವೃತ್ತ ಶಾಸಕರ ಆರ್ಥಿಕ ಅನುಕೂಲಗಳಿಗೆ ಮಿತಿ ಹೇರುವ ಪ್ರಸ್ತಾಪವೂ ಪತ್ರಿಕೆಯಲ್ಲಿ ಪ್ರಕಟವಾಗಿತ್ತು.

ಸ್ವಲ್ಪ ಹಸಿವಾದ್ದರಿಂದ, ಇಡ್ಲಿ ತಿನ್ನೋಣವೆಂದು ನಾನು ಹೊಟೇಲ್ ಪ್ರವೇಶಿಸಿದೆ. ಹೊಸದಾಗಿ ಬರೆದು ಇರಿಸಿದ್ದ ರೇಟು-ಬೋರ್ಡ್ ನೋಡುತ್ತೇನೆ ಮತ್ತೆ ಆಶ್ಚರ್ಯ! ಚಹಾ ೫೦ ಪೈಸೆ; ಡಬಲ್ ಇಡ್ಲಿ ೬೦ ಪೈಸೆ; ಉಪ್ಪಿಟ್ಟು ೪೦ ಪೈಸೆ; ದೋಸೆ ೮೦ ಪೈಸೆ- ಹೀಗೆಯೇ ತಿನಿಸುಗಳ ಧಾರಣೆ ಬರೆದಿದ್ದರು. ಒಮ್ಮೆಲೆ, ತಿಂಡಿಗಳ ಬೆಲೆ ಹೀಗೇಕೆ ಕಡಿಮೆಯಾಯಿತು? ಎಂದುಕೊಂಡೆ. ಈ ಬೆಲೆಗಳಲ್ಲಿ ಹೊಟೇಲ್ ನಡೆಯುವುದಾದರೂ ಹೇಗೆ? ಎನ್ನಿಸಿತು. ರಸ್ತೆಯಲ್ಲಿ ಸಂಚರಿಸುವಾಗ ತಲೆಯೆತ್ತಿ ನೋಡುತ್ತೇನೆ, ಎಲ್ಲಾ ಅಂಗಡಿಗಳ ಬೋರ್ಡುಗಳು ಅಚ್ಚಗನ್ನಡದಲ್ಲಿ! ಹೇರ್‌ಕಟಿಂಗ್ ಸಲೂನ್, ಹಾರ್ಡ್‌ವೇರ್ ಸ್ಟೋರ್ಸ್, ಗಿಫ್ಟ್ ಸೆಂಟರ್, ಮಾಡರ್ನ್ ಫರ್ನಿಚರ್ ಸೇಲ್ಸ್, ಡಿ-ಲಕ್ಸ್ ಲಾಜ್- ಮೊದಲಾದ ಸುಪರಿಚಿತ ಆಧ್ಯತೆಯ ಹೆಸರುಗಳ ಬದಲು, ಅಚ್ಚಗನ್ನಡ ಫಲಕಗಳು ಕಂಗೊಳಿಸಿದವು. "ಭಲೇ! ಕನ್ನಡ ಚಳುವಳಿಗಾರರೇ! ಅಂತೂ ನೀವು ಯಶಸ್ವಿಯಾದಿರಿ! ಅಭಿನಂದನೆಗಳು. ಎಲ್ಲಾ ಕನ್ನಡಾಂಬೆಯ ಅನುಗ್ರಹ" ಎನ್ನುತ್ತ ಅಭಿಮಾನದಿಂದ ಮುನ್ನಡೆದೆ.

ರವಿವಾರವಿದ್ದರೂ, ಸ್ಪೇಶಲ್‌ಕ್ಲಾಸ್ ಇಟ್ಟಿದ್ದಾರೆಂದು ಶಾಲಾ ವಿದ್ಯಾರ್ಥಿಗಳ ಗುಂಪೊಂದು ಶಾಲೆಯ ಕಡೆಗೆ ಹೊರಟಿತ್ತು. ವೇಷ ನೋಡಿದರೆ, ಯುನಿಫಾರ್ಮ್ ಇಲ್ಲ, ಕುತ್ತಿಗೆಗೆ ಟಾಯ್ (ಕೊರಳ್ಗೆ ಉರುಳ್) ಇಲ್ಲ! ಕೇವಲ ಲಂಡಚಣ್ಣ, ಒಂದು ಅಂಗಿ ಧರಿಸಿದ್ದಾರೆ! ಅದಕ್ಕೂ ಅಚ್ಚರಿಯೆಂದರೆ ವಿದ್ಯಾರ್ಥಿಯ ಬೆನ್ನ ಮೇಲೆ (ಪರ್ವತಾರೋಹಣಕ್ಕೆ ಹೊರಟವರಂತೆ) ಭಾರವಾದ ಪುಸ್ತಕಗಳ ಹೊರೆ ಹೊತ್ತ ಬ್ಯಾಗ್ ಇಲ್ಲವೇ ಇಲ್ಲ! ಕೈಯಲ್ಲಿ ಕೇವಲ ಒಂದೆರಡು ಸತ್ಯ ಮತ್ತು ಒಂದು ನೋಟ್‌ಬುಕ್ ಮಾತ್ರ ಹಿಡಿದಿದ್ದಾರೆ! ಇದು ಹೇಗೆ? ವಿಚಾರಿಸಿದರೆ, "ಈಗ ಎಲ್ಲಾ ಬದಲಾದದ್ದು ನಿಮಗೆ ಗೊತ್ತಿಲ್ವೇನು? ಕಚ್ಚಾ ಬರೆಯಲು ಪಾಟಿ-ಪೆನ್ಸಿಲ್ ಉಪಯೋಗಿಸಲು ಹೇಳಿದ್ದಾರೆ; ಶಾಲೆಯಲ್ಲಿ ವ್ಯಾಕರಣ ಕಲಿಸುತ್ತಾರೆ, ಕನ್ನಡ ಕವಿತೆಗಳನ್ನು ಬಾಯಿಪಾಠ ಮಾಡಿಕೊಂಡು ಬರಲು ಹೇಳಿರುವರು' ಎಂಬ ಆಶ್ಚರ್ಯದ ವಿಷಯ ಬೆಳಕಿಗೆ ಬಂದು, ನಾನು ಸ್ತಂಭೀಭೂತನಾದೆ. ಹಾಗಾದರೆ, ಇನ್ನು ಮೇಲೆ ವಿದ್ಯಾರ್ಥಿಗಳ ಬಾಯಿಯಲ್ಲಿ "ಮಮ್ಮಿ ಡ್ಯಾಡಿ" ಹೋಗಿ, "ಅಪ್ಪ-ಅಮ್ಮ" ಬಂದುಬಿಡುತ್ತದೇನೋ ಎಂಬ ಹೆದರಿಕೆ ನನಗೆ ಬಂದು, ಒಂದು ಕ್ಷಣ ಗಡಗಡ ನಡುಗಿಬಿಟ್ಟೆ. 'ಗದಾಯುದ್ಧ'ದಲ್ಲಿ ದುರ್ಯೋಧನನು "ನೀರೊಳಗಿರ್ದುಂ ಬೆಮರ್ತಂ" ಎಂಬ ರನ್ನಕವಿಯ ಉಕ್ತಿಯನ್ನು ಮೀರಿಸಿ, ನಾನೂ "ಬಿಸಿಲೊಳಿರ್ದುಂ ನಡುಗಿದೆಂ!"

ರಸ್ತೆಯಲ್ಲಿ, ಹೊಟೇಲ್‌ಗಳ ಬದಿಯಲ್ಲಿ, ಹೆಚ್ಚಿನ ಸಂಖ್ಯೆಯಲ್ಲಿ ವಾಯಿನ್ ಸ್ಟೋರ್ಸ್, ಪೆಗ್‌ಬಾರ್ ಇದ್ದುದನ್ನು ನಾನು ನೋಡಿದ್ದೆ. ಇಂದು ಕಣ್ಣು ಹಾಯಿಸಿದರೆ, ಅವುಗಳನ್ನೆಲ್ಲ ಬಂದು ಮಾಡಿ, ದೊಡ್ಡ ಕೀಲಿ ಜಡಿದುಬಿಟ್ಟಿದ್ದರು! ಶಾಕಾಹಾರಿ ಹೊಟೇಲ್ ಮಾತ್ರ ತೆರೆದಿವೆ. "ಹೀಗೇಕೆ?" ಎಂದು ಒಬ್ಬರನ್ನು ವಿಚಾರಿಸಿದರೆ, ಅವರು ನನ್ನ ಅಜ್ಞಾನಕ್ಕೆ ನಗುತ್ತ- "ಸಂಪೂರ್ಣ ಪಾನ ನಿರೋಧ ಜಾರಿಯಲ್ಲಿ ಬಂದುಬಿಟ್ಟಿದ್ದು ನಿಮಗೆ ಗೊತ್ತೇ ಇಲ್ಲವೇನು?" ಎಂದಾಗ, ನನಗೆ ಪ್ರಪಂಚವೆಲ್ಲ ಗಿರ್ರನೆ ಗಿರಕಿ ಹೊಡೆದಂತೆ ಅನ್ನಿಸಿ, ರಸ್ತೆಯಲ್ಲಿ ಕುಸಿದು ಕುಳಿತೆ. "ಹಿಂಗ್ಯಾಕ ಹೊರಳುತ್ತೀರಿ? ಮಂಚದ ಮೇಲಿಂದ ಬಿದ್ದುಬಿಟ್ಟೀರಿ! ಏನು ಕನಸು ಕಾಣುತ್ತಿದ್ದೀರೇನು?" ಎಂದು ಕೈಯಲ್ಲಿ ಚಹದ ಕಪ್ಪು ಹಿಡಿದು ನಸುನಗುತ್ತ ನನ್ನಾಕೆ ಕೇಳಿದಾಗಲೇ ನಾನು ವಾಸ್ತವ ಪ್ರಪಂಚಕ್ಕೆ ಬಂದೆ. ●



# ಹೀಗಿದ್ದರು ನಮ್ಮ ರಾಜಗುರು

• ಧರ್ಮೇಂದ್ರ ಗೌಡ

ಷೆಡಿಲ ಖಾಕಿ ಚೊಣ್ಣ. ಮೇಲೊಂದು ಅರ್ಧ ತೋಳಿನ ಬಿಳಿಶರ್ಟು. ತಲೆಯ ಮೇಲೆ ಸದಾ ಕರಿ ಟೊಪ್ಪಿಗೆ, ಗೋದಿ ಮೈ ಬಣ್ಣ. ಸಾಧಾರಣ ಎತ್ತರ. [illegible]ಹೋದ ಕಪೋಲಗಳು. ತಂದೆ ತೀರಿ ಹೋಗಿ ಮನೆತನದ ಜವಾಬ್ದಾರಿಯೆಲ್ಲ ಮೈಮೇಲೆ ಬಿದ್ದಿದ್ದರಿಂದ ವಯಸ್ಸಿಗೆ ಮೀರಿದ ಗಾಂಭೀರ್ಯ. ಯಾವ ರೀತಿಯಿಂದಲೂ ಆಕರ್ಷಕವಲ್ಲದ ವ್ಯಕ್ತಿತ್ವ. ಆದರೆ ಅಂತರ್ಯದಲ್ಲಿ ಮಾತ್ರ ಜ್ವಲಂತವಾದ ದೇಶಭಕ್ತಿ. ಹೀಗಿದ್ದರು ನಮ್ಮ ರಾಜಗುರು.

ಸದಾ ಮಿತಭಾಷಿ. ಗಂಟೆಗಟ್ಟಲೆ ಮಲಗಿರುವ [illegible] ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಹಾರಾಷ್ಟ್ರದ [illegible]ಯು ವಹಿಸಿದ ಪಾತ್ರದ ಬಗ್ಗೆ ಅಪಾರವಾದ [illegible]ನ. ಆ ಕುರಿತು ಮಹಾರಾಷ್ಟ್ರೀಗರ ಕೊಡು[illegible] ಬಗ್ಗೆ ಒಂದು ರೀತಿಯಲ್ಲಿ ಚಲಿಸುವ [illegible]ಶವೇ ಆಗಿದ್ದರು ರಾಜಗುರು.

[illegible] ತಿರುಗಿಸುವುದೆಂದರೆ ಬಲು ಪ್ರೀತಿ. [illegible]ಯುಲ್ಲೂ ಸಿದ್ಧ ಹಸ್ತ. ಜೀವನಯಾಪನೆಗಾಗಿ ಬನಾರಸಿನ ಮುನ್‌ಸಿಪಲ್ ಹೈಸ್ಕೂಲಿನಲ್ಲಿ ಡ್ರಿಲ್ ಮಾಸ್ತರನ ಕೆಲಸ. ಚಂದ್ರಶೇಖರ ಆಜಾದರ ಮೇಲೆ ಎಲ್ಲಿಲ್ಲದ ಪ್ರೀತಿ. ಅಣ್ಣಾ ಎಂದು ಕರೆಯುವಷ್ಟು ಸಲುಗೆ. ನುಡಿದಂತೆಯೆ ನಡೆಯುವ ಸತ್ಯಸಂಧ. "ಕೊನೆಯವರೆಗೂ ನಿನ್ನ ಜೊತೆಯಲ್ಲಿಯೇ ಇರುತ್ತೇನೆ ಅಣ್ಣಾ" ಎಂದು ಚಂದ್ರಶೇಖರ ಆಜಾದರಿಗೆ ಹೇಳಿದ್ದನ್ನು ಅಕ್ಷರಶಃ ಪರಿಪಾಲಿಸಿದ ಧೀರ.

ಒಂದು ಸಲ ಚಂದ್ರಶೇಖರ ಆಜಾದರು ಸರಕಾರಿ ಖಜಾನೆಯಲ್ಲಿ ಎಷ್ಟು ಹಣವಿರುತ್ತದೆನ್ನುವುದನ್ನು ಅಂದಾಜುಮಾಡಲು ಭಗತಸಿಂಗ, ರಾಜಗುರು ಹಾಗೂ ಶಿವವರ್ಮರನ್ನು ಗೋರಖಪುರಕ್ಕೆ ಕಳಿಸಿಕೊಟ್ಟಿದ್ದರು. ಮೂರುನಾಲ್ಕು ದಿನಗಳ ಕೆಲಸ. ಪೊಲೀಸರ ಕಣ್ಣಿಗೆ ಬೀಳದೆ ಕಾರ್ಯಸಾಧಿಸಬೇಕಾಗಿದ್ದರಿಂದ ಹೊಟೇಲಿನಲ್ಲಾಗಲಿ ಧರ್ಮಶಾಲೆಯಲ್ಲಾಗಲಿ ಇಳಿದುಕೊಳ್ಳುವ ಹಾಗಿರಲಿಲ್ಲ. ಅಲ್ಲಲ್ಲಿ ಖಾಲಿ ಮನೆಗಳು ದೊರೆತವಾದರೂ ಬಾಡಿಗೆ ಕೊಡುವಷ್ಟು ಹಣ ಇವರಲ್ಲಿರಲಿಲ್ಲ. ಮನೆಯಲ್ಲ

ವಾದರೆ ಅಂಗಡಿಯಾದರೂ ಸರಿ ಎಂದ ಅವರು ಗೋರಖಪುರದ ವಿದ್ಯುದಾಗಾರದ ಬದಿಯಲ್ಲೆ ಇದ್ದ ಪುಟ್ಟ ಅಂಗಡಿಯೊಂದನ್ನು ಬಾಡಿಗೆ ಹಿಡಿದ್ದರು.

ಮುರುಕು ಅಂಗಡಿ. ವ್ಯಾಪಾರಕ್ಕೆ ಧಕ್ಕೆಯಾಗುವುದರಿಂದ ಮುಂದಿನಿಂದ ಯಾರೂ ಪ್ರವೇಶಿಸ ಕೂಡದು ಎಂದು ಅಂಗಡಿಕಾರನಿಂದ ಕಟ್ಟಪ್ಪಣೆ ಬೇರೆ. ಹಿಂದೆ ಮಲಗುವ ಮಟ್ಟಿಗೆ ಮಾತ್ರ ಜಾಗ. ಒಂದು ಗೋಣಿತಟ್ಟು ಮಾತ್ರ ಇವರ 'ಮನೆ'ಯನ್ನೂ ಅಂಗಡಿಯನ್ನೂ ಬೇರ್ಪಡಿಸಿತ್ತು.

ದಿನವೆಲ್ಲಾ ತಿರುಗುವುದೇ ಕೆಲಸ. ಒಮ್ಮೆ ಟ್ರೆಜರಿಯ ಸುತ್ತ ಚಕ್ಕರ್‌ಹೊಡೆದರೆ ಮತ್ತೊಮ್ಮೆ ಇಂಪೀರಿಯಲ್ ಬ್ಯಾಂಕಿನ (ಈಗಿನ ಸ್ಟೇಟ್ ಬ್ಯಾಂಕ್) ಸುತ್ತ. ದಣಿದು ರಾತ್ರಿ ಮನೆಗೆ ಬಂದರೆಂದರೆ ಗಡದ್ದಾಗಿ ಮಲಗಿಬಿಡುವರು.

ನಾಲ್ಕನೆಯ ದಿನ. ಠಾಣೆಯಲ್ಲಿ ಪೊಲೀಸರ ಸಂಖ್ಯೆ ಎಷ್ಟು? ಖಜಾನೆಯಲ್ಲೂ ಬ್ಯಾಂಕಿನಲ್ಲೂ ದಿನಾಲು ಸುಮಾರು ಎಷ್ಟೆಷ್ಟು ಹಣ ಬಂದು ಬೀಳುತ್ತದೆ? ಅವೆರಡೂ ಕಡೆಗಳಲ್ಲಿ ಭದ್ರತಾ ವ್ಯವಸ್ಥೆ ಹೇಗಿದೆ? ಹಣವನ್ನು ಕಾಯಲು ಎಷ್ಟು ಜನ ರಕ್ಷಕರಿದ್ದಾರೆ ಮುಂತಾದ ವಿವರಗಳನ್ನು ಸಂಗ್ರಹಿಸಿಕೊಂಡು ಮಲಗಿದರೋ ಇಲ್ಲವೋ, ನಿದ್ದೆ ಬಂದೇ ಬಿಟ್ಟಿತು.

ಅರ್ಧರಾತ್ರಿಯ ಸಮಯ. ಏನೋ ಭುಸುಗುಟ್ಟುತ್ತಿದ್ದ ಶಬ್ದವಾಗಿ ಶಿವವರ್ಮರು ತಟ್ಟನೆ ಎಚ್ಚೆತ್ತರು. ಟಾರ್ಚ್ ಹೊತ್ತಿಸಿ ನೋಡಿದರೆ ರಾಜಗುರು ಅವರ ತಲೆಯ ಬಳಿ ಕರಿನಾಗರವೊಂದು ಭುಸುಗುಟ್ಟುತ್ತಿದೆ. ಪಕ್ಕದಲ್ಲಿದ್ದ ಭಗತಸಿಂಗರನ್ನೆಬ್ಬಿಸಿ ವಿಷಯ ಹೇಳಿದಾಗ ಅವರು ರಾಜಗುರುವನ್ನು ಎಬ್ಬಿಸಲು ಕೂಗಿದರು. ಅವರ ಮೈಯನ್ನು ಅಲ್ಲಾಡಿಸಿದರು. ಇದಾವುದರ ಪರಿವೆಯೂ ಇಲ್ಲದೆ ರಾಜಗುರು ಗೊರಕೆಹೊಡೆಯುತ್ತಿದ್ದರು. ಹಾಗೆಯೆ ಇವರು ಏಳುವವರಲ್ಲವೆಂದು ಭಗತಸಿಂಗ್ ಅವರ ಕಾಲುಗಳನ್ನು ಹಿಡಿದೆಳೆದು, "ತಲೆಯ ಹತ್ತಿರ ಹಾವು ಬಂದಿದೆಯೋ ಮಹಾರಾಯಾ!" ಎಂದು ಕೂಗಿದರು. "ಬಂದರೆ ಬರಲಿಬಿಡು ಹಾಳಾದದ್ದು, ನನ್ನ ನಿದ್ದೆಯನ್ನೇಕೆ ಕೆಡಿಸುತ್ತೀರಿ?" ಅಂದು ಮಗ್ಗಲು ಹೊರಳಿಸಿ ಮತ್ತೆ ಗೊರಕೆ ಹೊಡೆಯತೊಡಗಿದರು ರಾಜಗುರು. ಗದ್ದಲಕ್ಕೆ ಹೆದರಿಯೋ ಏನೋ, ಕರಿನಾಗರ ಕತ್ತಲೆಯಲ್ಲೆಲ್ಲೋ ಹರಿದು ಹೋಯಿತು.

ಬಂದ ಕೆಲಸ ಮುಗಿದದ್ದರಿಂದ ಮರುದಿನವೇ ಬನಾರಸಿಗೆ ಹಿಂದಿರುಗುವದೆಂದು ಆ ಕ್ರಾಂತಿಕಾರಿಗಳು ನಿರ್ಧರಿಸಿದ್ದರು. ಬೆಳಗಾಗಲು ಇನ್ನೂ ಮೂರ್ನಾಲ್ಕು ಗಂಟೆಗಳ ಅವಕಾಶವಿತ್ತು. ಮತ್ತೆ ಹಾವು ಬಂದೀತೆನ್ನುವ ಆತಂಕದಿಂದಲೇ ಅವರೆಲ್ಲ ಇಡೀ ರಾತ್ರಿಯನ್ನು ಮೊಂಬತ್ತಿಯ ಮಿಣಿಮಿಣಿ ಬೆಳಕಿನಲ್ಲಿ ಕಳೆದರು. ಇತ್ತ ರಾಜಗುರು ಮಾತ್ರ ನಿರಾತಂಕವಾಗಿ ನಿದ್ರಿಸುತ್ತಿದ್ದರು.

ಮರುದಿನ ಸ್ಟೇಶನ್ ಮುಟ್ಟಿದಾಗ ಗಾಡಿ ಬರುವುದಕ್ಕೆ ಇನ್ನೂ ಸಮಯವಿತ್ತು. ಅಲ್ಲಿಯವರೆಗೆ ವೇಳೆಯನ್ನು ಹೇಗೆ ಕಳೆಯುವುದು? ಅಷ್ಟರಲ್ಲಿಯೆ ಟೆಕ್ನಿಕಲ್ ಹೈಸ್ಕೂಲಿನಲ್ಲಿರುವ ಹಲಧರ ವಾಜಪೇಯಿಯವರನ್ನು ಭೇಟಿಯಾದರೆ ಹೇಗೆ? ಎಂಬ ವಿಚಾರ ಭಗತಸಿಂಗರಿಗೆ ಬಂತು. "ಬನ್ನಿರೋ, ಇಲ್ಲೇ ಧರ್ಮಶಾಲಾ ಬಾಜಾರಿನಲ್ಲಿ ಟೆಕ್ನಿಕಲ್ ಹೈಸ್ಕೂಲು ಇದೆ. ಅಲ್ಲಿಗೆ ಹೋಗಿ ಹಳೇ ಗೆಳೆಯ ಹಲಧರ ವಾಜಪೇಯಿಯನ್ನಿಷ್ಟು ಭೇಟಿಯಾಗಿ ಬರೋಣ. ಅದಕ್ಕೇನೂ ಹೆಚ್ಚು ಸಮಯ ತಗಲುವುದಿಲ್ಲ," ಎಂದರು. ಶಿವವರ್ಮ ತಯಾರಾದರೂ ರಾಜಗುರು ತಯಾರಾಗಲಿಲ್ಲ. "ಇದೆಲ್ಲಾ ಗೊಂದಲದಲ್ಲಿ ನಾನು ಬೀಳುವುದಿಲ್ಲ. ಹೋಗುವುದಿದ್ದರೆ ಹೋಗಿ, ಆದರೆ ಸಮಯಕ್ಕೆ ಸರಿಯಾಗಿ ಬನ್ನಿ. ನಾನು ಓವರ್‌ಹೆಡ್ ಬ್ರಿಡ್ಜಿನ ಅಡಿಯಲ್ಲಿ ನಿಮ್ಮನ್ನು ಭೇಟಿಯಾಗುತ್ತೇನೆ," ಅಂದರು.

ರಾಜಗುರು ಅವರನ್ನು ಬಿಟ್ಟು ಅವರಿಬ್ಬರೂ ಟೆಕ್ನಿಕಲ್ ಸ್ಕೂಲಿಗೆ ಹೊರಟುಹೋದರು. ಎರಡು ಗಂಟೆಯ ನಂತರ ಮರಳಿ ಬಂದಾಗ ರಾಜಗುರುವಿನ ಪತ್ತೆಯೇ ಇಲ್ಲ. ಆತ ಬರುತ್ತಾನೆಂದು ಓವರ್‌ಹೆಡ್ ಬ್ರಿಡ್ಜ್ ಬಳಿ ಕಾಯ್ದರು. ಗಾಡಿ ಬಂದು ಹೊರಡುವ ಸಮಯವಾದರೂ ರಾಜಗುರುವಿನ ಸುದ್ದಿಯೇ ಇಲ್ಲ. ಅವನಿಗಾಗಿ ಪ್ಲಾಟ್‌ಫಾರ್ಮಿನಲ್ಲಿ ಹುಡುಕಿದರು. ವೇಟಿಂಗ್ ರೂಮಿನಲ್ಲಿ

ಹುಡುಕಿದರು. ಬೋಗಿಗಳಲ್ಲಿ ಹುಡುಕಿದರು. ಎಲ್ಲೂ ಅವನ ಪತ್ತೆಯೇ ಇಲ್ಲ. ಅಷ್ಟರಲ್ಲಿ ಗಾರ್ಡ್ ಸೀಟಿ ಊದಿದ. ಗಾಡಿ ನಿಧಾನವಾಗಿ ಚಲಿಸಲಾರಂಭಿಸಿತು. ಇನ್ನು ತಡಮಾಡುವದು ಒಳ್ಳೆಯದಲ್ಲ, ರಾಜಗುರು ಇಲ್ಲಿ ಯಾವುದಾದರೂ ಡಬ್ಬಿಯಲ್ಲಿ ಕುಳಿತಿರಬಹುದು. ಬನಾರಸಿನಲ್ಲಿ ಎಲ್ಲರೂ ಕೂಡಿದರಾಯಿತು ಅಂದುಕೊಂಡು ಭಗತಸಿಂಗ ಹಾಗೂ ಶಿವವರ್ಮ ಗಾಡಿಯನ್ನೇರಿದರು.

ಆದರೆ ಬನಾರಸಿನಲ್ಲೂ ಅವರ ಪತ್ತೆಯಿಲ್ಲವಾದಾಗ ಅವರಿಬ್ಬರೂ ಚಿಂತಿತರಾದರು. ಮರುದಿನ ಭಗತಸಿಂಗ್ ಹಾಗೂ ಶಿವವರ್ಮರಿದ್ದಲ್ಲಿಯೇ ರಾಜಗುರು ಅವರನ್ನು ಹುಡುಕಿಕೊಂಡು ಬಂದರು. ರಾಜಗುರು ಈ ಎರಡು ದಿನ ಎಲ್ಲಿ ಅಡಗಿದ್ದರೆನ್ನುವುದನ್ನು ತಿಳಿದುಕೊಳ್ಳುವ ತವಕ. ಆದರೆ ರಾಜಗುರು ಅದನ್ನೆಲ್ಲ ವಿವರಿಸುವ ಸ್ಥಿತಿಯಲ್ಲಿರಲಿಲ್ಲ. "ನನ್ನನ್ನು ಹಾಗೆಯೆ ಬಿಟ್ಟು ಹೋಗಿಬಿಡುವುದೆ? ಇದು ಪರಸ್ಥಳ. ಹಿಂದಿರುಗಿ ಬರಲು ಇವನ ಬಳಿ ಹಣವೂ ಇಲ್ಲ ಎನ್ನುವಷ್ಟಾದರೂ ಪರಿಜ್ಞಾನ ನಿಮಗೆ ಇರಬೇಡವೆ? ಆಗಲಿ, ಹೊತ್ತು ಬರಲಿ, ಆಗ ನಿಮ್ಮ ಕೈ ನೋಡಿಕೊಳ್ಳುತ್ತೇನೆ," ಎಂದೆಲ್ಲ ಕೂಗಾಡಿದವರೆ ಕಂಬಳಿ ಹಾಸಿ, ಅದರ ಮೇಲೆ ಮಲಗಿ ಗೊರಕೆ ಹೊಡೆಯತೊಡಗಿದರು.

ನಿದ್ದೆಯಿಂದೆದ್ದಾಗ ಸಿಟ್ಟು ಇಳಿದಿತ್ತು. ಅವರಿಬ್ಬರೂ ಕೇಳಿದಾಗ ರಾಜಗುರು ಹೇಳಿದರು: "ಗಾಡಿ ಬರಲು ಇನ್ನೂ ಬಹಳ ಸಮಯವಿತ್ತು. ನಿದ್ದೆಯ ಜೋಂಪು ಬರತೊಡಗಿತ್ತು. ಹೇಗೂ ನೀವು ಬರುವುದಕ್ಕೆ ಇನ್ನೂ ಸಾಕಷ್ಟು ಅವಕಾಶವಿದೆ. ಅಲ್ಲಿಯವರೆಗೆ ಒಂದು ಜೋಂಪು ಹೊಡೆಯಬಾರದೇಕೆ ಅಂದುಕೊಂಡೆ. ಸ್ಟೇಶನ್ನಿನ ತುಂಬಾ ಗದ್ದಲ. ಮಲಗಲು ಸ್ಥಳವೂ ಇರಲಿಲ್ಲ. ಹೊರಗೆ ಕಣ್ಣಾಡಿಸಿದಾಗ ಸ್ಟೇಶನ್ನಿನ ಹೊರಗೇ ಇರುವ ಹುಣಸೇ ಮರಗಳ ಅಡಿಯಲ್ಲಿ ಸಂನ್ಯಾಸಿಗಳ ತಂಡ ಬೀಡುಬಿಟ್ಟಿರುವುದು ಕಾಣಿಸಿತು. ನಾನು ಅಲ್ಲಿಗೆ ಹೋಗಿ ಅವರೊಟ್ಟಿಗೇ ಮಲಗಿಕೊಂಡೆ. ಸ್ಟೇಶನ್ನಿನಲ್ಲೆಲ್ಲಾ ಹುಡುಕಾಡಿ ಅಷ್ಟು ಧಾವಂತಪಡುವ ಬದಲು, ಸ್ವಲ್ಪ ಸ್ಟೇಶನ್ನಿನ ಹೊರಗೆ ಕಣ್ಣಾಡಿಸಿದ್ದರೆ ನಾನು ಸಿಕ್ಕೇಬಿಡುತ್ತಿದ್ದೆನಲ್ಲಾ. ಇಷ್ಟಕ್ಕೂ




ನನ್ನೊಬ್ಬನನ್ನೇ ಅಲ್ಲಿಯೇ ಬಿಟ್ಟು ನಿಮಗೆ ಇಲ್ಲಿಗೆ ಬರುವ ಮನಸ್ಸಾದರೂ ಹೇಗಾಯಿತೋ ಏನೋ!"

೧೯೭೦ರಲ್ಲಿ ಚಂದ್ರಶೇಖರ ಆಜಾದರ ಬಗೆಗೆ ನನ್ನಿಂದ ಸ್ವಲ್ಪ ವಿವರ ಸಂಗ್ರಹಿಸಲೆಂದೇ 'ಹಿಂದುಸ್ತಾನ ಸೋಷಿಯಲಿಸ್ಟ್ ರಿಪಬ್ಲಿಕನ್ ಪಾರ್ಟಿ'ಯ ಕಾರ್ಯಕರ್ತೆಯಾದ ಸುಶೀಲಾ ಆಜಾದ್ ಗೋರಖಪುರದಿಂದ ನನ್ನ ಬಳಿ ಬಂದಿದ್ದರು. ಅವರು ಇದ್ದ ಮೂರು ದಿನವೂ ಹಳೆಯ ನೆನಪುಗಳಲ್ಲೇ ಮುಳುಗಿದ್ದರು. ಆ ಮಾತು ಈ ಮಾತು ಆಡುತ್ತಾ ರಾಜಗುರುವಿನ ವಿಷಯ ಬಂದಾಗ ಅವರು ಹೇಳಿದ ಒಂದು ಘಟನೆ ನಿಜಕ್ಕೂ ಎದೆ ನಡುಗಿಸುವಂಥಾದ್ದು. ಅದನ್ನು ಸಾಧ್ಯವಿದ್ದಮಟ್ಟಿಗೆ ಅವರ

ಮಾತುಗಳಲ್ಲೇ ಸಂಗ್ರಹಿಸಿದ್ದೇನೆ:

"ಕ್ರಾಂತಿಕಾರಿಗಳೆಲ್ಲ ಸೇರಿ ಆಗ್ರಾದಲ್ಲಿ ಹಳೆಯ ಮನೆಯೊಂದನ್ನು ಬಾಡಿಗೆ ಹಿಡಿದು ಆಗಾಗ ಗುಪ್ತ ಸಭೆಗಳನ್ನು ನಡೆಸುತ್ತಿದ್ದರು. ಬಹುಶಃ ೧೯೨೮ರಲ್ಲಿ ರಬಹುದು, ಅಣ್ಣ (ಚಂದ್ರಶೇಖರ ಆಜಾದ) ಕ್ರಾಂತಿಕಾರಿಗಳು ಪೊಲೀಸರ ಕೈಗೆ ಸಿಕ್ಕಾಗ ಅವರು ಕ್ರಾಂತಿಕಾರಿಗಳ ಬಾಯಿಬಿಡಿಸಲು ಹೇಗೆ ಆಮಿಷ ಗಳನ್ನೊಡ್ಡುತ್ತಾರೆ; ಅವಕ್ಕೆ ಬಲಿಯಾಗದಿದ್ದಾಗ ಯಾವ ಯಾವ ರೀತಿಯಲ್ಲಿ ಚಿತ್ರಹಿಂಸೆ ನೀಡು ತ್ತಾರೆ ಎಂಬುದನ್ನು ವಿವರಿಸುತ್ತಿದ್ದ.

"ಮನೆಗೆಲಸವನ್ನು ಸರದಿಯ ಪ್ರಕಾರ ಮಾಡು ವುದು ಕ್ರಾಂತಿಕಾರಿಗಳಲ್ಲಿ ಮೊದಲಿನಿಂದ ನಡೆದು ಕೊಂಡು ಬಂದ ಒಂದು ನಿಯಮ. ಆ ದಿನ ಅಡಿಗೆ ಮಾಡುವ ಕೆಲಸ ರಾಜಗುರುವಿಗೆ ಬಿದ್ದಿತ್ತು. ರೊಟ್ಟಿ ಸುಡುತ್ತಾ ಆಜಾದರ ಮಾತುಗಳನ್ನು ಒಂದೇ ಮನಸ್ಸಿನಿಂದ ಕೇಳುತ್ತಿದ್ದ. ಅವನ ಆತ್ಮವಿ ಶ್ವಾಸ ಒಂದಿಷ್ಟು ಕದಡಿದಂತೆನಿಸಿತೋ ಏನೋ, ಅದೆಷ್ಟು ಗಟ್ಟಿಯಾಗಿದೆಯನ್ನುವುದನ್ನು ಪರಿಕ್ಷಿಸಿಕೊ ಳ್ಳಲು ತಟಕ್ಕನೆ ಇಕ್ಕಳದಿಂದ ಒಂದು ಕೆಂಡವನ್ನು ತೆಗೆದು ಏಳು ಕಡೆ ಎದೆಯ ಮೇಲೆ ಒತ್ತಿ ಹಿಡಿದ. ಏಳೂ ಕಡೆಗಳಲ್ಲಿ ಚರ್ಮ ಸುಟ್ಟು ಮಾಂಸ ಹೊರಬಿತ್ತು. ಆದರೆ ವೇದನೆಯ ಒಂದು ಸ್ವರ ಕೂಡ ಅವನ ಮುಖದಿಂದ ಹೊರಡಲಿಲ್ಲ.

"ಆ ರಾತ್ರಿ ಚಂದ್ರಶೇಖರ ಆಜಾದ್ ರಾಜಗು ರುವಿನ ಪಕ್ಕದಲ್ಲೇ ಮಲಗಿದ್ದರು. ನೀರವ ರಾತ್ರಿ ಯಲ್ಲಿ ರಾಜಗುರು ನರಳುತ್ತಿದ್ದುದನ್ನು ಕೇಳಿ ತಟ್ಟನೆ ಎಚ್ಚರವಾದ ಆಜಾದ್ ನೋಡಿದರೆ ನಿದ್ದೆಯಲ್ಲೇ ರಾಜಗುರು ಎದೆಯ ಮೇಲೆ ಕೈಯಾಡಿಸುತ್ತಾ ನರಳುತ್ತಿದ್ದಾರೆ. ಆಜಾದ್ ಅವರನ್ನು ಎಬ್ಬಿಸಿ, 'ಏನಪ್ಪಾ, ಏನಾಯಿತು? ಕನಸೇನಾದರೂ ಬಿತ್ತೇ?' ಎಂದು ಕೇಳಿದಾಗ ರಾಜಗುರು 'ಹೂಂ' ಎಂದಷ್ಟೇ ಉತ್ತರಿಸಿ ಆಚೆ ಬದಿ ಹೊರಳಿ ನಿದ್ರಿಸತೊಡಗಿದರು. ಮತ್ತೆ ಕೆಲ ನಿಮಿಷಗಳ ನಂತರ ನರಳಾಟ ಪ್ರಾರಂಭವಾದಾಗ ಚಂದ್ರಶೇ ಖರ ಆಜಾದ್ ಮತ್ತೆ ಅವರನ್ನೆಬ್ಬಿಸಿ ಕಾರಣ ಕೇಳಿದರು. ರಾಜಗುರು ನುಣುಚಿಕೊಳ್ಳಲು ಯತ್ನಿ ಸಿದಾಗ ಆಜಾದ್ ಅವರ ಮೇಲಿನ ಚಾದರವನ್ನೆ ಳೆದು ನೋಡಿದರೆ ಒಂದಲ್ಲ, ಎರಡಲ್ಲ ಏಳು ಕಡೆ ಸುಟ್ಟಗಾಯಗಳು. ಈಗ ರಾಜಗುರು ಕಾರಣ ಹೇಳಲೇಬೇಕಾಯಿತು: 'ಅಣ್ಣಾ, ನಿನ್ನೆ ನೀನು ಪೊಲೀಸರು ಕೊಡುವ ಹಿಂಸೆಯ ಕುರಿತು ಹೇಳು ತ್ತಿದ್ದುದನ್ನು ಕೇಳುತ್ತಿದ್ದಾಗ, ಅವರು ಎಷ್ಟು ಕಷ್ಟಕೊ ಟ್ಟರೂ ಬಾಯಿಬಿಡದಷ್ಟು ಮನಸ್ಸು ಗಟ್ಟಿಯಾಗಿ ದೆಯೆ? ಎನ್ನುವುದನ್ನು ಪರೀಕ್ಷಿಸಿಕೊಳ್ಳಲು ಕೆಂಡ ವನ್ನು ಒತ್ತಿಕೊಂಡು ನೋಡಿದೆ, 'ಎಂಥಾ ಹುಚ್ಚ ನೀನು! ಹಾಗೇಕೆ ಮಾಡಿದೆ? ನಾನಾಗಲಿ ಇತರ ಯಾರೇ ಆಗಲಿ ನಿನ್ನ ಬಗ್ಗೆ ಸಂಶಯ ವ್ಯಕ್ತಪಡಿಸಿ ದ್ದೆವೆ? ನೀವೆಲ್ಲ ಮಾನಸಿಕ ಸಿದ್ಧತೆ ಮಾಡಿಕೊಳ್ಳಲಿ ಎಂಬ ಉದ್ದೇಶದಿಂದ ನಾನು ಲಾಕಪ್ಪಿನಲ್ಲಿ ಪೊಲೀ ಸರು ಏನೇನು ಮಾಡುತ್ತಾರೆಂಬುದನ್ನು ಮಾತ್ರ ಹೇಳುತ್ತಿದ್ದೆ. ಅದು ಬಿಟ್ಟು ಹೀಗೆ ಗಾಯ ಮಾಡಿ ಕೊಳ್ಳುವುದೆ?' ಎಂದು ಚಂದ್ರಶೇಖರ ಆಜಾದರು ಮನೆವೈದ್ಯ ಮಾಡಿದರು."

ಕಾಲ ಹಾಗೆಯೆ ಸರಿಯುತ್ತಿತ್ತು. ೧೯೩೧ರ ಮಾರ್ಚ್ ೨೩ರಂದು ರಾಜಗುರು, ಸುಖದೇವ ಹಾಗೂ ಭಗತಸಿಂಗರನ್ನು ಗಲ್ಲಿಗೇರಿಸುವುದೆಂದು ನಿರ್ಧರಿಸಲಾಗಿತ್ತು. ಅವರು ನೇಣುಗಂಬವನ್ನೇರು ವುದಕ್ಕಿಂತ ಸ್ವಲ್ಪ ಮೊದಲು ಸುಶೀಲಾ ಆಜಾದ್ ಲಾಹೋರಿನ ಸೆಂಟ್ರಲ್ ಜೈಲಿಗೆ ಕೊನೆಯ ಭೇಟಿ ಗಾಗಿ ಹೋಗಿದ್ದರು. ಅಲ್ಲಿ ರಾಜಗುರುವನ್ನು ನೋಡುತ್ತಲೇ ಗದ್ಗದಿತಳಾಗಿ, "ನನ್ನ ಕೊನೆಯ ಇಚ್ಛೆಯನ್ನು ತೀರಿಸಣ್ಣಾ, ಇಲ್ಲ ಎನ್ನಬೇಡ. ಒಂದೇ ಸಲ ನಿನ್ನ ಎದೆಯ ಗಾಯಗಳನ್ನು ತೋರಿಸು ಸಾಕು," ಅಂದಳು.

ದಪ್ಪ ಎಳೆಯ ಉರುಟುರುಟಾದ ಹಾಫ್ ಪ್ಯಾಂಟ್ ಹಾಗೂ ಅಂಥದೇ ಬಟ್ಟೆಯ ಅರ್ಧ ತೋಳಿನ ಅಂಗಿಯನ್ನು ರಾಜಗುರುವಿಗೆ ತೊಡಿಸ ಲಾಗಿತ್ತು. ತಂಗಿಯ ಮಾತಿಗೆ ಇಲ್ಲವೆನ್ನಲಾಗಲಿಲ್ಲ. ಶರ್ಟಿಗೆ ಹಾಕಿದ ಕಟ್ಟಿಗೆಯ ಬಟನ್ ಬಿಚ್ಚಿ ತೋರಿಸಿದರು. ಗಾಯ ಮಾಯ್ದಿರಲಿಲ್ಲ. ಮಾಂಸ ಏನ್ನೂ ಹಸಿಹಸಿಯಾಗಿಯೇ ಇತ್ತು. ಸುಶೀಲಾ ಆಜಾದ್ ಭಾವಪರವಶರಾಗಿ ಅವುಗಳನ್ನು ನೋಡುತ್ತಾ ನಿಂತುಬಿಟ್ಟರು. ಆಕೆಯ ಕಣ್ಣಿನಿಂದ ನೀರು ಧಾರಾಕಾರವಾಗಿ ಸುರಿಯುತ್ತಿತ್ತು. ●

# ಚಾತುರ್ಯ ಮಾಡಿಕೊಂಡ 'ವಿಚಿತ್ರ' ವಿವಾಹ

**ಈ** ಜಗತ್ತಿನಲ್ಲಿ ಮನುಷ್ಯನ ಮೇಲೆ ಪ್ರಭಾವ ಬೀರುವ ಶಕ್ತಿ ಹೆಣ್ಣಿಗಿರುವಷ್ಟು ಬೇರಾವುದಕ್ಕೂ ಇಲ್ಲವೆನ್ನುವುದು ಅನುಭವಸಿದ್ಧವಾದ ಮಾತು. ಅವಳ ಪ್ರಭಾವದಲ್ಲಿರುವಾಗ ಮನುಷ್ಯನು ಏನು ಮಾಡಲೂ ಹಿಂಜರಿಯುವುದಿಲ್ಲ. ಇದು ಮನುಷ್ಯ ಮಾತ್ರರಿಗೆ ಅನ್ವಯಿಸುವ ಮಾತು ಎಂದು ನೀವು ತಿಳಿದಿದ್ದರೆ ತಪ್ಪು. ಯಾಕಂದರೆ ಶಿವನು ಚಾತುರ್ಯನಿಗಿತ್ತ ವರವು ಪಾರ್ವತಿಯು ಅವನ ಮೇಲೆ ಬೀರಿದ ವರ್ಚಸ್ಸಿನ ಪರಿಣಾಮವೇ ಆಗಿದ್ದಿತು. ತಾನು ಚಾತುರ್ಯನಿಗೆ ವಚನವಿತ್ತುದು ದುಡುಕುತನವಾಯಿತೆಂದು ಶಿವನಿಗೆ ಅನ್ನಿಸದಿರಲಿಲ್ಲ. ಚಾತುರ್ಯನ ವ್ಯವಹಾರದಲ್ಲಿ ತಾನು ತುಂಬ ಆಳವಾಗಿ ಸಿಕ್ಕಿಹಾಕಿಕೊಂಡಂತಾಯಿತೆಂದೂ ಬಗೆದನು.

ಆದರೆ ಸಾಮಾನ್ಯ ಮನುಷ್ಯನಂತೆ ಅದರಲ್ಲಿಯೆ ತೂಕಡಿಸಿ ಹಾರಿಸಿಕೊಂಡು ಪಾರಾಗಿಬಿಡುವ ಮಾರ್ಗವನ್ನು ಹುಡುಕುವವನವನಾಗಿರಲಿಲ್ಲ. ತದ್ವಿರುದ್ಧವಾಗಿ ತಾನಿತ್ತ ಮಾತನ್ನು ಎಂತು ಪೂರೈಸಬೇಕೆಂಬುದರ ಬಗ್ಗೆ ಗಂಭೀರ ವಿಚಾರ ನಡೆಯಿಸಿದನವನು. ದೇವರಿಗೂ ಮನುಷ್ಯರಿಗೂ ಅಂತರ ಇಲ್ಲಿಯೇ ಇದೆ.

ತನ್ನ ಪ್ರೇಯಸಿಗೆ ತನ್ನ ಮನದಲ್ಲಿ ನಡೆದ ಈ ಆಂದೋಲನದ ಕಲ್ಪನೆ ಸಹ ಬಾರದಿರಲೆಂದು ಶಿವನು ಮೇಲೆ ಮೇಲೆ ನಗುನಗುತ್ತ ಪಾರ್ವತಿಯ ಕೈಯಲ್ಲಿ ಕೈ ಹಾಕಿಕೊಂಡು ಹತ್ತಿರದಲ್ಲಿಯೇ ಇದ್ದ ಮುರುಕಲು ಮಠವೊಂದರಲ್ಲಿ ನಡೆದನು.

ತನ್ನ ಪತಿಯ ಮನಸ್ಸಿನಲ್ಲಿ ನಡೆದುದೆಲ್ಲದರ ಅರಿವೂ ಪಾರ್ವತಿಗಿತ್ತು. ಆದರೆ ತನ್ನ ಕೆಲಸವಾಗುವ ವರೆಗೆ ಅಜ್ಞಾನದ ಸೋಗನ್ನೇ ಧರಿಸುವುದು ಒಳಿತೆಂದು ಬಗೆದು ಅವಳು ಏನೂ ಅರಿಯದವಳಂತೆ ಸುಮ್ಮನಿದ್ದಳು.

ಬಹಳ ಆಲೋಚಿಸಿದ ನಂತರ ಶಿವನು ಒಂದು ಸಿರ್ಧಾರಕ್ಕೆ ಬಂದು ಸಂನ್ಯಾಸಿಯ ವೇಷವನ್ನು ಧರಿಸಿದನು. ಯಾಕೆಂದರೆ ದೂರ್ವಾಸ, ವಿಶ್ವಾಮಿತ್ರರ ಕಾಲದಿಂದಲೂ ಸಂನ್ಯಾಸಿಗಳಿಗೆ ಅರಸರಿಂದ ಸಾಮಾನ್ಯರ ವರೆಗೆ ಎಲ್ಲರಲ್ಲೂ ಮಹತ್ವ, ಗೌರವ ಪ್ರಾಪ್ತವಾಗಿದೆ. ಜಟಾಧಾರಿಯಾದ ಶಿವನು ಭಸ್ಮಭೂಷಿತನಾಗಿ ವ್ಯಾಘ್ರ ಚರ್ಮವನ್ನು ದೇಹಕ್ಕೆ ಸುತ್ತಿಕೊಂಡು ದಂಡಕಮಂಡಲಧಾರಿಯಾಗಿ ಮಹಾಯೋಗಿಗೊಪ್ಪುವ ಗಾಂಭೀರ್ಯದಿಂದ ನಂದಿ ಹಾಗೂ ಪಾರ್ವತಿಯರನ್ನು ಅಲ್ಲಿಯೇ ಬಿಟ್ಟು ಅರಮನೆಯೆಡೆಗೆ ನಡೆದನು.

ಅವನ ಪಾದುಕೆಗಳು ಅರಮನೆಯ ಅಮೃತಶಿಲೆಯ ನೆಲದ ಮಡುತ್ತಿದ್ದ ಟಕ್ ಟಕ್ ಶಬ್ದಗಳನ್ನು ಕೇಳಿ ಸೇವಕರು ಎಚ್ಚೆತ್ತರು. ಶಾಂತ, ಗಂಭೀರ ಮುಖಮುದ್ರೆಯುಳ್ಳ ಈ ಸಂನ್ಯಾಸಿ ಮುಂದೆ ಮುಂದೆ ಹೋದಂತೆ ಸೇವಕರು ತಲೆಬಾಗಿ ಬಾಗಿಲು ತೆರೆದು ದಾರಿಮಾಡಿಕೊಡುತ್ತಿದ್ದರು. ಹಲವಾರು ಬಾಗಿಲುಗಳನ್ನು ದಾಟಿ ಸಿಂಹಾಸನದೆದುರಿಗೆ ಹೋಗಿ ನಿಂತಾಗ ಅರಸನು ಭರದಿಂದಿಳಿದು ಬಂದು ನಮಸ್ಕರಿಸಿ ಅಭಿವಾದನೆಗಳನ್ನು ಸಲ್ಲಿಸಿದ ನಂತರ ಪರಸ್ಪರ ಕ್ಷೇಮಸಮಾಚಾರ ವಿಚಾರ ವಿನಿಮಯವಾಯಿತು. ಅನಂತರ ಅರಸ

ಥಿಯನ್ನು ಕುರಿತು, "ಮಹಾಸ್ವಾಮಿ, ತಮ್ಮ ಆಗ ಮನದಿಂದ ನಾನು ಪುನೀತನಾದೆನು. ಯಾವುದೇ ರೀತಿ ನನ್ನಿಂದ ತಮ್ಮ ಸೇವೆಯಾಗಬೇಕೆಂದಿದ್ದರೆ ಅಪ್ಪಣೆಯಾಗಬೇಕು," ಎಂದು ಕೇಳಿದನು.

"ರಾಜಶೇಖರ, ನಿನ್ನಲ್ಲಿಗೆ ನಾನು ಬಂದಿರುವುದಕ್ಕೆ ಅಂಥ ವಿಶಿಷ್ಟಕಾರಣ ಯಾವುದೂ ಇಲ್ಲ. ಇಂದು ಭೋಜನವಾದರೆ ಸಾಕು."

"ಇಂದು ಮಾತ್ರವಲ್ಲ. ತಾವಿಲ್ಲಿ ಇರುವವರೆಗೂ ನನ್ನ ಆತಿಥ್ಯ ಸ್ವೀಕರಿಸಬೇಕು."

ಕೂಡಲೇ ಅರಸನು ತನ್ನ ಅತಿಥಿಯನ್ನು ಶ್ರೇಷ್ಠ ಅತಿಥಿಗಳಿಗಾಗಿಯೇ ಎಂದಿದ್ದ ಕೋಣೆಗೆ ಕರೆದೊಯ್ದು ಅವನ ಸೇವೆಗೆ ಬೇಕಾದ ವ್ಯವಸ್ಥೆಯನ್ನೆಲ್ಲ ಸ್ವತಃ ಮಾಡಿದನು. ಅತಿಥಿಗೆ ಭಕ್ಷ್ಯಯೋಗ್ಯವಾದ ಭೋಜ್ಯಗಳನ್ನು ಸಿದ್ಧಪಡಿಸಲು ವಿಶೇಷ ಅಡಿಗೆಯವರನ್ನು ನಿಯಮಿಸಿದನು.

ನಂತರ ಅಂದಿನ ಸಂಪ್ರದಾಯಕ್ಕನುಸಾರವಾಗಿ ಮಹರ್ಷಿಯ ಭೋಜನ ಸಮಯದಲ್ಲಿ ಬಡಿಸಲು ತಾನೇ ನಿಂತುಕೊಂಡನು.

ಊಟಕ್ಕೆ ಮೊದಲು ಅತಿಥಿಯು ರಾಜನಿಗೆ, "ರಾಜಶೇಖರ, ನಿನ್ನ ಪುತ್ರರನ್ನು ಕರೆ," ಎಂದು ಹೇಳಿದನು.

ಅದರಿಂದೊಂದು ಕ್ಷಣ ಅರಸನು ಅವಾಕ್ಕಾದನು. ಅಲ್ಲದೆ ತನಗೆ ಪುತ್ರ ಸಂತಾನವಿಲ್ಲದಿದ್ದುದಕ್ಕಾಗಿ ಅವನಿಗೆ ದುಃಖವೂ ಆಯಿತು. ಆದರೂ ಮರುಕ್ಷಣದಲ್ಲಿ ಸಾವರಿಸಿಕೊಂಡು, "ಮಹಾಸ್ವಾಮಿ, ನನಗೆ ಪುತ್ರ ಸಂತಾನದ ಅನುಗ್ರಹವಾಗಿಲ್ಲ, ಆದರೆ ಇಬ್ಬರು ಕುಮಾರಿಯರಿದ್ದಾರೆ," ಎಂದು ಹೇಳಿದನು.

"ಹೀಗೋ? ಸರಿ. ಹಾಗಾದರೆ ಅವರನ್ನಾದರೂ ಕರೆಯಬಹುದೆ?"

ಒಡನೆಯೆ ಅರಸನು ತನ್ನ ಪುತ್ರಿಯರನ್ನು ಕರೆಯಲು ಸೇವಕರನ್ನು ಕಳಿಸಿದನು. ಕೆಲ ಕ್ಷಣಗಳಲ್ಲಿಯೆ ಅವರು ಬಂದು ಮಹರ್ಷಿಯ ಎದುರು ನಿಂತು ಬಾಗಿ ನಮಸ್ಕರಿಸಿದರು.

"ರಾಜಶೇಖರ, ನೀನು ಬಹಳ ಸುದೈವಿಯೆ ಎನ್ನಬೇಕು. ಮಕ್ಕಳಿಬ್ಬರೂ ತುಂಬ ಸುಲಕ್ಷಣವಾಗಿದ್ದಾರೆ," ಮಹರ್ಷಿ ನುಡಿದನು. ಹೀಗೆಂದು ಅವನು ಅವರಿಬ್ಬರ ಹಣೆಗೆ ಭಸ್ಮ ಲೇಪಿಸಿ, "ಆಗಲೇ ಇಬ್ಬರೂ ಸೌಭಾಗ್ಯವತಿಯರಾಗಿರುವರಷ್ಟೆ?" ಎಂದು ಸಹಜವಾಗಿ ವಿಚಾರಿಸಿದನು.

"ಇನ್ನೂ ಇಲ್ಲ, ಮಹಾಸ್ವಾಮಿ!" ಅರಸನ ಧ್ವನಿಯಲ್ಲಿ ದುಗುಡವಿತ್ತು.

ಈ ಶಬ್ದಗಳು ಕಿವಿಗೆ ಬೀಳುವುದೊಂದೇ ತಡ, ಮಹರ್ಷಿಯ ಮುಖಚರ್ಯೆಯೇ ಬದಲಾಯಿತು. ಕುಪಿತನಾದ ಅವನು, "ಇಷ್ಟೊಂದು ಬೆಳೆದು ನಿಂತಿದ್ದರೂ ವಿವಾಹವಾಗಿಲ್ಲ! ನಿನ್ನಂಥ ಪಾಪಿಯ ಆತಿಥ್ಯವನ್ನು ಸ್ವೀಕರಿಸಿದ್ದಕ್ಕಾಗಿ ನನಗೆ ಪಶ್ಚಾತ್ತಾಪವಾಗುತ್ತಿದೆ," ಎಂದವನೇ ಅಲ್ಲಿಯೇ ಅಂತರ್ಧಾನನಾದನು.

ಅರಸನ ಮನಸ್ಸಿನ ಮೇಲೆ ಈ ಘಟನೆ ಅಪಾರ ಪರಿಣಾಮವನ್ನುಂಟು ಮಾಡಿತು. ಈ ರೀತಿ ತನ್ನ ಆದರಾತಿಥ್ಯವನ್ನು ತಿರಸ್ಕರಿಸಿ ಹೋದವನು ಮಹಾದೇವ ಶಂಕರನೇ ಎಂದು ಅವನಿಗೆ ಹೊಳೆಯಿತು. ತನ್ನ ಪುತ್ರಿಯರನ್ನಪೇಕ್ಷಿಸಿ ಬಂದ ವಿವಾಹಾಪೇಕ್ಷಿ ತರುಣರನ್ನೆಲ್ಲ ತಾನು ಕೊಲ್ಲಿಸಿದುದಕ್ಕೆ ಇದು ದೇವರು ತನಗೆ ಮಾಡಿದ ಶಿಕ್ಷೆಯೆಂದು ಅವನು ಬಗೆದನು.

ಆಗವನು ತನ್ನ ಮೂಢತನಕ್ಕಾಗಿ ತನ್ನನ್ನೇ ಹಳಿದುಕೊಂಡು ತಾನು ಕಂಡ ಪ್ರಥಮ ರಾಜಕುಮಾರನೊಂದಿಗೆಯೇ ತನ್ನ ಪುತ್ರಿಯರ ಮದುವೆಯನ್ನು ನೆರವೇರಿಸಿ ಬಿಡಬೇಕೆಂದು ನಿರ್ಧರಿಸಿದನು.

ಕೂಡಲೇ ತನ್ನ ಮಂತ್ರಿಯನ್ನು ಕರೆಸಿ ಇಡೀ ನಗರವನ್ನೇ ಶೋಧಿಸಿ, ಅಲ್ಲಿ ಯಾರಾದರೂ ರಾಜಕುಮಾರರು ಸಿಕ್ಕರೆ ತಕ್ಷಣ ಕರೆತರಬೇಕೆಂದೂ ಅವಶ್ಯ ಬಿದ್ದರೆ ಬಲಪ್ರಯೋಗವನ್ನು ಮಾಡಬಹುದೆಂದೂ ಆಜ್ಞಾಪಿಸಿದನು.

ನಂತರ ರಾಜಜ್ಯೋತಿಷಿಗಳನ್ನು ಬರಮಾಡಿಕೊಂಡು ಶೀಘ್ರದಲ್ಲಿಯೇ ವಿವಾಹಮುಹೂರ್ತ ತೆಗೆದುಕೊಡಬೇಕೆಂದು ಕೇಳಿಕೊಂಡನು.

ಇತ್ತ ಜ್ಯೋತಿಷಿಗಳು ಮುಹೂರ್ತ ನಿಶ್ಚಯಿಸುವಲ್ಲಿ ಮಗ್ನರಾದರೆ ಅತ್ತ ರಾಜಸೇವಕರು ನಗರದಲ್ಲೆಲ್ಲ ರಾಜಕುಮಾರರು ಯಾರಾದರೂ ಸಿಕ್ಕುವರೋ ಎಂದು ಶೋಧವನ್ನಾರಂಭಿಸಿದ್ದರು.

ಶಿವನು ಹಾಳುಮಠಕ್ಕೆ ಮರಳಿ ಬಂದು ಅರ

ಮನೆಯಲ್ಲಿ ತಾನು ಮಾಡಿಬಂದ ಸಾಹಸವನ್ನು ಪಾರ್ವತಿಗೆ ವಿವರಿಸಿದನು. ಅದರಿಂದ ಅವಳು ತುಂಬ ಸಂತುಷ್ಟಳಾದಳು.

ನಗರದಲ್ಲೆಲ್ಲ ನಡೆದ ಶೋಧವು ಶಿವನಿಗೆ ವೇದ್ಯವಾದೊಡನೆಯೆ ಚಾತುರ್ಯನಿಗೆ ಕೂಡಲೇ ಸಂಜ್ಞೆ ಮಾಡಬೇಕೆಂದುಕೊಂಡು ಗಂಟೆಯನ್ನು ಬಾರಿಸಿದನು. ಅದು ಚಾತುರ್ಯನೊಬ್ಬನಿಗೆ ಮಾತ್ರ ಕೇಳಿಸಿತು.

ಘಂಟಾನಾದವು ಕೇಳಿಸಿದೊಡನೆಯೇ ಚಾತುರ್ಯನಿಗೆ ಆಶ್ಚರ್ಯವೇ ಆಯಿತು. ಯಾಕೆಂದರೆ ಇಷ್ಟೊಂದು ಅಲ್ಪ ಸಮಯದಲ್ಲಿ ಅದು ಸಂಭವಿಸಬಹುದೆಂದು ಅವನು ತಿಳಿದಿರಲಿಲ್ಲ. ಆದರೂ ಅವನಿಗದರಿಂದ ಆನಂದವಾಗಿತ್ತು. ಮನದಲ್ಲಿಯೇ ಶಿವನನ್ನು ವಂದಿಸಿ ಅವನು ರಾಜಯೋಗ್ಯವಾದ ಪೋಷಾಕನ್ನು ಧರಿಸಿ ನಗರದ ಮುಖ್ಯ ಬೀದಿಯೆಡೆಗೆ ನಡೆದನು.

ಅಲ್ಲಿ ಅವನು ನಿರೀಕ್ಷಿಸಿದಂತೆಯೇ ಎಲ್ಲವೂ ನಡೆಯಿತು. ಅವನನ್ನು ಕಂಡೊಡನೆಯೆ ರಾಜಸೇ



ವಕರು ಮುತ್ತಿಬಿಟ್ಟರು. ತನಗೇನೂ ತಿಳಿಯದವನಂತೆ ಅವನು ಅವರಿಂದ ಬಿಡಿಸಿಕೊಂಡು ಹೊರಟನು. ಆದರೂ ಅವರು ಅವನನ್ನು ತಡೆದು, "ಸ್ವಾಮಿ, ತಾವು ರಾಜಕುಮಾರರಲ್ಲವೆ?" ಎಂದು ಕೇಳಿದರು.

"ಹೌದು; ಆದರೆ ನನ್ನಿಂದೇನಾಗಬೇಕು?"

"ಮಹತ್ವದ ಕಾರ್ಯವೊಂದಕ್ಕಾಗಿ ನಮ್ಮ ಮಹಾರಾಜರು ತಮ್ಮನ್ನು ಕಾಣಬಯಸಿದ್ದಾರೆ."

"ಆದರೆ ನಿಮ್ಮ ಅರಸರ ಹತ್ತಿರ ನನಗೆ ಯಾವ ಕೆಲಸವೂ ಇಲ್ಲವಲ್ಲ. ಇಲ್ಲಿಗೆ ನಾನು ನನ್ನ ಖಾಸಗಿ ಕೆಲಸಕ್ಕಾಗಿ ಬಂದಿರುವೆ. ಅಂತೆಯೆ ನಾನು ರಾಜಕಾರ್ಯದಲ್ಲಿ ಭಾಗವಹಿಸಲಾರೆ. ನನಗೆ ಆಮಂತ್ರಣವಿತ್ತುದಕ್ಕಾಗಿ ನಿಮ್ಮ ಅರಸರಿಗೆ ನಾನು ಕೃತಜ್ಞನೆಂದು ತಿಳಿಸಿರಿ. ಆದರೆ ನನಗೆ ಅಲ್ಲಿಗೆ ಬರಲಾಗುವುದಿಲ್ಲ."

"ಇಲ್ಲ ಸ್ವಾಮಿ, ಕೆಲಸ ತುಂಬ ಮಹತ್ವದ್ದಿದೆ. ಅವಶ್ಯ ಬಿದ್ದರೆ ಬಲಪ್ರಯೋಗ ಮಾಡಲೂ ನಮಗೆ ಅಪ್ಪಣೆಯಾಗಿದೆ!"

"ಹೀಗೋ! ಹಾಗಿದ್ದರೆ ನನ್ನ ಸತ್ವ ಪರೀಕ್ಷೆಯಾಗಲಿ!" ಎಂದು ಚಾತುರ್ಯನು ತನ್ನ ಕತ್ತಿಯನ್ನು ಹಿರಿದನು.

ಅರಮನೆಯ ಹತ್ತಿರವೇ ಇದೆಲ್ಲ ನಡೆದಿತ್ತು. ಸುದೈವದಿಂದ ಅರಸನು ಕಿಟಕಿಯಲ್ಲಿ ನಿಂತು ನೋಡುತ್ತಿದ್ದವನು ತಾನೇ ಸ್ವತಃ ಅಲ್ಲಿಗೆ ಬರುವದಾಗಿ ಹೇಳಿ ಕಳಿಸಿದನು. ಅದರಿಂದ ಚಾತುರ್ಯನಿಗೆ ಅಂತರಂಗದಲ್ಲಿ ಆನಂದವಾದರೂ ತೋರಿಕೆಗೆ ಮುಖ ಗಂಟು ಹಾಕಿಕೊಂಡೇ ನಿಂತಿದ್ದನು.

ಕೆಲ ನಿಮಿಷಗಳಲ್ಲಿಯೆ ನೆರೆದ ಜನಜಂಗುಳಿಯು ಸರಿದು ಅರಸನಿಗೆ ದಾರಿ ಮಾಡಿಕೊಟ್ಟಿತು. ಸಕಲ ರಾಜ ಮರ್ಯಾದೆಗಳೊಂದಿಗೆ ಬಂದ ಅರಸನು ಅತ್ಯಂತ ವಿನಮ್ರ ಧ್ವನಿಯಲ್ಲಿ ಚಾತುರ್ಯನಿಗೆ ತನ್ನ ಕುವರಿಯರನ್ನು ಅವನಿಗೆ ಧಾರೆಯೆರೆದುಕೊಡಬೇಕೆಂಬ ತನ್ನ ಮನೀಷೆಯನ್ನು ಅರುಹಿ, ಅವರನ್ನು ಸ್ವೀಕರಿಸಬೇಕೆಂದು ಕೇಳಿಕೊಂಡನಲ್ಲದೆ ತನ್ನ ಸೇವಕರು ಅವನೊಂದಿಗೆ ಸರಿಯಾಗಿ ನಡೆದುಕೊಳ್ಳದಿದ್ದುದಕ್ಕಾಗಿ ಕ್ಷಮಿಸಬೇಕೆಂದು ಬಿನ್ನವಿಸಿದನು.

ಈ ಶಬ್ದಗಳು ಕಿವಿಗೆ ಬಿದ್ದೊಡನೆಯೆ ಚಾತುರ್ಯನು ಆಕಾಶದೆಡೆ ಮುಖಮಾಡಿ ಕರುಣಾಮಯಿಯಾದ ದೇವರಿಗೆ ಕೃತಜ್ಞತೆಯನ್ನು ಮನದಲ್ಲಿಯೇ ಸಲ್ಲಿಸಿದನು. ಆದರೆ ಹೊರಗೆ ಮಾತ್ರ ತನ್ನ ಮನಸ್ಸಿನಲ್ಲಾದ ಆನಂದವನ್ನು ತೋರಗೊಡದೆಯೇ, "ಮಹಾರಾಜರು ನನ್ನನ್ನು ಕ್ಷಮಿಸಬೇಕು. ಯಾಕೆಂದರೆ ತಮ್ಮ ಕೇಳಿಕೆಯಿಂದ ನನಗೆ ತುಂಬ ಆಶ್ಚರ್ಯವಾದಂತೆಯೆ ಭಯವೂ ಎನಿಸುತ್ತಿದೆ. ಯಾಕೆಂದರೆ ಇದುವರೆಗೆ ತಮ್ಮ ಪುತ್ರಿಯರನ್ನು ವಿವಾಹವಾಗಬಯಸಿ ಬಂದವರ ಗತಿಯೇನಾಗಿದೆಯೆಂದು ನನಗೆ ತಿಳಿದಿದೆ. ಅದನ್ನು ನೆನೆದರೆ ಮೈಯಲ್ಲಿ ನಡುಕ ಹುಟ್ಟುತ್ತದೆ. ಆದುದರಿಂದ ದಯವಿಟ್ಟು ನನ್ನಷ್ಟಕ್ಕೆ ನನ್ನನ್ನು ಬಿಟ್ಟರೆ ತುಂಬ ಉಪಕಾರವಾಗುತ್ತದೆ," ಎಂದನು.

ಅರಸನಿಗೆ ನಾಚಿಕೆಯಿಂದ ತಲೆ ತಗ್ಗಿಸುವಂತಾಯಿತು. ಆದರೆ ಅಶ್ರುದುಂಬಿದ ಕಣ್ಣುಗಳಿಂದಲೇ, "ನೀವು ನುಡಿದದ್ದು ನಿಜವಿದೆ, ನಾನು ಈ ಮೊದಲು ಮೂರ್ಖನಂತೆ ವರ್ತಿಸಿದ್ದು ನಿಜ. ಆದರೆ ದೇವರು ಈಗ ನನ್ನ ಕಣ್ಣುತೆರೆಸಿದ್ದಾನೆ. ನಿಮ್ಮ ಕೂದಲೆಳೆಗೂ ಧಕ್ಕೆಯಾಗದಂತೆ ನಾನು ಅಭಯವೀಯುತ್ತೇನೆ. ದಯವಿಟ್ಟು ನನ್ನನ್ನು ನಂಬಿರಿ," ಎಂದು ಅಂಗಲಾಚಿದನು.

ಅದರಿಂದ ಚಾತುರ್ಯನು ಸಂತುಷ್ಟನಾದನಾದರೂ ತನ್ನ ದೇಶದ ಸಂಪ್ರದಾಯಗಳಂತೆಯೇ ವಿವಾಹ ನೆರವೇರಬೇಕೆಂದು ಕರಾರು ಹಾಕಿದನು. ಅರಸನು ಅದಕ್ಕೂ ಒಪ್ಪಿದನು. ನಂತರ ರಾಜಮನ್ನಣೆಯೊಂದಿಗೆ ಅವನನ್ನು ಅರಮನೆಗೆ ಕರೆತರಲಾಯಿತು.

ಅರಮನೆಯಲ್ಲಿರುವಾಗ ಸಕಲ ರಾಜ ಪರಿವಾರವೂ ಅವನ ಸೇವೆಗೇ ಸಿದ್ಧವಾದಂತಿತ್ತು. ಅವನು ಅತ್ತಿತ್ತ ಓಡಾಡುವಾಗ ರಾಣೀವಾಸದಲ್ಲಿನ ಯುವತಿಯರು ಬಾಗಿಲು, ಕಿಟಕಿಯ ಸಂದುಗಳೊಳಗಿಂದ ಅವನನ್ನು ನೋಡುತ್ತ ಹಾಸ್ಯದ ನುಡಿಗಳನ್ನಾಡುತ್ತಿದ್ದರು. ಆದರೆ ಚಾತುರ್ಯನಿಗೆ ಇದಾವುದರಿಂದಲೂ ಆನಂದವಾಗುತ್ತಿರಲಿಲ್ಲ. ತಾನಿಲ್ಲಿ ಬಂದುದು ಮದುವೆಯಾಗುವದಕ್ಕಲ್ಲ, ತನ್ನ

ಕರ್ತವ್ಯ ತನ್ನ ಮಿತ್ರನ ಇಚ್ಛೆಯನ್ನು ಪೂರೈಸುವುದು ಎಂಬುದು ಅವನ ಮನಸ್ಸಿನಲ್ಲಿ ಮೇಲಿಂದ ಮೇಲೆ ಅಳುಕುತ್ತಿತ್ತು. ಅರಮನೆಯಲ್ಲಿ ಅವನಿಗೆ ಮುಳ್ಳ ಮೇಲೆ ನಡೆದಂತೆಯೇ ಅನಿಸುತ್ತಿತ್ತು.

ಮದುವೆಯ ದಿನ ಸಮೀಪಿಸಿದಂತೆ ಭೀಮಪುರಿಯು ಭರದಿಂದ ಸಿಂಗರಿಸಲ್ಪಟ್ಟು ಬರಲಿರುವ ಶುಭ ಉತ್ಸವಕ್ಕಾಗಿ ಸಿದ್ಧವಾಗಹತ್ತಿತು. ಅತಿಥಿಗಳು ಅರಮನೆಗೆ ಬರಲಾರಂಭಿಸಿದರು.

ಮದುವೆಯ ದಿನ ಮದುಮಕ್ಕಳು ವೇದ ಘೋಷಗಳ ಮಧ್ಯದಲ್ಲಿ ಸಿಂಗರಿಸಲ್ಪಟ್ಟ ಮದುವೆಯ ಮಂಟಪಕ್ಕೆ ಆಗಮಿಸಿದರು. ಊರಿಗೆ ಊರೇ ಅಂದು ಆನಂದ ಸಾಗರದಲ್ಲಿ ತೇಲಾಡುತ್ತಿತ್ತು. ಮಾಂಗಲ್ಯ ಧಾರಣದ ಸಮಯ ಬಂದಾಗ ರಾಜಪುರೋಹಿತನು ಮಂಗಲ ಸೂತ್ರಗಳನ್ನು ಚಾತುರ್ಯನ ಕೈಗಿತ್ತನು. ಆಗ ಅವನು, "ನಮ್ಮ ದೇಶದಲ್ಲಿ ಮಂಗಲಸೂತ್ರವನ್ನು ಮದುಮಗನು ಕಟ್ಟುವದಿಲ್ಲ. ಬ್ರಾಹ್ಮಣ ಸುಮಂಗಲಿಯರು ಕಟ್ಟುತ್ತಾರೆ," ಎಂದು ಹೇಳಿ, "ದಯವಿಟ್ಟು ಈಗಲೂ ಹಾಗೆಯೇ ಮಾಡುವಿರಾ?" ಎಂದು ಕೇಳಿದನು.

ಅರಸನು ಮೊದಲೇ ಮಾತು ಕೊಟ್ಟುದರಿಂದ ಹಾಗೆಯೇ ಮಾಡಬೇಕಾಯಿತು. ಕನ್ಯೆಯರಿಬ್ಬರೂ ತಮ್ಮ 'ಪತಿ'ಯನ್ನು ಕಳ್ಳಗಣ್ಣಿನಿಂದ ನೋಡಿ ನಲಿದರು. ಆದರೆ ಚಾತುರ್ಯನ ಹೃದಯ ಮಾತ್ರ ಭಾರವಾಗಿತ್ತು.

ಸಮಾರಂಭ ಅತ್ಯಂತ ವೈಭವದಿಂದ ನಡೆದು ಮುಗಿದು ಮೇಲೆ ಅರಸನ ಬೇಸಿಗೆಯ ನಿವಾಸವು ಮದುಮಕ್ಕಳ ವಿಹಾರಕ್ಕೆ ತಕ್ಕಂತೆ ದೇವೇಂದ್ರನ ಅರಮನೆಯಂತೆ ಕಂಗೊಳಿಸಲಾರಂಭಿಸಿತು.

ಮದುವೆ ಮುಗಿದ ಐದನೆಯ ದಿನ ಅಲ್ಲಿ ಗರ್ಭಾಧಾನ ಸಮಾರಂಭ ನಡೆಯುವುದೆಂದು ನಿಶ್ಚಿತವಾಗಿ ಧಾರ್ಮಿಕ ವಿಧಿಗಳೆಲ್ಲ ಮುಗಿದವು.

ರಾತ್ರಿ ಅಪ್ಸರೆಯರಂತೆ ಭೂಷಿತರಾದ ಸೋದರಿಯರಿಬ್ಬರೂ ಕೋಣೆಯಲ್ಲಿ ಬಂದು ಕಿಟಕಿಯ ಹೊರನಿಂತಾಗ ಚಾತುರ್ಯ ಮಂಚದ ಮೇಲೆ ಹಂಸತೂಲಿಕಾ ಶಯ್ಯೆಯ ಮೇಲೆ ಮಲಗಿ ಗಾಢವಾಗಿ ನಿದ್ರಿಸುತ್ತಿದ್ದನು. ●

(ಮುಂದಿನ ಸಂಚಿಕೆ ನೋಡಿ)

## ಜಿಗುಪ್ಸೆ

ನೀನು
ಕಷ್ಟದಲಿರುವೆಯೆಂದು
ಸುಳ್ಳು ಸುದ್ದಿಯನೇ
ಕಳಿಸಿ ಬಿಡು !
ಮುದಿರೆಯಿಂದ
ಮತ್ತೇರದೀಗ
ಒಂದಿಷ್ಟು ವಿಷವನೇ
ಕಳಿಸಿ ಬಿಡು !!

● ಶಿವಾನಂದ ಕೂಡಗಿ



# ಶಹರದ ದೀಪಗಳು



ಈ ಶಹರದ ದೀಪಗಳು
ನಾವು ತಿಳಿದಂತೆ ನಿರ್ಲಿಪ್ತವಲ್ಲ
ಏಕೆಂದರೆ,
ತಮ್ಮ ಬಂಗಾರದ ಬೆಳಕಿನಲ್ಲಿ ಇವು
ಕೈ ಕೈ ಹಿಡಿದು ಚಲಿಸುವ ಪ್ರೇಮಿಗಳ ಕನಸಿನ ಲೋಕದ
ಬಣ್ಣಗಳನ್ನೆಲ್ಲಾ ಕಂಡಂತೆ,
ದಿಕ್ಕು ತಪ್ಪಿದ, ಹೃದಯ ಬರಡಾದ; ಏಕಾಂಗಿಯ
ಕಾರ್ಗತ್ತಲನ್ನೂ ದಿಟ್ಟಿಸಿವೆ ನಿಟ್ಟುಸಿರನ್ನೂ ಕೇಳಿವೆ.
ಸುರಿ ಮಳೆಯಲ್ಲೂ ಕಂಗೆಡದೆ ಸುಗ್ಗುವ
ಗಣಪತಿ ಉತ್ಸವವನ್ನೂ, ಹೆಣದ ಮೆರವಣಿಗೆಯನ್ನೂ
ಕಂಡಂತೆ,
ಅದೇ ಮಳೆಯಲ್ಲಿ ಅನಾಥ ಶವಗಳು ಕೇಳುವರಿಲ್ಲದೆ
ದಿನಗಟ್ಟಲೆ ತೋಯ್ಯುವುದನ್ನೂ ಕಂಡಿವೆ.
ಬಣ್ಣ ಬಣ್ಣದ ಕಾರುಗಳೆಲ್ಲಾ ರಸ್ತೆಯಲ್ಲಿ
ಕಾಮನಬಿಲ್ಲು ಮೂಡಿಸಿದ್ದನ್ನು ಕಂಡಂತೆ
ಅನಾಥ ಶಿಶುಗಳು, ಭಿಕಾರಿಗಳು ಬಿಕ್ಷುಕರು
ಆಸರೆ ಇಲ್ಲದೆ, ನಡುಗುತ್ತಾ ದೀಪದ ಕಂಬಕ್ಕೇ
ಒರಗಿದ್ದನ್ನು ಕಂಡಿವೆ.
ಬಹುಶಃ ಇದಕ್ಕೇ ಇರಬೇಕು
ಅವು ಆಗಾಗ ಆರಿ ಹೋಗುತ್ತವೆ.
ಅಥವಾ ಮಂದಬೆಳಕನ್ನು ನೀಡುತ್ತವೆ.

• ಎಂ. ಆರ್. ದತ್ತಾತ್ರಿ

## ೧೫ ವಿಡಂಬನಾತ್ಮಕ ಮಿನಿ ಕಥೆಗಳು

ಈ ಸಲ ನಿಮಗೆ ವಿಭಿನ್ನ ರೀತಿಯ ಮಿನಿ ಕಥೆಗಳನ್ನು ನೀಡುತ್ತಿದ್ದೇವೆ.

ಹಿಂದಿ, ಬಂಗಾಲಿ ಭಾಷೆಯಲ್ಲಿ ಈ ಪ್ರಕಾರದಲ್ಲಿ ಸಿದ್ಧಹಸ್ತರಾದ ೧೫ ಜನರ ವಿಡಂಬನಾತ್ಮಕ ಸೃಷ್ಟಿಗಳಿವು. ಈಗಾಗಲೇ 'ಕಥಾಮೋದಕ,' 'ಕನ್ನಡ ಮಿನಿ ಕಥೆಗಳು' ಮುಂತಾಗಿ ಕಿರುಗಥೆಯ ಕಲ್ಲು ಸಕ್ಕರೆಯನ್ನು ಮೆದ್ದಿರುವ ನೀವು ಇವನ್ನೂ ಮೆಚ್ಚುತ್ತೀರೆಂಬ ಭರವಸೆ ನಮ್ಮದು.

● ಸಂಪಾದಕ

# ಭಾವೀ ರಾಜಕಾರಣಿ

● ಪುಷ್ಪಾರಾಣಿ ಮುಂದಡಾ



ಬಸ್ ಸ್ಟಾಪಿನಲ್ಲಿ ಶೆಡ್ಡಿನ ಕಂಬಕ್ಕೊರಗಿ ನಿಂತಿದ್ದ ಆತ ಕೂಗಿ ಕೂಗಿ ಪತ್ರಿಕೆಯನ್ನು ಮಾರುತ್ತಲಿದ್ದ. ಬಸ್ಸು ಬರಲು ಇನ್ನೂ ತಡವಿತ್ತು. ಆತನಿಂದ ಒಂದು ಪತ್ರಿಕೆ ಕೊಂಡು ರೂಪಾಯಿಯನ್ನೀಯುತ್ತ ಒಬ್ಬ ಮಹಾಶಯ ಕೇಳಿದ-

"ಏನಪ್ಪಾ, ದಿನಕ್ಕೆಷ್ಟು ಉಳೀತದೆ?"

"ಏನೂ ಉಳಿಯೋದಿಲ್ಲ ಸರ್. ನಾನು ಆ ಕೂಟಿನಲ್ಲಿರೋ ಅಂಗಡಿಯಿಂದ ರೂಪಾಯಿಗೊಂದರಂತೆ ಪತ್ರಿಕೆ ಖರೀದಿಸುತ್ತೇನೆ. ಅವು ಮಾರಾಟವಾದ ಮೇಲೆ ಅದೇ ಹಣದಿಂದ ಮತ್ತಿಷ್ಟು ಪತ್ರಿಕೆ ಕೊಳ್ಳುತ್ತೇನೆ."

"ಎಂಥಾ ಹುಚ್ಚನೋ ನೀನು? ಅಲ್ಲಾ, ಒಂದು ರೂಪಾಯಿಗೆ ಕೊಂಡ ಪತ್ರಿಕೆಯನ್ನು ಅಷ್ಟಕ್ಕೇ ಮಾರುತ್ತೀಯಲ್ಲ.... ಏನನ್ನಬೇಕು? ಇದರಿಂದ ನಿನಗೇನು ಸಿಕ್ಕತ್ತೊ....?"

"ಆನಂದ."

"ಏನಂದಿ?"

"ಹೌದು ಸರ್. ಜೋರಾಗಿ ಕೂಗೋದ್ರಲ್ಲಿ ನನಗೆ ಅದೇನೋ ಒಂದು ರೀತಿ ಆನಂದ ಸಿಕ್ಕುತ್ತದೆ."

"ಪರವಾಗಿಲ್ಲ. ನೀನು ಮುಂದೊಂದು ದಿನ ಪುಢಾರಿಯಾಗುತ್ತೀ ಬಿಡು," ಎನ್ನುತ್ತ ಆ ಮಹಾಶಯರು ಅಲ್ಲಿಂದ ಕಾಲು ಕಿತ್ತರು. ●

## ೧೫ ವಿಡಂಬನಾತ್ಮಕ ಮಿನಿ ಕಥೆಗಳು



# ಯುಕ್ತಿ

• ಶ್ರೀಕಾಂತ ಚೌಧರಿ

ಎಷ್ಟೇ ವಿನಂತಿಸಿಕೊಂಡರೂ 'ಮುಂದುವರಿಕೆಯ ಆಜ್ಞೆ' ಬಾರದೆ ನಿವೃತ್ತಿಯ ದಿನ ಸಮೀಪಿಸುತ್ತಿರುವ ಅಧಿಕಾರಿಯಂತೆ ಸೈತಾನ ಚಡಪಡಿಸುತ್ತಲಿದ್ದ. ಜಗತ್ತಿನ ಬಹುತೇಕ ಭೂಭಾಗವೆಲ್ಲ ತನ್ನ ಅಂಕೆಯಲ್ಲಿದ್ದರೂ ಜಂಬೂದ್ವೀಪ ಮಾತ್ರ ಅದಕ್ಕೆ ಒಳಪಡದೇ ಅಣಕಿಸುತ್ತಿದೆಯಲ್ಲ! ಅಸಂತೋಷ, ಜಾತಿ ಗಲಭೆ, ಮಾತು ಮಾತಿಗೆ ಆಂದೋಲನ ಮುಂತಾದ ಯಾವ ಲಕ್ಷಣಗಳೂ ಇರದೇ ಹಿಂದುಳಿದಿದ್ದ ಜಂಬೂದ್ವೀಪವನ್ನು ಉಳಿದ ರಾಷ್ಟ್ರಗಳ ಸಾಲಿನಲ್ಲಿ ನಿಲ್ಲಿಸುವ ಸೈತಾನನ ಸದುದ್ದೇಶ ಈಡೇರಲೇ ಇಲ್ಲ.

ಆತ ಬಹುವಾಗಿ ಚಿಂತನೆ ನಡೆಸಿ ನಾಲ್ಕಂಶದ ಯೋಜನೆಯನ್ನು ರೂಪಿಸಿದ.

ಮೊದಲ ಹಂತವಾಗಿ ರೋಗರುಜಿನಾದಿಗಳು ಹಬ್ಬುವಂತೆ ಮಾಡಿದ. ಪೀಡಿತರು ಸತ್ತರೆ ಸಂಬಂಧಿಕರು ಅಳಲಿಲ್ಲ. "ಸದ್ಯ ಜನಸಂಖ್ಯೆ ಕಡಿಮೆಯಾಯಿತು. ಇನ್ನಿಷ್ಟು ಹೆಚ್ಚು ಆಹಾರ ಸೇವಿಸಬಹುದು; ಮತ್ತಷ್ಟು ದೊಡ್ಡ ಜಾಗಗಳ ಒಡೆಯರಾಗಬಹುದು," ಎಂದು ನಕ್ಕುಬಿಟ್ಟರು ಜಂಬೂದ್ವೀಪಿಗರು.

ಎರಡನೆಯ ಹಂತ ಅವರವರಲ್ಲೇ ಆಸ್ತಿ ಜಗಳ ಹುಟ್ಟಿಸುವುದು. ಆದರೆ ಜಂಬೂದ್ವೀಪಿಗರು ನಗುನಗುತ್ತಲೇ ತಾವಿದ್ದ ಮನೆಯನ್ನು ಬೇಡಿದ ಸಂಬಂಧಿಕರಿಗೆ ಕೊಟ್ಟು ತಾವು ಬೇರೆಡೆ ವಾಸಿಸಲಾರಂಭಿಸಿದರು. ಜನ ಇನ್ನೂ ಸಾಯುತ್ತಲೇ ಇದ್ದರಲ್ಲ. ಮನೆ ಖಾಲಿಯಾಗುವುದಕ್ಕೇನು ಬರ?

ಮೂರನೆಯ ಹಂತವೆಂದು ಸಾತ್ವಿಕ ಜನರನ್ನು ಪೀಡಿಸುವ, ಅವರನ್ನು ದೋಚಿ ಹೈರಾಣಾಗಿಸುವ ಪುಂಡರು, ಕಳ್ಳ-ಕಾಕರನ್ನು ಸೃಷ್ಟಿಸಿ ದಬ್ಬಿದ. ಜಂಬೂದ್ವೀಪಿಗರು ಸದಾ ಭಗವನ್ನಾಮಸ್ಮರಣೆ, ಕಥಾಶ್ರವಣ-ಹರಿಕೀರ್ತನೆಯಲ್ಲೇ ತೊಡಗಿಕೊಂಡಿರುತ್ತಿದ್ದುದರಿಂದ ಪುಂಡರು, ಕಳ್ಳ-ಕಾಕರು ಕೂಡ ಸಾಧುಗಳಾಗಿ ಪರಿವರ್ತನಗೊಂಡುಬಿಟ್ಟರು.

ಕೈ ಕೈ ಹಿಚುಕಿಕೊಂಡ ಸೈತಾನನಿಗೆ ಆತನ ಕಿರಿಯ ತಮ್ಮ ಸಲಹೆಯೊಂದನ್ನು ನೀಡಿದ, "ಇದೆಲ್ಲಾ ಕೆಲಸಕ್ಕೆ ಬಾರದ್ದು. ಈಗ ಏನಿದ್ದರೂ ಒಂದೇ ಬೇರಿನಿಂದ ಹಲವು ರೀತಿ ಪ್ರಯೋಜನ ಪಡೆಯುವ ಕಾಲ. ಅಕೋ ಅಲ್ಲಿದೆ ನೋಡು, ಆ ಜೀವ. ಅದಕ್ಕೆ ಸ್ವರ್ಗವನ್ನೂ ನರಕವಾಗಿಸುವ ಚಪಲ. ಅದನ್ನೆತ್ತಿ ಜಂಬೂದ್ವೀಪದಲ್ಲೆಸೆ. ಆ ಮೇಲೆ ನೋಡು."



ಸೈತಾನ ಹಾಗೇ ಮಾಡಿದ.

ತಮ್ಮ ನಡುವೆ ಆಕಾಶದಿಂದ ಬಂದು ಬಿದ್ದ ಆ ಜೀವವನ್ನು ಜಂಬೂದ್ವೀಪಿಗರು ಭಯಭಕ್ತಿಯಿಂದ ಕಾಣತೊಡಗಿದರು. ಭಗವನ್ನಾಮಸ್ಮರಣೆ, ಕಥಾಶ್ರವಣ-ಹರಿಕೀರ್ತನೆಗಳನ್ನೆಲ್ಲ ಮರೆತು ಆತನನ್ನೇ ಸುತ್ತುವರಿದು ಕೂಡತೊಡಗಿದರು. ಆತ ಹಾಗೇ ಬೆಳೆದೇ ಬೆಳೆದ.

ಕೆಲವು ತಿಂಗಳುಗಳ ನಂತರ ಸೈತಾನ ಜಂಬೂದ್ವೀಪದತ್ತ ದೃಷ್ಟಿ ಹರಿಸಿದ. ಮುಖ ಅರಳಿತು.

ಜಂಬೂದ್ವೀಪದಲ್ಲಿ ಎಲ್ಲಿ ನೋಡಿದಲ್ಲಿ ಭಾಷೆಯ ವಿಷಯದಲ್ಲಿ-ಧರ್ಮದ ಹೆಸರಿನಲ್ಲಿ ದಂಗೆಗಳು; ಆಂದೋಲನ-ಚಳುವಳಿಗಳು; ಕಳ್ಳ-ಕಾಕರ, ಡಕಾಯಿತರ ದಗ್ಗದುಳಿತಗಳು; ಭ್ರಷ್ಟಾಚಾರ-ಅನೈತಿಕತೆಗಳು!

"ವಾಹ್. ನನ್ನ ಕೈಯಿಂದಾಗದ್ದು ನಿನ್ನ ಕೈಯಿಂದಾಯಿತು. ಇಂದಿನಿಂದ ನೀನೇ ನನ್ನ ಗುರು," ಎಂದು ಸೈತಾನ ಅಲ್ಲಿಂದಲೇ ಜಂಬೂದ್ವೀಪದ ಆ ನಾಯಕನಿಗೆ ನಮಸ್ಕರಿಸಿದ. ●

# ಲಾ ಆ್ಯಂಡ್ ಆರ್ಡರ್!

• ಅಖಿಲೇಶ್ 'ಅಂಜುಮ್'

ದೇಶದ ಎಲ್ಲಾ ರಾಜ್ಯಗಳ ಗೃಹಮಂತ್ರಿಗಳ ಸಭೆ. "ದೇಶದಲ್ಲಿ ಹೆಚ್ಚುತ್ತಿರುವ ಅವ್ಯವಸ್ಥೆ, ಅಸಮಾಧಾನ, ರಸ್ತೆ ದರೋಡೆ, ಮನೆಗನ್ನ, ಕೊಲೆ ಸುಲಿಗೆ, ಡಕಾಯಿತಿ, ಬಲಾತ್ಕಾರಗಳಿಗೆ ಕಾರಣ ಕಂಡು ಹಿಡಿದು ಪರಿಹಾರ ಹುಡುಕುವುದು" ಸಭೆಯ ಮುಖ್ಯ ಉದ್ದೇಶ.

ಸಭಾಂಗಣ ಸಿಂಗಾರಗೊಂಡಿತು. ಸಮಸ್ತ ಗೃಹ ಮಂತ್ರಿಗಳೂ ಸೇರಿದರು. ಇಂಥ ಮಹತ್ವದ ಸಭೆಗೆ ಇದ್ದ-ಇಲ್ಲದ ಪತ್ರಿಕೆಗಳ ವರದಿಗಾರರೂ ಬಂದರು. ಅವರಿಂದ ಎಂಥೆಂಥ ಪ್ರಶ್ನೆಗಳು ಬರಬಹುದು ಎಂದು ಊಹಿಸಿ ಅವಕ್ಕೆಲ್ಲ ಜಾಣತನದ ಉತ್ತರವನ್ನು ಉರು ಹಾಕಿಕೊಂಡೇ ಸಮಸ್ತ ಗೃಹಮಂತ್ರಿಗಳು ಆಗಮಿಸಿದ್ದರು. ಸುದ್ದಿಗಾರನೊಬ್ಬ ಯಾವುದೋ ರಾಜ್ಯದ ಗೃಹಮಂತ್ರಿಗಳನ್ನು ಕೇಳಿಯೇ ಬಿಟ್ಟ- "ನಿಮ್ಮಲ್ಲಿ 'ಲಾ ಆ್ಯಂಡ್ ಆರ್ಡರ್'ನ ಸ್ಥಿತಿಗತಿಯೇನು?"

"ನೋಡಿ, 'ಲಾ'ಕ್ಕೆ ಸಂಬಂಧಪಟ್ಟ ಹಾಗೆ ನಾನು ನಮ್ಮ ಕಾನೂನು ಮಂತ್ರಿಗಳನ್ನು ಸಂಪರ್ಕಿಸದೇ ಏನನ್ನೂ ಹೇಳಲಾರೆ. ಇನ್ನು 'ಆರ್ಡರ್'ನ ಕುರಿತಂತೆ ಹೇಳುವುದಾದರೆ ಕಳೆದ ಹಲವಾರು ತಿಂಗಳುಗಳಿಂದ ನಾನು ಅಂಥ ಯಾವ ಮಹತ್ವದ ಆರ್ಡರಿಗೂ ಸಹಿ ಮಾಡಿಲ್ಲ ತಿಳಿಯಿತೆ?" ಗೃಹ ಮಂತ್ರಿಗಳು, ತಮ್ಮ ಜಾಣತನಕ್ಕೆ ತಾವೇ ಹೊಟ್ಟೆ ಕುಣಿಯುವಂತೆ ನಕ್ಕರು. ●

೧೩ ವಿಡಂಬನಾತ್ಮಕ ಮಿನಿ ಕಥೆಗಳು

# ಪ್ರಮಾಣ ಪ್ರಶ್ನೆ

• ಜಯಂತ ರೇಲವಾಣಿ

ಹಠಬಿಡದ ವಿಕ್ರಮಾದಿತ್ಯನು ಮತ್ತೆ ಮರಳಿ ಬಂದು ಮರದಿಂದ ಶವವನ್ನು ಇಳಿಸಿ, ಹೆಗಲ ಮೇಲೆ ಹೊತ್ತು ಸ್ಮಶಾನದೆಡೆ ನಡೆದನು. ಆಗ ಬೇತಾಳವು- "ಎಲೈ ರಾಜನೆ, ನಿನ್ನ ಶ್ರಮ ಪರಿಹಾರಕ್ಕೆಂದು ಒಂದು ಕಥೆಯನ್ನು ಹೇಳುತ್ತೇನೆ, ಕೇಳುವಂಥವನಾಗು," ಎಂದಿತು, ಹಾಗೂ ಆತನ ಉತ್ತರಕ್ಕಾಗಿ ಕಾಯದೇ ಕಥೆ ಹೇಳತೊಡಗಿತು.

•

ಗಣತಂತ್ರವನ್ನೊಪ್ಪಿಕೊಂಡ ಭರತಖಂಡದಲ್ಲೊಬ್ಬ ಲೋಕಸೇವಕ ರಾಜನಿದ್ದನು. ಪ್ರಜೆಗಳ ಸುಖ-ದುಃಖವನ್ನು ಕಣ್ಣಾರೆ ಕಂಡು, ಅರಿಯಲು ಸ್ವತಃ ಛದ್ಮವೇಷದಿಂದ ರಾತ್ರಿಯಲ್ಲಿ, ಹಗಲಲ್ಲಿ ತಿರುಗುತ್ತಿದ್ದನು. ಹೀಗಿರುತ್ತಿರಲಾಗಿ ಜನರ ದಾರಿದ್ರ್ಯವನ್ನು ಕಂಡು ಕಣ್ಣು ಹನಿಗೂಡುತ್ತಿತ್ತು. ದಾರಿದ್ರ್ಯವನ್ನು ತೊಲಗಿಸುವ ಉಪಾಯವಾಗಿ ನಗರಗಳಿಂದ ದರಿದ್ರರನ್ನೆಲ್ಲ ಹಿಡಿದು ಬೇರೆಡೆ ಸಾಗಿಸುವುದೇ ವಿಹಿತ ಅಂದುಕೊಂಡನು. ಈ ಪ್ರಕಾರವಾಗಿ ಗರೀಬರನ್ನು ಹಟಾಯಿಸುವ ಕಾರ್ಯದಲ್ಲಿ ಆತನು ಅಲ್ಪಾವಧಿಯಲ್ಲೇ ಯಶಸ್ವಿಯಾದನು.

ಆದರೆ ಆ ಗರೀಬರಿಗೆಲ್ಲ ಒಂದು ಪ್ರದೇಶದಲ್ಲಿ ವಸತಿ ನಿರ್ಮಿಸಿ ಅದಕ್ಕೆ 'ಬಡನಗರ'ವೆಂದು ಹೆಸರನ್ನಿರಿಸಿದನು. ಅಲ್ಲಿಗೆ ಬಂದು ಮುಫತ್ತಾಗಿ ಮನೆ ಪಡೆದು, ಇರತೊಡಗಿದ ಬಡವರು ಮಾತ್ರ ಆ ನಗರಕ್ಕೆ 'ಪುಕ್ಕಟ ನಗರ'ವೆಂದೇ ಕರೆಯತೊಡಗಿದರು.

ಅರ್ಥ-ಖಾದ್ಯಗಳ ವ್ಯವಹಾರವನ್ನು ವೈಶ್ಯರು ಮಾತ್ರ ಮಾಡುತ್ತಿರುವುದರಿಂದ ಸಂಪತ್ತು ಅವರಲ್ಲೇ ಬಟ್ಟೊಟ್ಟಿಬೀಳುತ್ತಿರುವುದು ದಯಾಳು ರಾಜನ ಗಮನಕ್ಕೆ ಬಂತು. ಆದ್ದರಿಂದ ಅರ್ಥ-ಖಾದ್ಯಗಳ ವ್ಯವಹಾರವನ್ನು ಸರಕಾರೀಕರಣಗೊಳಿಸಿಬಿಡುವ ತನ್ನ ನಿರ್ಣಯವನ್ನು ಡಂಗುರದ ಮೂಲಕ ಸಾರಿಸಿಬಿಟ್ಟನು. ಆದರೆ ಅದಾಗಲೇ ತಮ್ಮ ವ್ಯವಹಾರ ಕೌಶಲದ ಪ್ರಯೋಜನ ಪಡೆದುಕೊಂಡ ವಣಿಕ ವೃತ್ತಿಯವರು ಸಂಪತ್ತಿನ ಬಹುಭಾಗವನ್ನು ಮನೆಗಳ ನೆಲಮಾಳಿಗೆಗಳಲ್ಲಿ ಅವಿತಿಟ್ಟು 'ಉಳಿದದ್ದು ಹೋದರೆ ಹೋಗಲಿ ನನಗೇನು?' ಎಂಬಂತಿದ್ದುಬಿಟ್ಟರು. ಗೋಳು ಬಂದದ್ದು ಮಧ್ಯಮವರ್ಗದ ಮಂದಿಗೆ. ಸಾಲ ಮಾಡಿಯಾದರೂ ತುಪ್ಪ ತಿನ್ನಬೇಕೆಂಬ ಚಪಲದ ಆ ಜನರಿಗೆ ಸಾಲವೇ ಸಿಗದಾಯಿತು. ಇನ್ನು ತುಪ್ಪದ ಮಾತಂತೂ ದೂರವೇ ಉಳಿಯಿತು.

ಅಂತೂ ಅರ್ಥ-ಖಾದ್ಯಗಳ ಸರಬರಾಜಿಗಾಗಿ ಪ್ರತ್ಯೇಕ ವ್ಯವಸ್ಥೆಯಾಗಿ ಮಧ್ಯಮವರ್ಗೀಯರು ಅರೆ ಹೊಟ್ಟೆಯೂಟಕ್ಕೂ ಹಪಹಪಿಸುವಂಥ ಪರಿಸ್ಥಿತಿಯು ನಿರ್ಮಾಣವಾಯಿತು. ಭಿಕ್ಷೆ ಬೇಡಿದರೆ ತಮ್ಮನ್ನೂ ಎಲ್ಲಿ ನಗರದಿಂದ ಹಟಾಯಿಸಿ ಪುಕ್ಕಟ ನಗರಕ್ಕೆ ಕಳಿಸುತ್ತಾರೋ ಎಂಬ ಭಯದಿಂದ ಆ ಜನರೆಲ್ಲ ಹೇಗೋ ಜೀವ ಹಿಡಿದುಕೊಂಡು ಬಾಳತೊಡಗಿದರು.

ರಾಷ್ಟ್ರದಲ್ಲಿ ತಾನು ತಂದ ಈ ಅದ್ಭುತ ಸುಧಾರಣೆಯಿಂದ ರಾಜನು ತುಂಬ ಸಂತೃಪ್ತನಾಗಿದ್ದ ಹೊತ್ತಿನಲ್ಲೇ ಚುನಾವಣೆಗಳು ಸಮೀಪಿಸಿದವು. ಮತದಾರರ ಖಾನೇಶುಮಾರಿಯ ಕೆಲಸಕ್ಕೆ ಶುರುವಾಯಿತು. ಆದರೆ ಅದರ ನಂತರ ತಿಳಿದು ಬಂದ ಒಂದು ಅಂಶದಿಂದ ರಾಜನು ಚಿಂತಿತನಾದನು. ಪ್ರಜೆಗಳಲ್ಲಿ ಬಹ್ವಂಶ ಜನರು ಅರೆ ಹೊಟ್ಟೆಯ ಊಟವೂ ಸಿಗದೇ ಇಂದೋ ನಾಳೆಯೋ ಎಂದು ದಿನ ಎಣಿಸುತ್ತಿದ್ದರು.

ಒಂದೇ ಏಟಿಗೆ ಎರಡು ಕಾಯಿಗಳನ್ನು ಉದು

ರಿಸಿಕೊಳ್ಳುವುದು ವಿಹಿತವೆಂದು ಸಲಹೆಗಾರರು ಮಹಾರಾಜನ ಕಿವಿಯೂದಿದರು. ಉಪಾಯವನ್ನೂ ಅವರೇ ಸೂಚಿಸಿದರು. 'ಪ್ರಜರಿಗೆ ಅತ್ಯಂತ ತುರ್ತಾಗಿ ಬೇಕಿರುವುದು ಹಣ ಮತ್ತು ಅನ್ನ. ಆದ್ದರಿಂದ ಅವೆರಡನ್ನೂ ಅವರಿಗೆ ಒದಗಿಸುವುದರ ಮೂಲಕ ತಮ್ಮ ಅಭ್ಯರ್ಥಿಗಳು ಗೆಲ್ಲುವಂತೆ ಮಾಡಬಹುದು.' ಇದಕ್ಕಾಗಿ ಎಷ್ಟೆಷ್ಟು ಖರ್ಚು ಬಂದೀತು. ಎಷ್ಟು ಪ್ರಮಾಣದಲ್ಲಿ ಧಾನ್ಯ ಬೇಕಾದೀತು ಎಂಬುದರ ಲೆಕ್ಕಾಚಾರವೂ ನಡೆಯಿತು.

'ಹಾಗಿದ್ದರೆ ಪ್ರತಿಯೊಬ್ಬ ಅರ್ಹ ಪ್ರಜೆಗೂ ಒಂದೊಂದು ಹಸಿರು ನೋಟು ಮತ್ತು ಒಂದೊಂದು ಪಡಿ ಗೋದಿಯನ್ನು ಹಂಚಿರಿ'- ರಾಜನು ಅಪ್ಪಣೆ ಕೊಡಿಸಿಬಿಟ್ಟನು.

'ರಾಜನ್, ಒಂದೊಂದು ಹಸಿರು ನೋಟು ಮತ್ತು ಒಂದೊಂದು ಪಡಿ ಗೋದಿ ಎಂದ[illegible] ಅಪಾರ ಹಣವನ್ನು ಬೊಕ್ಕಸದಿಂದ ನಾವು ತೆರ[illegible] ಕಾಗುತ್ತದೆ. ಅದರ ಬದಲು ಹೀಗೆ ಮಾಡಿ[illegible] ಹೇಗೆ? ಈ ಪ್ರಮಾಣದಲ್ಲೇ ನಾವು ಇಬ್ಬಿಬ್ಬ[illegible] ಹಂಚಿ ನೀಡಿದರೆ?'- ಪ್ರಧಾನನು ಸಲಹೆಯ[illegible] ತ್ತನು.

'ಊಹುಂ, ಈ ಪ್ರಮಾಣದಲ್ಲಿ ನಾ[illegible] ಮಂದಿಗೆ ಹಂಚುವುದು ವಿಹಿತವು. ಇದರಿ[illegible] ಹೆಚ್ಚು ಜನರ ಮತವನ್ನು ನಾವು ಗಳಿಸಿಕೊಳ್ಳ[illegible] ಸಾಧ್ಯವಾಗುವುದು'- ಅರ್ಥ ಮಂತ್ರಿಯು ತ[illegible] ಮಂಡಿಸಿದನು.

'ಹಣದ ವಿಚಾರದಲ್ಲಿ ಹೇಳುವುದಾದರೆ ಪ್ರಮಾಣದಲ್ಲಿ ಐದು ಮಂದಿಗೆ ಹಂಚುವು[illegible] ಜಾಣತನ. ಅಂದರೆ ಹತ್ತು ರೂಪಾಯಿಯ ನ[illegible] ಇಲ್ಲವೆ ನೋಟಿಗೆ ಬದಲಾಗಿ ನಾವು ಎರಡೆರ[illegible] ರೂಪಾಯಿಯ ನೋಟು ಹಂಚುವುದು [illegible] ಯದು. ಅಂದರೆ ಇನ್ನೂ ಒಂದೊಂದು ಮ[illegible] ಜಾಸ್ತಿ ಸಿಕ್ಕುವುದು. ಆದರೆ ಗೋದಿಯನ್ನು ಮ[illegible] ಒಂದೊಂದು ಪಡಿಯಂತೇ ಹಂಚಬೇಕ[illegible] ರಾಜನು ಹೀಗೆ ಹೇಳಿ ಎದ್ದು ಬಿಟ್ಟನು.

ನಗರಗಳಲ್ಲಿ ನೋಟು- ಗೋದಿ ಚೀಲ[illegible] ಹಂಚಲ್ಪಟ್ಟವು.

●

ಇಷ್ಟು ಕಥೆ ಹೇಳಿದ ಮೇಲೆ ಬೇತಾ[illegible] ವಿಕ್ರಮಾದಿತ್ಯನನ್ನು ಕೇಳಿತು- "ಎಲೈ ರಾ[illegible] ಹಣದ ಪ್ರಮಾಣದಲ್ಲಿ ಕಡಿತ ಮಾಡಿದ ರಾ[illegible] ಗೋದಿಯ ಪ್ರಮಾಣವನ್ನೇಕೆ ಹಾಗೇ ಇಟ್ಟ[illegible] ಈ ಪ್ರಶ್ನೆಗೆ ಉತ್ತರ ಗೊತ್ತಿದ್ದರೂ ಹೇ[illegible] ಉಳಿದಿಯಾದರೆ ನಿನ್ನ ತಲೆ ಸಾವಿರ ಹೋಳ[illegible] ವುದು, ಎಚ್ಚರ."

ವಿಕ್ರಮಾದಿತ್ಯನು- "ಮತ ಹಾಕುವವ[illegible] ದರೂ ಪ್ರಜೆಗಳು ಬದುಕಿರಲಿ ಎಂಬ ಘನೋ[illegible] ಶದಿಂದ ಗೋದಿಯ ಪ್ರಮಾಣವನ್ನು ಹಾಗೆ[illegible] ಇಟ್ಟನು...." ಎಂದು ಹೇಳಿಬಿಟ್ಟನು.

ಹೀಗೆ ವಿಕ್ರಮಾದಿತ್ಯನ ಮೌನ ಭಂಗವ[illegible] ಕೂಡಲೇ ಬೇತಾಳವು ಹೆಗಲಿನಿಂದ ನೆಗೆದು [illegible] ಹೋಗಿ ಮತ್ತೆ ಮರಕ್ಕೆ ನೇತುಹಾಕಿಕೊಂಡಿತು

೧೫ ವಿಡಂಬನಾತ್ಮಕ ಮಿನಿ ಕಥೆಗಳು

# ಶ್ವೇತ ಕ್ರಾಂತಿ

• ಪ್ರಭಾಕರ ವಿಕ್ಷೇಪಿ

ಒಂದು ದಿನ ಅವರು ಹೇಳಿದರು- "ಸೋದರರೆ ಹಸಿರು ಕ್ರಾಂತಿಯಲ್ಲಿ ಸಮಾಜವಾದಿ ನಾಯಕರು ಸಫಲರಾದರು. ಈಗ ಅದರೊಂದಿಗೆ ಶ್ವೇತ ಕ್ರಾಂತಿಯ ಅವಶ್ಯಕತೆಯೂ ಇದೆ. ಸದ್ಯದಲ್ಲೇ ಅದನ್ನು ನೀವು ನೋಡಲಿದ್ದೀರಿ."

ಅವರು ಮಾತಾಡಿದ ಮೇಲೆ ಚಪ್ಪಾಳೆ ಹಾಕುವುದು ಆ ಊರಿನವರ ಸ್ವಭಾವವಾಗಿಬಿಟ್ಟಿತ್ತು. ತಿಳಿಯಲಿ ಬಿಡಲಿ ಅಂತೂ ಅವರು ಚಪ್ಪಾಳೆ ಹಾಕಲೇಬೇಕು.

ಅಂದು ಚಪ್ಪಾಳೆಯನ್ನೇನೋ ಹಾಕಿದರು. ಆದರೆ ಹಾಕಿ ಸುಮ್ಮನಾದ ಮೇಲೆ ಒಬ್ಬ ಮುದುಕ ಎದ್ದು ನಿಂತವನೇ ಕೇಳಿಯೇಬಿಟ್ಟ- "ಧಣಿ'.... ಹಸಿರು ಕರಾಂತಿ ಅಂತ ಸಾಕಷ್ಟು ಸಲ ಹೇಳಿದ್ದೀರಿ. ಆದ್ರೆ, ಇವೊತ್ತೇನೋ ಬ್ಯಾರೇನೇ ಹೇಳೀದ್ರಲ್ಲಾ - ಸವೆತ ಕರಾಂತಿ ಅಂತ. ಹಂಗಂದ್ರೇನು ಬುದ್ಧಿ?"



ಆ ಊರಿನಲ್ಲಿ ದೇವರ ನಂತರದ ಸ್ಥಾನ ಆ ...ಮ್ಮೆಲ್ಲೆಯದೇ. ಯಾವುದೇ ಸಭೆ-ಸಮಾರಂಭವಿ...ರೂ ಮಾನ್ಯ ಶಾಸಕರಿಗೆ ಅಗ್ರಸ್ಥಾನದ ಗೌರವ. ...ಲ್ಲ ಅವರು ಸಮಾಜವಾದಿ ಆಡಳಿತದ ಕುರಿತೇ ...ತಬಡಿಸಬೇಕು. ಅವೇ ಪದಗಳು, ಅವೇ ವಿಚಾ...ಳು. 'ಕ್ರಾಂತಿ' ಎಂಬ ಪದವಂತೂ ಇರಲೇ...ಕು.

ಎಮ್ಮೆಲ್ಲೆಯವರಿಗೆ ಏನು ಹೇಳಬೇಕೆಂದೇ ತೋಚಲಿಲ್ಲ. ಸರಪಂಚರತ್ತ ನೋಡಿದರು. ಸರಪಂಚರು ಆ ಮುದುಕನತ್ತ ತಮ್ಮ ಹಳದಿ ಹಲ್ಲುಗಳನ್ನು ಪ್ರದರ್ಶಿಸಿದರು.

"ನೋಡಜ್ಜಾ... ಸಮಯ ಬರ್ಲಿ, ಆಗ ತಿಳಿಸಿ ಹೇಳ್ತೀನಿ ಆಯ್ತಾ?" ಎಮ್ಮೆಲ್ಲೆಯವರು, ಬೀಸುತ್ತಿದ್ದ ದೊಣ್ಣೆಯಿಂದ ತಲೆ ತಪ್ಪಿಸಿಕೊಂಡಂತೆ, ಸಮಾ

ಧಾನ ಪಟ್ಟುಕೊಂಡರು.

ಮರುದಿನ ಮುಂಜಾನೆ ಎಂದಿನಂತೆ ಮುದುಕ ತನ್ನ ಹೊಲಕ್ಕೆ ಹೋದ. ಅರೆ, ಅಲ್ಲಿ ಹತ್ತಿಪ್ಪತ್ತು ಎತ್ತುಗಳು ಫಸಲನ್ನು ತುಳಿದು ಸಿಕ್ಕಂತೆ ಮೇಯುತ್ತಿದ್ದವು! ಸಮೀಪಿಸಿದ. ಬೆದರಿಸಿದ. ಅವು ಜಪ್ಪೆನ್ನಲಿಲ್ಲ. ದಿಟ್ಟಿಸಿ ನೋಡಿದ. ಆ ಎತ್ತುಗಳಲ್ಲಿ ಕೆಲವು ಸರಪಂಚನವು, ಇನ್ನು ಕೆಲವು ಎಮ್ಮೆಲ್ಲೆಯವರವು! ಮುದುಕನಿಗೆ ಸಿಟ್ಟುಬಂತು. ಅಲ್ಲಿಂದ ಭರಭರ ನಡೆದು ಎಮ್ಮೆಲ್ಲೆ ಸಾಹೇಬರ ಮನೆಗೆ ಬಂದ.

"ಬಾ ಅಜ್ಜಾ.... ಯಾಕೆ? ಧಡಪಡಿಸಿಕೊಂಡು ಬಂದಿಯಲ್ಲ?"

"ಇನ್ನೇನಾಗ್ರಿ ಸಾಯೇಬ್ರೆ... ನಿಮ್ಮ ಎತ್ತುಗಳು ನನ್ನ ಹಸಿರು ಕರಾಂತಿಯನ್ನು ಹಾಳು ಗೆಡವಿ ಮೆಲ್ಲುತ್ತಿವೆ."

"ಎತ್ತುಗಳಾ? ಅವು ಬೆಳ್ಳಗಿದ್ದಾವಲ್ಲವೆ?"

"ಹಾಂ.... ಹಾಂ.... ಸವೆತ ಕರಾಂತಿ ಅಂದ[illegible] ಇದೇ ಏನು?" ಮುದುಕ ಅರಚಿದ.

"ಹೌದಪ್ಪಾ.... ನಿನ್ನ ಹೊಲದಲ್ಲಿ ಅಂತೂ[illegible] ಶ್ವೇತ ಕ್ರಾಂತಿ ಬಂದೇ ಬಿಟ್ಟಿತು. ನಾನು, ಹೇಳ[illegible] ಲಿಲ್ವೇ- 'ಸದ್ಯದಲ್ಲೇ ಅದನ್ನು ನೀವು ನೋಡ[illegible] ದ್ದೀ[illegible] ಅಂತ..." ಎಮ್ಮೆಲ್ಲೆ ಸಾಹೇಬರು ಗಹಗಹಿ[illegible] ನಕ್ಕರು[illegible]

[illegible]ರಿಗೆ ಬೇಕು ನಿಮ್ಮ ಸವೆತ ಕರಾಂತಿ ನಾವು ಸವೆಯೋದನ್ನ ನೋಡಬೇಕಾ ನೀವು ಈಗ್ಲೇ ಓಡಿಸ್ತೀನಿ ಆ ನಿಮ್ಮ ಸವೆತ ಕರಾಂ[illegible] ಯನ್ನ"- ಮುದುಕ ಅಲ್ಲಿಂದ ಮತ್ತೆ ಹೊಲದ[illegible] ದೌಡಾಯಿಸಿದ.

---

# ನ್ಯಾಯ

**• ಪರೇಶ್ ಉಪ್ಪಲ್**

ಜನ ಸಂಪರ್ಕ ಸಭೆಗೆ ಬಂದ ಮಂತ್ರಿ ಮಹೋದಯರೆದುರು ಒಬ್ಬ 'ನ್ಯಾಯ ಒದಗಿಸಿಕೊಡಿ' ಎಂಬ ಫಲ ಹಿಡಿದು ಕೂತ.

"ಏನನ್ಯಾಯ ಆಗಿದೆಯಪ್ಪಾ ನಿನಗೆ?"

"ನೌಕರಿಯಿಂದ ತೆಗೆದು ಹಾಕಿದ್ದಾರೆ ಸ್ವಾಮಿ."

"ಯಾರು?"

ಆತ ಸುತ್ತ ಮುತ್ತ ನೋಡಿ ಅಧಿಕಾರಿಯೊಬ್ಬನೆಡೆ ಕೈ ತೋರಿಸಿದ.

"ಯಾಕ್ರಿ? ಇವನನ್ಯಾಕೆ ಕೆಲಸದಿಂದ ತೆಗದ್ರಿ?"

"ಆತ ಕೆಲಸ ತಪ್ಪಿಸುತ್ತಿದ್ದನಂತೆ ಸರ್. ಕುಡಿದೇ ಕೆಲಸಕ್ಕೆ ಬರುತ್ತಿದ್ದನಂತೆ ಸರ್. ಮೇಲಾಗಿ ಟೆಂಪರರಿ ನೌಕರನಂತೆ ಸರ್...." ಅಧಿಕಾರಿ ಸರಸರ ಸಮಜಾಯಿಷಿ ನೀಡಿದ.

"ಏನ್ರೀ? ಯಾರು ಶಾಶ್ವತಾರಿ? ಯಾಕ್ರಿ ಟೆಂಪರರಿ ಟೆಂಪರರಿ ಅಂತ ಬಡ್ಕೊಳ್ತೀರಿ? ನಂಗೊತ್ತು, ನೀವು ನನ್ನನ್ನ ಕೂಡ ಮುಂದಿನ ಇಲೆಕ್ಶನ್‌ವರೆಗೆ ಮಾತ್ರ ಇರೊ ಟೆಂಪರರಿ ಮಂತ್ರಿ ಅಂದ್ಕೊಂಡಿದೀರಿ ಅಂತ.... ಈಗಿಂದೀಗ್ಲೇ ಐ.ಬಿ.ಗೆ ಬನ್ರಿ.... ನೋಡ್ಕೊಳ್ತೀನಿಮ್ಮನ್ನ.... ಎಂದು ಕೋಪದ ಭರದಲ್ಲಿ ಕಾರನ್ನೇರಿಯೇ ಬಿಟ್ಟರು.

ಚಲಿಸಿದ ಕಾರು ಎಬ್ಬಿಸಿದ ಧೂಳಿನಲ್ಲಿ 'ನ್ಯಾಯ ಒದಗಿಸಿಕೊಡಿ' ಎಂಬ ಫಲಕ ಮುಳುಗಿಹೋಯಿತು. ●



ವಿಡಂಬನಾತ್ಮಕ ಮಿನಿ ಕಥೆಗಳು

## ಪಶ್ಚಾತ್ತಾಪ

ನರ್ಮದಾ ಪ್ರಸಾದ ಉಪಾಧ್ಯಾಯ

ಆಪರೇಶನ್ ಥಿಯೇಟರಿನಲ್ಲಿ ದುಗುಡ ಚ್ಚಿತು. ದಾದಿಯರು ಅಲ್ಲಿಂದ ಓಡಿ ಹೋದರು; ಕ್ಟರುಗಳು ನಿಂತಲ್ಲೇ ನಡುಗತೊಡಗಿದರು.

ಚಿಕಿತ್ಸೆಯ ಇತಿಹಾಸದಲ್ಲೇ ಅಪೂರ್ವ ಘಟನೆ ಾಗಿತ್ತು. ಹೃದಯ ಮೊಟ್ಟಮೊದಲ ಬಾರಿಗೆ ಸಡ್ಡು ಹೊಡೆದು ನಿಂತು ಮುಷ್ಟಿ ಎತ್ತಿ ಘೋಷಣೆಗಳನ್ನು ಕೂಗಲಾರಂಭಿಸಿತ್ತು. ಡಾಕ್ಟರರು ಆಪರೇಶನ್ ಟೇಬಲ್ ಮೇಲೆ ಮಲಗಿದ್ದಾತನ ಎದೆಯನ್ನು ಸೀಳಿದಾಕ್ಷಣವೇ ಅಲ್ಲಿಂದ ಹೊರಕ್ಕೆ ನೆಗೆದ ಹೃದಯ ಅಲ್ಲಿದ್ದವರನ್ನೆಲ್ಲ ಕೆಂಗಣ್ಣಿನಿಂದ ನೋಡಿತು. ನಂತರ ಬಾಗಿಲೀಚೆ ನುಸುಳಿ ಕುಪ್ಪಳಿಸುತ್ತ ಪ್ರತಿಯೊಂದು ವಾರ್ಡನ್ನೂ ಹೊಕ್ಕಿತು.

ಅಂತೂ ಆಸ್ಪತ್ರೆಯ ಉದ್ದಗಲಗಳನ್ನು ಎಣಿಸಿ ಸುಸ್ತಾದ ಹೃದಯ ಮುಖ್ಯದ್ವಾರವನ್ನು ತಲುಪಿತು. ಆದರೆ ಅಲ್ಲಿ ಗೋಡೆಗಳನ್ನೆಲ್ಲ ದಿಟ್ಟಿಸಿ ಒಮ್ಮಿಂದೊಮ್ಮೆಲೆ ಕುಸಿದು ಬಿದ್ದು ತಣ್ಣಗಾಯಿತು.

ಮುಖ್ಯ ವೈದ್ಯರು ಮರುದಿನ ಮೃತ ವ್ಯಕ್ತಿಯ ಮನೆಗೆ ಹೋದರು.

"ಬನ್ನಿ" ಎಂದು ಬಿಕ್ಕಳಿಸಿ ಸ್ವಾಗತಿಸಿದವ ಮೃತನ ಆಪ್ತ ಕಾರ್ಯದರ್ಶಿ ಎಂಬುದು ಡಾಕ್ಟರಿಗೆ ಗೊತ್ತಾಗದಿರಲಿಲ್ಲ.

"ನಮ್ಮ ಸಾಹೇಬರು ತುಂಬ ಸಂವೇದನಾಶೀಲರೂ ತೀರ ಭಾವುಕರೂ ಆಗಿದ್ದರು. ಸೇವಾ ಭಾವ ಅವರ ನರನಾಡಿಗಳಲ್ಲಿ ಪ್ರವಹಿಸುತ್ತಿತ್ತು. ಈ ಕಾರಣದಿಂದಲೇ ನಿಮ್ಮ ಆಸ್ಪತ್ರೆಯನ್ನು ಕಟ್ಟಿದ

## ಏರ್ಪಾಡು

• ದೀನಾನಾಥ್ ಗುಪ್ತ

ನಿಶ್ಚಿತವಾದ ತಾರೀಕಿಗೆ ಒಂದು ದಿನ ಮುಂಚೆಯೇ ಮಿನಿಸ್ಟರ್ ಸಾಹೇಬರು ಜಿಲ್ಲಾ ಕೇಂದ್ರಕ್ಕೆ ಬಂದಿಳಿದರು. ಅಲ್ಲಿ ಜಿಲ್ಲಾಧಿಕಾರಿಗಳಾಗಲಿ, ಪಕ್ಷದ ಕಾರ್ಯಕರ್ತರಾಗಲಿ, ಶಾಸಕರಾಗಲಿ ಕಾಣಲೇ ಇಲ್ಲ. ಸಾಹೇಬರು ಸಿಡಿಮಿಡಿಗೊಂಡು ಜಿಲ್ಲಾಧಿಕಾರಿಗಳನ್ನು ಕರೆಸಿ ಉಗಿದರು-

"ಇದೇ ಏನ್ರೀ ನಿಮ್ಮ ವ್ಯವಸ್ಥೆ?"

"ಸರ್, ನೀವು ನಿಗದಿತ ದಿನಕ್ಕಿಂತ ಒಂದು ದಿನ ಮುಂಚೆಯೇ ಬರುತ್ತೀರಂತ ಗೊತ್ತಿರಲಿಲ್ಲ." - ಜಿಲ್ಲಾಧಿಕಾರಿ ವಿನಮ್ರನಾಗಿ ನಿವೇದಿಸಿಕೊಂಡ.

"ಆಡ್ದೀ ಇಲ್ರೀ.... ನಾನು ನಾನ್ನೂರೈನೂರು ಮೈಲು ದೂರದಿಂದ ಹೊರಟು ಒಂದಿನ ಮುಂಚೇನೇ ತಲುಪಬಲ್ಲೆ. ಆದ್ರೆ ನೀವು ನೂರುಮೀಟರೂ ದೂರವಿರದ ಮನೆಯಿಂದ ಒಂದಿನ ಮುಂಚೇನೇ ಬರಲಿಕ್ಕಾಗಲಿಲ್ವೆ... ನಿಮಗೆ? ಹೀಗೇ ಏನ್ರಿ ನೀವು ಕೆಲಸಾ ಮಾಡೋದು? ಆಂ? ಹೂಂ.... ಹೂಂ.... 'ಎಲ್ಲಾ ಏರ್ಪಾಡು, ಮಾಡ್ಸಿ, ಅಂಥಾಗೆ ನಾನಿಲ್ಲಿ ಬಂದಿರೋ ಸಮಾಚಾರಾನ ಯಾರ್ಗೂ ತಿಳಿಸ್ಬೇಡಿ. ಒಂದಿನ ನೆಮ್ದಿಯಾಗಿರೋಕೂ ಬಿಡಲ್ಲ ಜನ...." ಎಂದವರೇ ಮಿನಿಸ್ಟರ್ ಸಾಹೇಬರು ಬಾಥ್ ರೂಮಿಗೆ ನಡೆದರು. ●



ಕಂಟ್ರಾಕ್ಟರನಿಗೆ ಸಿಮೆಂಟಿನ ಸ್ಪೆಶಲ್ ಕೋಟಾ ನೀಡಿದ್ದರು. ಆಸ್ಪತ್ರೆಯ ಕಟ್ಟಡ ಮುಗಿದು ಅದು ಕಾರ್ಯಾರಂಭ ಮಾಡುವ ಹೊತ್ತಿಗಾಗಲೇ ಅವರ ಸಂಪುಟವೇ ಪದಚ್ಯುತಗೊಂಡಿತು. ಸಾಹೇಬರ ಸ್ಥಿತಿ ಚಿಂತಾಜನಕವಾಯಿತು. ನಿಮ್ಮ ಆಸ್ಪತ್ರೆಗೆ ಸೇರಿಸಿದೆವು. ಆಪರೇಶನ್ ಟೇಬಲ್ ಮೇಲೆ ಮಲಗಿಸಿ ಅವರಿಗೆ ನೀವು ಅನೆಸ್ತೇಶಿಯಾ ಕೊಟ್ಟು ಎಚ್ಚರ ತಪ್ಪಿಸಿದಿರಾದರೂ ಹೃದಯ ಮಾತ್ರ ಪ್ರಜ್ಞಾ ಶೂನ್ಯವಾಗಿರಲಿಲ್ಲ. ನೀವು ಎದೆ ಸೀಳುತ್ತಲೇ ಅದು ಹೊರಕ್ಕೆ ನೆಗೆದದ್ದು ಎಲ್ಲರಿಗೂ ಗೊತ್ತು. ಅದು ಆಸ್ಪತ್ರೆಯೆಲ್ಲವನ್ನೂ ಸುತ್ತಿ ನಿರೀಕ್ಷಣೆ ನಡೆಸಿತು. ಆದರೆ...." ಎಂದು ಪಿ.ಎ. ಮತ್ತೆ ಬಿಕ್ಕಳಿಸಿದ.

ಆತನನ್ನು ಸಮಾಧಾನಪಡಿಸುತ್ತ ಡಾಕ್ಟರರು, "ಏನಾಯಿತು ಹೇಳಿ.... ನಮ್ಮದ್ದೇನಾದರೂ ತಪ್ಪಾಗಿದ್ದರೆ..." ಎನ್ನುತ್ತಿದ್ದಂತೆಯೇ ಆತ ಕಣ್ಣೊರಸಿಕೊಂಡು, ಮೂಗು ಸ್ವಚ್ಛ ಮಾಡಿಕೊಂಡು ಹೇಳತೊಡಗಿದ,

"ಆಸ್ಪತ್ರೆಯ ದ್ವಾರದಲ್ಲಿ ಇರುವ ಶಿಲಾಫಲಕದಲ್ಲಿ ಉದ್ಘಾಟಕರು ಹೆಸರ ಈಗಿನ ಮುಖ್ಯಮಂತ್ರಿಗಳದಿತ್ತಲ್ಲ.... ಸಂವೇದನಾಶೀಲ ಹೃದಯಕ್ಕೆಷ್ಟು ಕಸಿವಿಸಿಯಾಗಬೇಡ? ಹೀಗಾಗಿ ಅದು ಅಲ್ಲೇ ಕುಸಿದು ಬಿದ್ದು ಅಚೇತನಗೊಂಡಿತು...." ●

# ಸೀಮೆ ಎಣ್ಣೆ

● ಮಹೇಂದ್ರ ಪಾಲ್

"ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಬನ್ನಿ, ನಿ ನೆಚ್ಚಿನ ನಾಯಕನನ್ನು ಸ್ವತಃ ನೋಡಿ. ಅ: ಭಾಷಣ ಕೇಳಿದರೆ ನಿಮ್ಮ ಹೊಟ್ಟೆ ಖಂ ತುಂಬುತ್ತದೆ," ಎಂದಿತ್ಯಾದಿಯಾಗಿ ಪ್ರಚಾ ದರೂ, ಆ ದಿನ ನಾಯಕರು ದೊಡ್ಡ ಮೈದಾ ಭಾಷಣಕ್ಕೆ ಬಂದಾಗ ಅಲ್ಲಿದ್ದವರು ಕೇವಲ ಪಕ್ಷದ ಕಾರ್ಯಕರ್ತರು.

"ಯಾಕೆ? ಜನ ಯಾಕೆ ಬರಲಿಲ್ಲ? ನ ಮೇಲಿನ ವಿಶ್ವಾಸ ಕಡಿಮೆಯಾಯಿತೇನು ಅವರಿ ಅಥವಾ ನೀವು ಸರಿಯಾದ ಪ್ರಚಾರತಂತ್ರ ರೂಪಿಸಿರಲಿಲ್ಲವೋ? ನೋಡಿ, ಇದಕ್ಕೆ ಕೂಡ ಕಾರಣ ಹುಡುಕಿ ಹೇಳಿ...." ನಾಯಕರು ಹಾಯ್ದು ಕಾರನ್ನೇರಿದರು.

ಅವರು ಅದೇ ಚಿಂತೆಯಲ್ಲಿ ಐ.ಬಿ.ಂ ಕೂತಿದ್ದಾಗ ಹಿರಿಯ ಕಾರ್ಯಕರ್ತನೊಬ್ಬ ಸು ಹೆಜ್ಜೆಯೊಂದಿಗೆ ಬಂದ.

"ಏನಾಯಿತು?"

"ಘಾತವಾಯಿತು."

"ಏನದು? ಸರಿಯಾಗಿ ಬೊಗಳು..."

"ವಿರೋಧ ಪಕ್ಷದವರದೇ ಚಿತಾವಣೆ."

"ಏನು ಮಾಡಿದರು?"

"ಪುಕ್ಕಟೆಯಾಗಿ ಐದೈದು ಲೀಟರು ಸೀ ಯೆಣ್ಣೆ ಹಂಚುವುದಾಗಿ ಸಾರಿದರು."

"ಹಂಚಿದರೇನು?"

"ಊಹುಂ.... ಜನರನ್ನು ಸರತಿಯಲ್ಲಿ ಸುತ್ತಿದ್ದಾರೆ. ಅವರ ಪಕ್ಷದ ಅಧ್ಯಕ್ಷರು ಬರಲಿದ್ದಾರಂತೆ. ಅವರ ಕೈಯಿಂದಲೇ ಸೀಮೆ ಕೊಡಿಸುವರಂತೆ..." ಎಂದು ಅಲ್ಲಿಂದ ಹೊ ಕಾರ್ಯಕರ್ತ. ನಾಯಕರಿಗೆ ಕೋಪ ಇಮ್ಮಡಿ

"ಎಲ್ಲಿ ಹೊರಟೆ?" ಅವರು ಅರಚಿದ

"ಡಬ್ಬದೊಂದಿಗೆ ಕ್ಯೂನಲ್ಲಿ ನಿಲ್ಲ ಕಾರ್ಯಕರ್ತ ಮಾಯವಾದ.

## ೧೫ ವಿಡಂಬನಾತ್ಮಕ ಮಿನಿ ಕಥೆಗಳು

# ವಿಷ!

• ಓಂಪ್ರಕಾಶ್ ಚತುರ್ವೇದಿ

ಪಕ್ಷ ಹೋಳಾಗುವ ಹೊತ್ತು ಬಂದಿತ್ತು. ಕಳಿತದಲ್ಲಿಯಂತೂ ಡೋಲಾಯಮಾನ ಸ್ಥಿತಿ. ಥದರಲ್ಲೇ ಸುದ್ದಿ ಹಬ್ಬಿತು- "ಮುಖ್ಯ ಮಂತ್ರಿಗಳು ಮರಣಾಸನ್ನರಾಗಿದ್ದಾರೆ."

ಅವರ ಕಚೇರಿಯಲ್ಲಿ ಫೋನುಗಳಿಗೆ ವಿರಾಮವೇ ಇರಲಿಲ್ಲ. ಅಲ್ಲಲ್ಲಿ ಅವರ ಅನುಯಾಯಿಗಳು ಆತಂಕ ಹೊತ್ತು ಕೂತಿದ್ದರು. ಇತ್ತ ಡಾಕ್ಟರುಗಳಂತೂ ಪರಸ್ಪರ ವಿಚಾರ ವಿನಿಮಯ, ಚಿಕಿತ್ಸೆಯ ಕ್ರಮ ಬದಲಿಸುವಿಕೆ, ಅಲ್ಲಿಂದ ಆ ಔಷಧಿ ತರಿಸು, ಇಲ್ಲಿಂದ ಈ ಮದ್ದು ತರಿಸು-ಇದರಲ್ಲೇ ಮುಳುಗಿ ಹೋಗಿದ್ದರು.

ಮುಖ್ಯ ಮಂತ್ರಿಗಳ ಶುಭ ಚಿಂತಕರು ಮಾಡಿಸದ ಪೂಜೆಯಿಲ್ಲ, ಕೇಳಿಸದ ಶಕುನವಿಲ್ಲ. ಊಹುಂ, ಚಿಕಿತ್ಸೆ ಚಿಕ್ಕಾಸಿನಷ್ಟೂ ಚಿಂತೆ ಕಡಿಮೆ ಮಾಡಲಿಲ್ಲ; ಪೂಜೆಯೂ ಫಲ ನೀಡಲಿಲ್ಲ.

"ನಾಯಕರ ಮೈ ನೀಲಿಗಟ್ಟುತ್ತಿದೆಯಂತೆ. ಬಾಯಲ್ಲಿ ನೊರೆ ಉಕ್ಕುತ್ತಿದೆಯಂತೆ."

"ಇದು ಅಂಥಿಂಥ ವಿಷವಲ್ಲ ಬಿಡಿ. ಛೆ, ಭಿನ್ನಮತೀಯರು ಇಂಥ ಕೆಲಸ ಮಾಡುವುದೆ?"

"ಇಲ್ಲಿಂದ ಅರವತ್ತು ಮೈಲು ದೂರದ ಹಳ್ಳಿಯಲ್ಲೊಬ್ಬನಿದ್ದಾನೆ, ಮಂತ್ರವಾದಿ. ಆತ ಎಂಥ ವಿಷವಾದರೂ ಮೈಯಿಂದ ಹೊರಬರುವಂತೆ ಮಾಡಬಲ್ಲನಂತೆ."

"ಹಾಗಿದ್ದರೆ ಕರೆಸಿ, ಹೆಲಿಕಾಪ್ಟರು ಇದ್ದೇ ಇದೆಯಲ್ಲ."

ಕೇವಲ ಅರವತ್ತೇ ನಿಮಿಷಗಳಲ್ಲಿ ಆ ಮಂತ್ರವಾದಿ ಮುಖ್ಯಮಂತ್ರಿಗಳ ಪಕ್ಕದಲ್ಲಿ ಕೂತು ಮಂತ್ರ ಉಚ್ಚರಿಸುತ್ತ ಅವರ ಮೈಮೇಲೆ ಏನೇನೋ ಎಸೆಯುತ್ತಲಿದ್ದ.

ಊಹುಂ. ಮಂತ್ರಕ್ಕಿಂತ ಉಗುಳೇ ಜಾಸ್ತಿ ಸಿಡಿಯಿತೇ ವಿನಾ ವಿಷವಿಳಿಯಲಿಲ್ಲ.

"ಭಾರೀ ವಿಷಸರ್ಪವನ್ನೇ ಕಡಿಸಿದ್ದಾರೆ," ಎನ್ನುತ್ತ ಜೋಲು ಮುಖ ಹಾಕಿ ಮಂತ್ರವಾದಿ ಎದ್ದ.

"ಛೆ, ಛೆ... ನಿಮಗಾಗದ್ದು ಯಾವುದಿದೆ? ಮತ್ತೊಮ್ಮೆ ಪ್ರಯತ್ನಿಸಿ," ಆತನನ್ನು ಕರೆಸಲು ಸಲಹೆ ನೀಡಿದ್ದಾತನೆ ಒತ್ತಾಯಿಸಿದ.

ಮತ್ತೆ ಮಂತ್ರಗಳ ಭರಾಟೆ ಶುರುವಾಯಿತು.

ಅರವತ್ತು ನಿಮಿಷಗಳು ಉರುಳಿದ್ದೇ ಗೊತ್ತಾಗಲಿಲ್ಲ.

# ಅನುಪಾತ

• ಗೋಪಾಲ ದ್ವಿವೇದಿ

ಮಾಜಿ ಮುಖ್ಯಮಂತ್ರಿಗಳನ್ನು ಅವರ ಪ್ಪತ್ತೊಂದನೆಯ ಜನ್ಮದಿನ ನಿಮಿತ್ತ ಜನತೆ ಭಿಮಾನದಿಂದ ಗೌರವಿಸಿ ಐದುನೂರಾಂದು ರೂಪಾಯಿಗಳ ಹಮ್ಮಿಣಿ ಅರ್ಪಿತು.

"ಏನಿದು? ನನಗೆ ಐವತ್ತೊಂದು ಸಾವಿರ ರೂಪಾಯಿಗಳ ಹಮ್ಮಿಣಿ ಅರ್ಪಿಸುವುದಾಗಿ ಹೇಳಿದ್ದಿರಲ್ಲ?" ಮಾ.ಮು.ಮಂ. ಕೇಳಿಯೇಬಿಟ್ಟರು.

"ಇದು ನಿಮ್ಮ ಆಡಳಿತಾವಧಿಯಲ್ಲಿ ಈಡೇರಿಸಿದ ಭರವಸೆಗಳ ಅನುಪಾತದಲ್ಲಿದೆ ರ್," ಸಂಘಟಕರು ಹೇಳಿಯೇಬಿಟ್ಟರು.



"ಬಹಳ ಹಿರಿಯ ನಾಗನ ನಂಜು ಇದು," ಮಂತ್ರವಾದಿ ತಲೆಗೆ ಕೈ ಹಚ್ಚಿ ಕೂತ.

"ಇನ್ನೊಂದೇ ಸಲ. ಈ ಬಾರಿ ಖಂಡಿತ ವಿಷವಿಳಿದೀತೆಂದು ನನ್ನ ಅಂತರಾತ್ಮ ಹೇಳುತ್ತಿದೆ," ಆತ ಮೂರನೆಯ ಬಾರಿ ಕೈ ತಿಕ್ಕುತ್ತ ಹಲ್ಲು ಗಿಂಜಿದ.

ಮೂರನೆಯ ಸಲ ಮಂತ್ರೋಚ್ಚಾರಣೆ ಮುಗಿಯುತ್ತಿದ್ದ ಹಾಗೆಯೇ ಮುಖ್ಯಮಂತ್ರಿಗಳ 'ಖಾಸಾ ಮನುಷ್ಯ'ನೊಬ್ಬ ನೆಲಕ್ಕೆ ಹೊಟ್ಟೆ ಹೊಸೆಯುತ್ತ ಸರಿದು ಒಳಗೆ ಬಂದ. ಎಷ್ಟೋ ವರ್ಷಗಳಿಂ ಶಾಸಕನಾಗಿಯೇ ಇದ್ದವ ಆತ. ಅನೇಕ ಸ ಮಂತ್ರಿಯಾಗುವ ಆಶ್ವಾಸನೆ ಪಡೆದರೂ ಮಂ ಮಂಡಲದಲ್ಲಿ ಸೇರ್ಪಡೆಯಾಗಿರಲಿಲ್ಲ.

ಹೊಟ್ಟೆ ಹೊಸೆಯುತ್ತ ಬಂದವನೆ ಕಾಟನ್ ಮುಖ್ಯ ಮಂತ್ರಿಗಳ ಕಾಲು ಚುಂಬಿಸಿದ.

ಮೈಯ ನೀಲಿ ಇಳಿಯಿತು. ನೊರೆ ಮರೆಯ ಯಿತು. ಮುಖ್ಯಮಂತ್ರಿಗಳ ಮುಖದಲ್ಲಿ ಮಂ ಹಾಸ ಮಿನುಗಿತು.

# ರಾಜನೂ ಪ್ರಜೆಗಳೂ

• ಸುರೇಂದ್ರ ಯಾದವ್ 'ಸ್ನಿಗ್ಧ'



"ದೇಶದಿಂದ ಬಡತನವನ್ನು ಹೊರಗೆ ಅಟ್ಟಲು, ಪೂರ್ಣ ಸಮಾಜವಾದವನ್ನು ಅನುಷ್ಠಾನಕ್ಕೆ ತರಲು ದಯವಿಟ್ಟು ನನ್ನ ಕೈಗಳನ್ನು ಬಲಪಡಿಸಿ," ರಾಜ ತನ್ನ ಪ್ರಜರನ್ನು ಕಳಕಳಿಯಿಂದ ಕೇಳಿಕೊಂಡ

"ನಮ್ಮವನೇ ಅಲ್ಲವೇ ಈ ರಾಜ.... ಇವನಪ್ಪ ಇವನಜ್ಜ ಎಲ್ಲರೂ ನಮ್ಮನ್ನಾಳಿದ ಪ್ರಭುಗಳೇ... ಅಂದ ಮೇಲೆ ಈತನ ಕೈ ಬಲ ಪಡಿಸುವುದು ನಮ್ಮನ್ನು ನಾವು ಬಲಪಡಿಸಿಕೊಂಡಂತೆ" ಎಂದು







ಂಡ ಪ್ರಜರು ರಾಜನ ಕೈ ಬಲಪಡಿಸಲು ಟ್ಟೆ-ಬಟ್ಟೆ ಕಟ್ಟಿ ನಿಂತರು.

ಆದರೆ ಕೆಲ ದಿನಗಳಲ್ಲೇ ತಾವು ಮಾಡಿದ್ದು ಪ್ಪೆ ಎಂದೆನಿಸಿತು. ಒಳಗೊಳಗೇ ಸಂಕಟಪಟ್ಟರು. ದಿದ್ದರು. ರಾಜ ತನ್ನ ಬಲವಾದ ಕೈಯಿಂದ ಸರ ಗಲ್ಲದ ಮೇಲೆ ಬಾಸುಂಡೆ ಮೂಡಿಸಿದ.

"ರಾಜನ್, ನೀವಿದೇನು ಮಾಡಿದಿರಿ?" ರು ಚುರು ಉರಿಯುವ ಗಲ್ಲಮುಟ್ಟಿಕೊಂಡು ಕೇಳಿದರು.

"ಏನಿಲ್ಲ. ನನ್ನ ಕೈ ಅದೆಷ್ಟು ಬಲಗೊಂಡಿದೆ ದು ಪರೀಕ್ಷಿಸಿದೆ, ಅಷ್ಟೆ," ರಾಜ ಕ್ರೂರ ನಗೆ

ಜನತೆ ಸುಮ್ಮನೆ ಸಹಿಸಿಕೊಂಡಿತು.

ಕೆಲವು ದಿನಗಳ ಮೇಲೆ ಮತ್ತೊಂದು ಗಲ್ಲದ ಲೂ ಬಾಸುಂಡೆಗಳೆದ್ದಾಗ ಬಹುತೇಕ ಜನಕ್ಕೆ ಳಿ ಬರುವುದೊಂದೇ ಬಾಕಿ. ಜನ ಇನ್ನೇನು ಯಿ ಬಿಡಬೇಕೆಂಬಷ್ಟರಲ್ಲೇ ಬೆನ್ನ ಮೇಲೆ ಗುದ್ದು ಬಿದ್ದವು. ಬವಳಿ ಬಂದವರು ಬೋರಲಾಗಿ ದ್ದ ಬಿಟ್ಟರು. ಅಷ್ಟಿಷ್ಟು ಶಕ್ತಿ ಉಳಿಸಿಕೊಂಡವರು, ಾಭಿಕ್ಷೆ ಯಾಚಿಸಿದರು.

"ನೀವೇ ಅಲ್ಲವೆ ನನ್ನ ಕೈಗಳನ್ನು ಬಲಪಡಿ ? ಬಡತನವನ್ನಂತೂ ದೇಶದಿಂದ ಹೊರಗ ನನ್ನಿಂದ ಸಾಧ್ಯವಾಗಲಿಲ್ಲ. ಬಡವರನ್ನು ಈ ೇಕದಿಂದ ಅಟ್ಟಿದರೆ ಬಡತನವಾದರೂ ಎಲ್ಲು ುತ್ತದೆ? ಇದು ಮೊದಲ ಹಂತ, ಅಷ್ಟೇ," ನು ಮತ್ತೆ ಕ್ರೂರ ನಗೆ ನಕ್ಕ.

ಜನತೆ ದಿಗ್ಭ್ರಾಂತರಾದರು. ಒಂದೆಡೆ ಸೇರಿ ಇದಕ್ಕೇನಾದರೂ ಪರಿಹಾರ ಹುಡುಕಬೇಕೆಂದು ನಿರ್ಧರಿಸಿಕೊಂಡರು. ಮುದುಕನೊಬ್ಬ ಪುಟ್ಟ ಭಾಷಣ ಬಿಗಿದ- "ಮಾಡಿದ್ದುಣ್ಣೋ ಮಹರಾಯಾ ಅಂತಾರೆ. ಅನುಭವಿಸೋಣ. ಆದರೆ ಇಂದಿಲ್ಲ ನಾಳೆ ಈ ರಾಜ ಎರಡೂ ಕೈ ಜೋಡಿಸಿ ನಮ್ಮೆದುರು ಬರುತ್ತಾನಲ್ಲ, ಆಗ ಆ ಕೈಗಳನ್ನು ಕಟ್ಟಿಹಾಕೋಣ."

ಗೂಢಚಾರರು ರಾಜನಿಗೆ ಸುದ್ದಿ ತಿಳಿಸಿದರು. ರಾಜ ತನಗಾಗಿ ಕೈ ಮುಗಿಯುವುದಕ್ಕೆಂದೇ ಎರಡು ಲೋಹದ ಕೈಗಳನ್ನು ತಯಾರಿಸಿಕೊಂಡು ತರ ಲೆಂದು ವಿಶೇಷಜ್ಞರ ತಂಡವೊಂದನ್ನು ವಿದೇಶಕ್ಕೆ ಕಳಿಸಿದನು. ●

# ಗೌಪ್ಯ ಸ್ಫೋಟ!

• ಜೋಗೇಶ್ವರಿ ಝಾ

ತರುಣ ಮಂತ್ರಿಯ ಪ್ರಣಯ ಪ್ರಸಂಗಗಳು ಆತನ ಶ್ರೀಮತಿಯ ಕಿವಿ ಸೇರಿ ಕಣ್ಣು ಕೆಂಪಗಾಗಿಸಿದವು. ಗಂಡನನ್ನಾಕೆ ತರಾಟೆಗೆ ತೆಗೆದುಕೊಂಡಳು. ತಾನೆಷ್ಟು ಎಚ್ಚರಿಕೆಯಿಂದ ಹೆಜ್ಜೆಯಿಟ್ಟರೂ ಸದ್ದು ಹೇಗಾಯಿತು ಎಂದು ತರುಣ ಮಂತ್ರಿ ತಲೆತುರಿಸಿಕೊಂಡ. ಬಗೆಹರಿಯಲಿಲ್ಲ.

ಇದರ ಹಿಂದೆ ಯಾರ ಕೈವಾಡವಿದೆ ಎಂದು ಪತ್ತೆದಾರನೊಬ್ಬನನ್ನು ನೇಮಿಸಿಕೊಂಡ ತರುಣ ಮಂತ್ರಿ. ಅವರ ಕಚೇರಿಯ ಜವಾನನೇ ಅಮ್ಮಾವ್ರ ಕಿವಿ ಊದಿದ್ದು ಎಂಬ ಸತ್ಯ ಗೊತ್ತಾಯಿತು.

ತತ್‌ಕ್ಷಣದಿಂದ ಜಾರಿಗೆ ಬರುವ ಆಜ್ಞೆಯೊಂದು ಹೊರಟಿತು. ಜವಾನನನ್ನು ಕೆಲಸದಿಂದ ತೆಗೆದು ಹಾಕಿದ ಆಜ್ಞೆ. ಹಾಗೆ ಕೆಲಸದಿಂದ ತೆಗೆದುಹಾಕಲು ಕೊಡಲ್ಪಟ್ಟ ಕಾರಣ- "ಆಡಳಿತಾತ್ಮಕ ಗೌಪ್ಯಗಳನ್ನು ಸ್ಫೋಟಗೊಳಿಸಿ ಸಲ್ಲದವರಿಗೆ ಸುದ್ದಿ ಮುಟ್ಟಿಸಿದ್ದು." ●

# ಹತ್ತು ಪೈಸೆ

• ಶ್ರೀನಾಥ ಪಾಂಡೇಯ

**ಸು**ಮಾರು ಇಪ್ಪತ್ತು ವರ್ಷಗಳವರೆಗೆ ವಿದೇಶದಲ್ಲಿದ್ದು ಭಾರತಕ್ಕೆ ಮರಳಿದ್ದವನಿಗೆ ತನ್ನ ಊರು ತುಂಬ ಬದಲಾಗಿದೆ ಎನಿಸಿತು. ಟ್ಯಾಕ್ಸಿಯಲ್ಲಿ ಮನೆಗೆ ಹಿಂತಿರುಗುತ್ತಿದ್ದ ಆತ ತಟ್ಟನೆ ಒಂದೆಡೆ, "ನಿಲ್ಲಿಸು," ಎಂದು ಡ್ರೈವರ್‌ಗೆ ಹೇಳಿದ.

'ಅರೇ! ಈ ವ್ಯಕ್ತಿ ಮಾತ್ರ ಇನ್ನೂ ಬದಲಾಗಿಲ್ಲ. ಅದೇ ಹತ್ತು ಪೈಸೆಗೇ ಗಂಟುಬಿದ್ದಿದ್ದಾನಲ್ಲ!' ಎಂದು ಅಚ್ಚರಿಪಟ್ಟ.

ಮರುದಿನ ಬಿಡುವು ಮಾಡಿಕೊಂಡು ಹತ್ತು



ಪೈಸೆಯಾತನಿದ್ದಲ್ಲಿಗೆ ಹೋದ. ಜನ ಮುಕುರಿದ್ದರು. ಒಂದು ಹತ್ತರ ನೋಟು ಮತ್ತು ಒಂದು ಹತ್ತು ಪೈಸೆಯ ನಾಣ್ಯ ಎರಡನ್ನೂ ಆತನ ತಟ್ಟೆಯಲ್ಲಿ ಹಾಕುತ್ತಿದ್ದರು. ಹತ್ತು ಪೈಸೆಯ ನಾಣ್ಯವನ್ನು ಮಾತ್ರ ಎತ್ತಿ ತನ್ನ ಜೋಳಿಗೆಗೆ ಹಾಕಿಕೊಳ್ಳುತ್ತಿದ್ದ ಆ ವ್ಯಕ್ತಿ ಹತ್ತರ ನೋಟನ್ನು ಅದರ ಒಡೆಯನಿಗೇ ಮರಳಿಸುತ್ತಿದ್ದ. ಮರಳಿಸಲ್ಪಟ್ಟ ನೋಟನ್ನು ಕಣ್ಣಿಗೊತ್ತಿಕೊಂಡು ಜನ ನೆಮ್ಮದಿ, ವಿಶ್ವಾಸದಿಂದ, ಧನ್ಯಭಾವ ಹೊತ್ತು ಮರಳುತ್ತಿದ್ದರು.

ಸ್ವಲ್ಪ ಗದ್ದಲ ಕಡಿಮೆಯಾದ ಮೇಲೆ ಆತ ಹತ್ತು ಪೈಸೆಯಾತನನ್ನು ಸಮೀಪಿಸಿದ. ತಾನೂ ಒಂದು ಹತ್ತರ ನೋಟು, ಒಂದು ಹತ್ತು ಪೈಸೆಯ ನಾಣ್ಯವನ್ನು ತಟ್ಟೆಗೆ ಹಾಕಿದ. ಆ ವ್ಯಕ್ತಿ ವಾಡಿಕೆಯಂತೆ ನಾಣ್ಯವನ್ನು ಜೋಳಿಗೆಗೆ ಹಾಕಿ, ನೋಟನ್ನು ಕೊಟ್ಟಾತನ ಕೈಗಿತ್ತ.

"ನಾನು ಸುಮಾರು ಇಪ್ಪತ್ತು ವರ್ಷ ವಿದೇಶದಲ್ಲಿದ್ದು ನಿನ್ನೆಯಷ್ಟೆ ಮರಳಿದೆ. ಅಲ್ಲಿಗೆ ಹೋಗುವ ಮುಂಚೆಯೂ ನಿಮ್ಮನ್ನು ನೋಡಿದ್ದೇನೆ. ಆದರೆ ನೀವಿನ್ನೂ ಅಂದಿನಂತೆ ಹತ್ತು ಪೈಸೆಯನ್ನು ಮಾತ್ರ ಎತ್ತಿಕೊಳ್ಳುತ್ತೀರಿ, ನೋಟನ್ನು ಮರಳಿಸುತ್ತೀರಿ.

## ೧೩ ವಿಡಂಬನಾತ್ಮಕ ಮಿನಿ ಕಥೆಗಳು

ಯಾಕೆ? ಜನ ಭಕ್ತಿಯಿಂದ ಹತ್ತರ ನೋಟನ್ನು ಕೊಟ್ಟಿರುತ್ತಾರೆ. ತೆಗೆದುಕೊಂಡು ಬಿಡಬಾರದೆ?"

ಹತ್ತು ಪೈಸೆ ಯಾತನಿಗೆ ನಗೆ ಬಂತು.

"ಜನ ಭಕ್ತಿ ಹಾಗೂ ನಂಬಿಕೆ ಎರಡನ್ನೂ ಇಟ್ಟುಕೊಂಡು ನನ್ನ ಬಳಿ ಬರುತ್ತಾರೆ. ನಾನು ಮರಳಿಸುವ ನೋಟು ತಮಗೆ ಶುಭ ತರುವುದೆಂದು ನಂಬಿಕೊಂಡಿರುವವರು ಅವರು. ಒಂದು ವೇಳೆ ನಾನು ಒಂದೇ ಒಂದು ಸಲ ಹತ್ತರ ನೋಟನ್ನು ಜೋಳಿಗೆಗೆ ಹಾಕಿಕೊಂಡೆನೆನ್ನಿ. ಮುಗಿಯಿತು. ಜನ ದೂರವಾಗಿ ಬಿಡುತ್ತಾರೆ. 'ಹನಿ ಹನಿ ಕೂಡಿದರೆ ಹಳ್ಳ' ಎಂಬುದು ನನಗೆ ಗೊತ್ತಿದೆ. ಅದು ಹಳ್ಳವಲ್ಲ, ಹಣದ ಕೊಳ್ಳವೇ ಆಗಿದೆ. ಹೀಗೆ ಈ ಇಪ್ಪತ್ತೈದು ವರ್ಷದಲ್ಲಿ ನಾನು ಹದಿನೈದು ಲಕ್ಷ ರೂಪಾಯಿಗಳನ್ನು ಸಂಪಾದಿಸಿದ್ದೇನೆ, ತಿಳಿಯಿತೆ? ಸದ್ಯ ಬರಲಿರುವ ಚುನಾವಣೆಯಲ್ಲಿ ಇದೇ ಮತ ಕ್ಷೇತ್ರದಿಂದ ಸ್ಪರ್ಧಿಸ ಬಯಸಿದ್ದೇನೆ. 'ಹತ್ತು ಪೈಸೆ'ಯನ್ನೇ ನನ್ನ ಚಿಹ್ನೆಯಾಗಿ ಬಳಸಲು ಬಯಸಿದ್ದೇನೆ. ಖಂಡಿತ ನಾನು ಗೆಲ್ಲುತ್ತೇನೆ. ಇದು ಉಳಿದ ಪಕ್ಷಗಳ ಅಭ್ಯರ್ಥಿಗಳಿಗೂ ಗೊತ್ತಿದೆ. ನನ್ನನ್ನವರು ಸ್ಪರ್ಧೆಯಿಂದ ಹಿಂದಕ್ಕೆ ಸರಿಯಲು ಕೇಳಿಕೊಳ್ಳುತ್ತಾರೆ. ಹೆಚ್ಚು ಹಣವನ್ನು ಯಾವ ಪಕ್ಷದ ಅಭ್ಯರ್ಥಿ ನೀಡಲು ಒಪ್ಪುತ್ತಾನೋ ಅವನ ಬೆಂಬಲಾರ್ಥ ನಾನು ಕಣದಿಂದ ಹಿಂದೆ ಸರಿಯುತ್ತೇನೆ. ಈಗ ಹೇಳಿ. ಜನ ನೀಡಿದ ಹತ್ತು ಪೈಸೆ ಹೆಚ್ಚೊ? ಹತ್ತು ರೂಪಾಯಿ ಹೆಚ್ಚೊ?"

ಆತ ಹತ್ತು ಪೈಸೆಯಾತನ ವ್ಯವಹಾರ ಜ್ಞಾನಕ್ಕೆ ತಲೆಬಾಗಿದ.

●

# ಪ್ರತೀಕ್ಷೆ

● ನಿತಾಯಿ ಘೋಷ್

ಆತ ಯಾವಾಗಲೂ ಆ ಗಿಡದ ಕೆಳಗೆ ಕೂತುಕೊಂಡೇ ಇರುತ್ತಿದ್ದ. ಮೌನವಾಗಿ, ಆಚೀಚೆ ನೋಡುತ್ತಲೇ ಕೂತಿರುತ್ತಿದ್ದ ಆತನನ್ನು ಈತ ಬಹಳ ದಿನಗಳಿಂದಲೂ ಗಮನಿಸಿದ್ದ. ಒಂದು ದಿನ ಇದರ ರಹಸ್ಯವೇನಿರಬಹುದೆಂದು ಯೋಚಿಸಿದ: 'ಈತ ಇಲ್ಲಿ ಹೀಗೇಕೆ ಕೂತಿರುತ್ತಾನೆ? ಅದೂ ಮೌನವಾಗಿ? ಇಲ್ಲಿ ಕೂತು ಮಾಡುತ್ತಾನಾದರೂ ಏನು? ಮುಖ ನೋಡಿದರೆ ಯಾವುದೇ ಚಿಂತೆ-ಬಾಧೆ ಇದ್ದಂತೆ ತೋರುವುದಿಲ್ಲ....' ಇಷ್ಟು ಯೋಚಿಸಿದವ ಎಂದಿನಂತೆ ತನ್ನ ಪಾಡಿಗೆ ತಾನು ಹೋಗಲಿಲ್ಲ. ಆ ಮೌನಿಯ ಬಳಿ ಹೋಗಿ ಕೇಳಿಯೇ ಬಿಟ್ಟ-

"ಅಣ್ಣಯ್ಯಾ ನೀನಿಲ್ಲಿ ಕೂತುಕೊಂಡು ಏನು ಮಾಡುತ್ತಿ?"

"ದಾರಿ ಕಾಯುತ್ತೇನೆ."

"ಯಾರದು?"



"ಇಲ್ಲಿ ಬಾ. ಕೂತುಕೋ, ಮೊದಲು ಕಥೆಯೊಂದನ್ನು ಹೇಳುತ್ತೇನೆ."

ಈತ ಆತನ ಬಳಿ ಹೋಗಿ ಕೂತ.

"ಅಗಸನೊಬ್ಬನಿದ್ದ. ಅಂದ ಮೇಲೆ ಕತ್ತೆ ಇರಲೇಬೇಕಲ್ಲ. ಅದು ಹತ್ತು ವರ್ಷಗಳಿಂದಲೂ ಅಗಸನ ಅಣತಿಯನ್ನು ಪಾಲಿಸುತ್ತಿತ್ತು. ಒಂದು ದಿನವಾದರೂ ತಂಟೆ-ತಕರಾರು ಮಾಡಿರಲಿಲ್ಲ. ಒಂದು ದಿನ ಮಿತ್ರ ಕತ್ತೆಯೊಂದಿಗೆ ಭೆಟ್ಟಿಯಾಯಿತು. 'ಏನು ಮಿತ್ರಾ? ಏನು ಸಮಾಚಾರ?' ಎಂದು ಕೇಳಿತು. 'ಹೂಂ..... ಮಜವಾಗಿದ್ದೇನೆ. ಆದರೆ ನಿನ್ನ ಬಗ್ಗೆ ನನಗೆ ಅನುಕಂಪ ಉಂಟಾಗುತ್ತಿದೆ. ನೀನಿನ್ನೂ ಆ ಹಳೆಯ ಒಡೆಯನ ಬಳಿಯೇ ದುಡಿಯುತ್ತಿದ್ದೀಯಲ್ಲಾ, ಯಾಕೆ?' ಮಿತ್ರನಿಗೆ ಏನು ಹೇಳಬೇಕು? ಆದರೂ ಹೇಳತೊಡಗಿತು- 'ವಿಷಯ ಏನಂದ್ರೆ.... ಥೂ ಹ್ಯಾಗ್ಹೇಳ್ಲಿ? ನಮ್ಮೊಡೆಯ ಇದಾನಲ್ಲಾ, ಒಂದಿನ ತನ್ನ ಮಗಳಿಗೆ ಹೇಳಿದ್ದನ್ನು ಕೇಳಿಸ್ಕೊಂಡೆ ನೋಡು..... ಹೀಗಾಗಿ ಆವನ ಹತ್ತಿರವೇ ಇರಬೇಕಾಗಿದೆ.' ಮಿತ್ರ ಕತ್ತೆಗೆ ಕುತೂಹಲ ಕೆರಳಿತು- 'ಏನು ಹೇಳಿದ ತನ್ನ ಮಗಳಿಗೆ?' ಇದಕ್ಕೋ ನಾಚಿಕೆ. ಆದರೂ, 'ನಿನ್ನನ್ನು ಯಾವುದಾದರೂ ಕತ್ತೆಗೆ ಕೊಟ್ಟು ಮದುವೆ ಮಾಡ್ತೀನಿ'ಅಂತಂದ. ಅಂದಿನಿಂದ ನಾನು ಆ ದಿನದ ದಾರಿ ಕಾಯುತ್ತಲೇ ಇದ್ದೇನೆ. ಒಂದಿಲ್ಲೊಂದು ದಿನ ಆತನ ದೃಷ್ಟಿಯಲ್ಲಿ ನಾನು ಒಳ್ಳೆಯ ವರನಾಗಿ ಕಾಣಿಸಬಹುದೂಂತ...."

ಇಷ್ಟು ಹೇಳಿದ ಮೇಲೆ ಆತ ಮತ್ತೆ ಮೌನ ಧರಿಸಿದ.

"ಆದರೆ ಇದಕ್ಕೂ ನಿನಗೂ ಏನು ಸಂಬಂಧ ಅಂತ. ಅರ್ಥವಾಗಲಿಲ್ಲ" ಈತ ಗೊಂದಲಕ್ಕೀಡಾದ.

ಮೌನಿಯೊಮ್ಮೆ ಮುಗುಳ್ನಕ್ಕ.

"ತಮ್ಮಾ... ನಮ್ಮ ನಾಯಕರು 'ಒಂದಿಲ್ಲೊಂದು ದಿನ ನಮ್ಮ ದೇಶದಲ್ಲಿ ಸಮಾಜವಾದ ಬರುತ್ತದೆ' ಅಂತ ಹೇಳ್ತಾನೇ ಇದ್ದಾರಲ್ಲ.... ನಾನು ಆ ಸಮಾಜವಾದದ ಬರುವಿಕೆಯ ದಾರಿ ಕಾಯುತ್ತಿದ್ದೇನೆ. ಅಲ್ಲಾ, ಕತ್ತೆಯಂಥಾ ಕತ್ತೆ ಅಗಸನ ಅಳಿಯನಾಗುವ ಕ್ಷಣದ ದಾರಿ ಕಾಯಬಹುದೆಂದ ಮೇಲೆ ನಾನು ಅದಕ್ಕಿಂತಲೂ ಕಡೆಯೇ?"

ಈತ ಆತನ ಅಚಲ ನಂಬಿಕೆಯನ್ನು ಅರಿತು ಅತೀವ ಶ್ರದ್ಧೆಯಿಂದ ಸಾಷ್ಟಾಂಗವೆರಗಿದ. ●





# ಏಡ್ಸ್! ವೇಶ್ಯಾಗೃಹದಿಂದ ಶಯನಗೃಹಕ್ಕೆ

"ಭಾರತದಲ್ಲಿ ಏಡ್ಸ್ ಸೋಂಕಿಗೆ ತುತ್ತಾಗಿರುವ ಸ್ತ್ರೀಯರ ಪೈಕಿ ಶೇ.೯೦ರಷ್ಟು ಜನ ಈ ಸೋಂಕನ್ನು ತಮ್ಮ ಗಂಡಂದಿರಿಂದಲೇ ಪಡೆದುಕೊಂಡಿದ್ದಾರೆ!" ಇದು ಆಘಾತಕರ ಅಂಶವಾದರೂ ಇತ್ತೀಚಿನ ಸಮೀಕ್ಷೆಯಿಂದ ತಿಳಿದು ಬಂದ ಸತ್ಯಸಂಗತಿ ಎಂಬುದು ಇನ್ನಷ್ಟು ದುಗುಡ ಹೆಚ್ಚಿಸುವ ವಿಚಾರ.

ಈ ಪ್ರಮಾಣದಲ್ಲಿ ಅಮಾಯಕ ಸ್ತ್ರಿಯರು ಏಡ್ಸ್ ಸೋಂಕಿಗೆ ತುತ್ತಾಗಲು ಕಾರಣವೇನು?

"ಹೆಂಡತಿಯೊಂದಿಗೆ ನಡೆಸುವ ಲೈಂಗಿಕ ಚಟುವಟಿಕೆ ಸಂತಾನಾಭಿವೃದ್ಧಿಗೆ. ಅದೇ ಗೆಳತಿಯೊಂದಿಗೋ, ವೇಶ್ಯೆಯೊಂದಿಗೋ ನಡೆಸುವ ಲೈಂಗಿಕ ಚಟುವಟಿಕೆ ಮನರಂಜನೆಗೆ ಎಂದು ಭಾರತೀಯ ಪುರುಷರು ತಿಳಿದುಕೊಂಡಿರುವದು."

ಇದು ಮುಂಬಯಿಯ ವಾಡಿಯಾ ಹೆರಿಗೆ ಆಸ್ಪತ್ರೆಯ ತಜ್ಞ ವೈದ್ಯ ಡಾ. ರಷೀದ್ ಮರ್ಚಂಟ್ ನಡೆಸಿದ ಸಮೀಕ್ಷೆಯಿಂದ ತಿಳಿದು ಬಂದಿದೆ. ಸತತ ಮೂರು ವರ್ಷಗಳ ಕಾಲ ಅವರು ಭಾರತೀಯ ಆರೋಗ್ಯ ಸಂಘಟನೆಯ ಪ್ರಧಾನ ಕಾರ್ಯದರ್ಶಿ ಡಾ. ಐ. ಎಸ್. ಗಿಲಾಡರ ಸಹಯೋಗದಲ್ಲಿ ದೇಶದ ಆಯ್ದ ನಗರಗಳಲ್ಲಿ ತಮ್ಮ ಸಮೀಕ್ಷೆಯನ್ನು ನಡೆಸಿದರು.

ಮಧ್ಯಮ ವರ್ಗಕ್ಕೆ ಸೇರಿದ ಗರ್ಭಿಣಿಯರನ್ನೇ ವಿಶೇಷವಾಗಿ ತಮ್ಮ ಸಮೀಕ್ಷೆಗೆ ಆಯ್ದುಕೊಂಡಿದ್ದ ಇವರು ಶೇ. ಒಂದರಷ್ಟು ಮಹಿಳೆಯರಲ್ಲಿ 'ಏಡ್ಸ್' ರೋಗವನ್ನು ತರಬಲ್ಲ ಎಚ್.ಐ.ವಿ. ಧನಾಂಶ ರೋಗಾಣುಗಳಿರುವುದನ್ನು ಪತ್ತೆ ಹಚ್ಚಿದ್ದಾರೆ. ದೇಶದಾದ್ಯಂತ ಈ ಸಮೀಕ್ಷೆ ನಡೆದಿಲ್ಲವಾದರೂ ಈ ಫಲಿತಾಂಶಗಳು ಮಾತ್ರ ಅಂಥದೊಂದು ಸಮೀಕ್ಷೆ ನಡೆಯಲೇಬೇಕಾದ ಅವಶ್ಯಕತೆಯನ್ನು ಎತ್ತಿ ತೋರಿಸಿದೆ.

ಈ ಮುನ್ನ ೧೯೮೬ರಲ್ಲಿ 'ಏಡ್ಸ್' ರೋಗಿಗಳ ಪತ್ತೆಗಾಗಿ ಅಧ್ಯಯನವೊಂದನ್ನು ನಡೆಸಲಾಗಿತ್ತು. ಆಗ 'ಏಡ್ಸ್' ರೋಗಾಣು ಸೋಂಕಿಗೆ ತುತ್ತಾದ ಶೇ. ೦.೫ರಷ್ಟು ವೇಶ್ಯೆಯರನ್ನು ಪತ್ತೆ ಹಚ್ಚಲಾಗಿತ್ತು. ಆದರೆ ಇಂದು ಈ ಸಂಖ್ಯೆ ಎರಡು ಪಟ್ಟು

• ಹ.ರಾ.ಸು.

('ಇಂಡಿಯಾ ಟುಡೆ'ಯಲ್ಲಿ ಪ್ರಕಟವಾದ ಒಂದು ವರದಿಯ ಆಧಾರದಿಂದ)

ಹೆಚ್ಚಾಗಿದ್ದು, ಇವರೆಲ್ಲ ಮನೆತನಸ್ಥ ಗೃಹಿಣಿಯರೇ ಆಗಿದ್ದಾರೆ.

ಹಾಗಾದರೆ ಈ ಸೋಂಕು ಇವರಿಗೆ ತಗುಲಿ ಕೊಂಡದ್ದಾದರೂ ಹೇಗೆ?

ಶೇ. ಮೂರರಷ್ಟು ಗೃಹಿಣಿಯರು ಈ ಸೋಂಕನ್ನು ತಮ್ಮ ಪುರುಷ ಸ್ನೇಹಿತರಿಂದ ಪಡೆದುಕೊಂಡಿದ್ದರೆ, ಶೇ. ೯೭ರಷ್ಟು ಗೃಹಿಣಿಯರಿಗೆ ಅವರ ಗಂಡಂದಿರೇ 'ರೋಗಾಣು ದಾನ' ಮಾಡಿದ್ದಾರೆ. ಅಂದರೆ ಈ ಶೇ. ೯೭ ರಷ್ಟು ಗೃಹಿಣಿಯರ ಗಂಡಂದಿರು ವೇಶ್ಯೆಯರೊಂದಿಗೆ ಲೈಂಗಿಕ ಚಟುವಟಿಕೆ ನಡೆಸುವುದೂ ಒಂದು 'ಮನರಂಜನೆ'ಯ ಕ್ರಿಯೆ ಎಂದು ಭಾವಿಸಿದ್ದಾರೆಂದಾಯಿತು.

ಲೈಂಗಿಕ ಚಟುವಟಿಕೆಯನ್ನು 'ಮನರಂಜನೆ' ಎಂದು ಭಾವಿಸಿರುವವರಲ್ಲಿ ಟ್ರಕ್ ಚಾಲಕರು, ವಲಸೆ ಹೋಗುವ ಕೂಲಿಗಳು, ಉದ್ಯಮಗಳಲ್ಲಿ ದುಡಿಯುವ ನೌಕರರು, ಮತ್ತು ಆಗಿಂದಾಗ್ಗೆ ವೇಶ್ಯಾ ಗೃಹಗಳಿಗೆ ಭೇಟಿ ನೀಡುವ ಚಟ ಬೆಳೆಸಿಕೊಂಡಿರುವ ಪುರುಷರು ಸೇರಿದ್ದಾರೆ ಎನ್ನುತ್ತದೆ ಸಮೀಕ್ಷೆಯ ವರದಿ.

ಈ ರೀತಿ ವೇಶ್ಯಾ ಸಂಗದ ಚಟ ಅಂಟಿಸಿಕ್ಕೊಂಡಿರುವ ಪುರುಷರಿಂದಾಗಿ " 'ಏಡ್ಸ್' ರೋಗಾಣು ವೇಶ್ಯಾಗೃಹದಿಂದ ಶಯನ ಗೃಹವನ್ನು ಪ್ರವೇಶಿಸಿದೆ" ಎಂಬ ಅಂಶವನ್ನು ಸಮೀಕ್ಷಾ ವರದಿ ಹೊರಗೆಡವಿದೆ.

ಹಾಗಾದರೆ ಈ ರಕ್ತ ಬೀಜಾಸುರ ಸಂತತಿಯನ್ನು ಸರಬರಾಜು ಮಾಡುವ ನಿರ್ದಿಷ್ಟ ಸಮೂಹ ಯಾವುದು?

ಈ ಪ್ರಶ್ನೆಗೆ ರೋಗಾಣುಗಳನ್ನು ತಮ್ಮೊಳಗೆ ಅಡಗಿಸಿಕೊಂಡಿರುವ ಗರ್ಭಿಣಿಯರೇ ಉತ್ತರಿಸಬೇಕಾಗಿದೆ.

ಯಾಕೆಂದರೆ ೧೯೯೩ರಲ್ಲಿ ಎಚ್.ಐ.ವಿ. ಧನಾಂಶ ಸೋಂಕು ಹೊಂದಿದ ಸ್ತ್ರೀಯರ ಸಂಖ್ಯೆ ಶೇ. ೦.೬೭ರಷ್ಟು ಇದ್ದದ್ದು ೧೯೯೪ರ ಮಧ್ಯಭಾಗದ ವೇಳೆಗೆ ೧.೦೭ಕ್ಕೆ ಏರಿತು. ೨೩ ವರ್ಷಗಳೊಳಗಿನ ೨೫,೩೦೦ ಗರ್ಭಿಣಿಯರನ್ನು ತಮ್ಮ ಅಧ್ಯಯನಕ್ಕೆ ಆಯ್ದುಕೊಂಡಿದ್ದ ಡಾ. ಗಿಲಾಡ್ ಮತ್ತು ಡಾ. ಮರ್ಚ್‌ಂಟರ ಗಮನವನ್ನು ಈ ವಿಷಯ ಸೆಳೆಯಿತು.

ಅಂದರೆ ಈಗ ಭಾರತದಲ್ಲಿ 'ಏಡ್ಸ್' ಸೋಂಕಿಗೆ ತುತ್ತಾದವರ ನಿಖರವಾದ ಸಂಖ್ಯೆ ಎಷ್ಟು?

"ಅಮೆರಿಕದಲ್ಲಿರುವ 'ಏಡ್ಸ್' ರೋಗಿಗಳಿಗಿಂತಲೂ ಹತ್ತು ಪಟ್ಟು ಹೆಚ್ಚು!" ಗಾಬರಿಗೀಡುಮಾಡುವ ವಿದ್ಯಮಾನ ಇದು. ಆದರೂ ಒಂದು ಸಮಾಧಾನಕರ ಸಂಗತಿಯೆಂದರೆ ಸೋಂಕು ತಗುಲಿದವರ ಸಂಖ್ಯೆ ಶೇ. ೧.೦೭ರಲ್ಲೇ ಸ್ಥಗಿತಗೊಂಡಿರುವುದು.

"ಆದರೆ ಎಚ್.ಐ.ವಿ. ರೋಗಾಣು ಹೊಂದಿರುವ ಗರ್ಭಿಣಿಯರು ವೈದ್ಯಕೀಯ ಚಿಕಿತ್ಸೆಗೆ ಒಳಗಾಗಲು ನಿರಾಕರಿಸುತ್ತಿರುವುದು ಧೃತಿಗೆಡಿಸುವ ವಿಷಯವಾಗಿದೆ. ಯಾಕೆಂದರೆ ಹೀಗೆ ಚಿಕಿತ್ಸೆಯನ್ನು ನಿರಾಕರಿಸುವ ಗರ್ಭಿಣಿಯರಿಂದ ಜನ್ಮ ಪಡೆದ ಶೇ. ೧೦೦ರಷ್ಟು ಮಕ್ಕಳು ತಕ್ಷಣಕ್ಕಲ್ಲದಿದ್ದರೂ ಕೆ[illegible] ವರ್ಷಗಳಲ್ಲಿಯೇ ತಬ್ಬಲಿಗಳಾಗುತ್ತವೆ. ಶೇ. ೩[illegible] ರಷ್ಟು ಮಕ್ಕಳು ಮುಂದಿನ ೧೦ ವರ್ಷಗಳ[illegible] ತಾಯಂದಿರಿಂದ ಬಳುವಳಿಯಾಗಿ ಬಂದ 'ಏಡ್ಸ್' ಸೋಂಕಿನಿಂದಾಗಿ ಸಾವನ್ನಪ್ಪುತ್ತವೆ," ಎನ್ನುತ್ತ[illegible] ಸಮೀಕ್ಷಾ ಫಲಿತಾಂಶ.

ಇದರ ಸತ್ಯಾಂಶವನ್ನು ಅರಿಯಲು ನಾ[illegible] ರಾಷ್ಟ್ರೀಯ ಏಡ್ಸ್ ನಿಯಂತ್ರಣ ಸಂಘಟ[illegible] ೧೯೯೫ರ ಮಾರ್ಚ್ ಒಂದರಂದು ಪ್ರಕ[illegible] ಪಡಿಸಿದ ದಾಖಲೆಯನ್ನು ಪರಿಶೀಲಿಸುವುದು ಸೂಕ್ತ. ಅದರ ಪ್ರಕಾರ ದೇಶದಲ್ಲಿ ಒಟ್ಟು ೧,೦೩[illegible] ಜನ ಏಡ್ಸ್ ರೋಗಿಗಳಿದ್ದರೆ, ೧೮ ಸಾವಿರ ಜ[illegible] ಎಚ್.ಐ.ವಿ. ಸೋಂಕಿಗೆ ತುತ್ತಾಗಿದ್ದಾರೆ. ಇ[illegible] ವರದಿಯೇ ಆಗದಿರುವ ಎಚ್.ಐ.ವಿ. ಸೋಂಕಿ[illegible] ಪ್ರಕರಣಗಳ ಸಂಖ್ಯೆ ೪೦ ಲಕ್ಷವನ್ನು ಮೀರುತ್ತ[illegible] ಇವರಲ್ಲಿ ಎರಡು ಲಕ್ಷಕ್ಕೂ ಹೆಚ್ಚು ಜನ 'ಏಡ್ಸ್' ರೋಗಕ್ಕೆ ಬಲಿಯಾಗಲಿದ್ದಾರೆ.

ಈ ರಾಷ್ಟ್ರೀಯ ಏಡ್ಸ್ ನಿಯಂತ್ರಣ ಸಂಘ[illegible] ನೆಯ ದಾಖಲೆ ಒತ್ತಟ್ಟಿಗಿರಲಿ, ಇದಕ್ಕಿಂತ ಭೀ[illegible] ಎನ್ನಿಸುವ, ಅಂಶವನ್ನು ಡಾ. ಗಿಲಾಡ್ ನೀಡಿದ್ದಾ[illegible] ಇದೊಂದು ರೀತಿಯಲ್ಲಿ ಅವರು ಬಾರಿಸಿರು[illegible] ಎಚ್ಚರಿಕೆ ಗಂಟೆಯೇ ಎನ್ನಬೇಕು. ಅವರ ಪ್ರಕ[illegible]

"ಸನ್, ೨,೦೦೦ ದ ವೇಳೆಗೆ ದೇಶದಲ್ಲಿ ಮೂರು ಕೋಟಿ ಜನ ಎಚ್.ಐ.ವಿ. ಸೋಂಕಿಗೆ ತುತ್ತಾಗಲಿದ್ದು ಪ್ರತಿದಿನ ೧೦,೦೦೦ ಜನ ಸಾವನ್ನಪ್ಪುವ ಸಂಭವವಿದೆ. ಮೇಲ್ನೋಟಕ್ಕೆ ಈ ಅಂಕಿ ಸಂಖ್ಯೆಗಳೆಲ್ಲ ನಿರ್ಜೀವವೂ ಸಂವೇದನಾರಹಿತವೂ ಎನ್ನಿಸಿದರೂ ಒಮ್ಮೆ ಇವು ಚಲನಶೀಲವಾದಾಗ, ತಮ್ಮ ಕಬಂಧ ಬಾಹುವನ್ನು ಚಾಚತೊಡಗಿದಾಗ ಈ ಅಂಕಿ ಸಂಖ್ಯೆಗಳ ಭೀಕರ ಪರಿಣಾಮ ನಮ್ಮೆದುರು ಪ್ರಕಟವಾಗಲಿದೆ. ಅಂದರೆ 'ಏಡ್ಸ್' ಪ್ರತಿದಿನ ೫,೦೦೦ ಜನ ವಿಧವೆಯರನ್ನು, ಅನಾಥರನ್ನು ಮತ್ತು ಇದರ ಎರಡು ಪಟ್ಟು 'ಏಡ್ಸ್' ರೋಗ ಪೀಡಿತ ಮಕ್ಕಳನ್ನು ಸೃಷ್ಟಿಸಲಿದೆ! 'ಏಡ್ಸ್' ಸೋಂಕಿಗೆ ತುತ್ತಾದ ಬಹು ಸಂಖ್ಯೆಯ ಗೃಹಿಣಿಯರು ಅನೇಕ ಸಾಮಾಜಿಕ ಕಾರಣಗಳಿಗಾಗಿ ಮತ್ತಷ್ಟು ಸಂಕೀರ್ಣ ರೋಗಗಳ ಗೂಡಾಗಿ ಕೊನೆಯುಸಿರೆಳೆಯಲಿದ್ದಾರೆ."

ಅವರ ಈ ಎಚ್ಚರಿಕೆಯನ್ನು ಈಗಿಂದೀಗಲೇ ಗಂಭೀರವಾಗಿ ಪರಿಗಣನೆಗೆ ತೆಗೆದುಕೊಳ್ಳದಿದ್ದಲ್ಲಿ ನಮಗೇ ಅರಿವಿಲ್ಲದಂತೆ 'ಏಡ್ಸ್'ನ ಪ್ರಭಾವಕ್ಕೆ ತುತ್ತಾಗಬೇಕಾಗುತ್ತದೆ.

'ಏಡ್ಸ್' ಸೋಂಕಿಗೆ ಸ್ತ್ರೀಯರು ಪುರುಷರಿಗಿಂತಲೂ ಹೆಚ್ಚಾಗಿ ತುತ್ತಾಗುತ್ತಾರೆ ಎಂಬುದು ಈಗಾಗಲೇ ಅನೇಕರ ಅರಿವಿಗೆ ಬಂದಿದೆ. ಸ್ತ್ರೀಯರೇ ಹೆಚ್ಚಾಗಿ ತುತ್ತಾಗಲು ಕಾರಣವೆಂದರೆ ಇವರು ತಮ್ಮ ಗಂಡ ಅಥವಾ ಸ್ನೇಹಿತರೊಂದಿಗೆ ಲೈಂಗಿಕ ಚಟುವಟಿಕೆಯ ವಿಷಯದಲ್ಲಿ ಸೂಕ್ತ ಎಚ್ಚರಿಕೆವಹಿಸದಿರುವುದು. ಲೈಂಗಿಕ ಕ್ರಿಯೆಯಲ್ಲಿ ತೊಡಗುವಾಗ ಕಾಂಡೋಮ್‌ಗಳನ್ನು ಉಪಯೋಗಿಸಲು ಪುರುಷರಿಗೆ ಒತ್ತಾಯಿಸದಿರುವುದು, ಕಾಲಕಾಲಕ್ಕೆ ವೈದ್ಯಕತಪಾಸಣೆಗೆ ಒಳಗಾಗದಿರುವುದು.

ಸ್ವಚ್ಛಂದ ಲೈಂಗಿಕತೆಯಿಂದ ಏಡ್ಸ್ ರೋಗ ತಗುಲಬಹುದು ಎಂಬ ತಿಳಿವಳಿಕೆ ನಗರ ಪ್ರದೇಶಗಳ ಜನರಲ್ಲಿ ಈಗಾಗಲೇ ಮೂಡಿದೆ. ಇದಕ್ಕೆ ಪೂರಕವಾಗಿ ಲೈಂಗಿಕ ಸಲಹೆಗಾರರು ಸಲಹೆ, ಸೂಚನೆ ನೀಡುತ್ತಿದ್ದಾರೆ. ಇದು ತಮ್ಮ ಮೇಲಿನ ಒತ್ತಡವನ್ನು ಕಡಿಮೆ ಮಾಡುತ್ತಿದೆ ಎಂಬ ಅಭಿಪ್ರಾಯವನ್ನು 'ಏಡ್ಸ್' ಸಂಬಂಧಿ ಕ್ಷೇತ್ರಗಳಲ್ಲಿ ದುಡಿಯುತ್ತಿರುವವರು ವ್ಯಕ್ತಪಡಿಸುತ್ತಿದ್ದಾರೆ. ಆದರೂ ತಮ್ಮ ಸಲಹೆ, ಸೂಚನೆಗಳಿಂದ ಲೈಂಗಿಕತೆಯ ವಿಷಯದಲ್ಲಿ ಅನಗತ್ಯ, ಅನಾರೋಗ್ಯಕರ ಸಮಸ್ಯೆಗಳು ಉದ್ಭವವಾಗಬಹುದು ಎಂಬ ಅನುಮಾನ ಲೈಂಗಿಕ ಸಲಹೆಗಾರರನ್ನು ಕಾಡತೊಡಗಿದೆ.

'ಏಡ್ಸ್' ಭೀತಿಯಿಂದಾಗಿ ತಲೆತಲಾಂತರಗಳಿಂದ ನಡೆದುಕೊಂಡು ಬಂದ ಅನೇಕ ಸಾಂಪ್ರದಾಯಿಕ ಆಚರಣೆಗಳು, ರೂಢಿಗಳು ನಗರ ಪ್ರದೇಶದಲ್ಲೀಗ ಬದಲಾಗುತ್ತಿವೆ. ಉದಾಹರಣೆಗೆ ಜಾತಕಗಳ ಪರಿಶೀಲನೆ ರೂಢಿ. 'ಏಡ್ಸ್' ರೋಗ ಕಾಣಿಸಿಕೊಂಡಾಗಿನಿಂದ ಅನೇಕ ನಗರಪ್ರದೇಶಗಳ ಜಾತಕಕ್ಕೆ ಬದಲಾಗಿ ಎಚ್.ಐ.ವಿ. ಸೋಂಕಿನ ಪರೀಕ್ಷೆ ನಡೆಸುವ ಪದ್ಧತಿ ಜಾರಿಗೆ ಬಂದಿದೆ.

ಈ ಕುರಿತಂತೆ ಮುಂಬಯಿಯ 'ಲಗ್ನ ಸೃಷ್ಟಿ ಮಂಡಳಿ'ಯ ಬೃಜರಮಣಿ "ನಾನು, ಈ ಮುನ್ನ ಎಲ್ಲರಿಗೂ, 'ವಿದೇಶಿ ಅಥವಾ ಅನಿವಾಸಿ ಭಾರತೀಯರೊಂದಿಗೆ ಸಂಬಂಧ ಬೆಳೆಸುವಾಗ ಎಚ್.ಐ.ವಿ. ಸೋಂಕಿನ ಪರೀಕ್ಷೆ ಮಾಡಿಸುವುದು ಒಳಿತು' ಎಂದು ಸಲಹೆ ಮಾಡುತ್ತಿದ್ದೆ. ಆದರೆ, ಈಗ ಇದೇ ಮಾತನ್ನು ಸ್ಥಳೀಯರಿಗೂ ಅನ್ವಯಿಸುವುದು ಅವಶ್ಯ ಎಂದು ತೋರುತ್ತಿದೆ" ಎನ್ನುತ್ತಾರೆ.

ಸಾಮಾಜಿಕ ಆಚರಣೆಗಳ ಬದಲಾವಣೆಯ ವಿಷಯದಲ್ಲಿ ದುರದೃಷ್ಟಕರ ಸಂಗತಿಯೆಂದರೆ ಯಾವುದೇ ರೀತಿಯ ಸರಳ ಪರಿಹಾರವನ್ನು ಕಂಡುಕೊಂಡರೂ ಅನರ್ಥಕ್ಕೆ ಅವಕಾಶ ಮಾಡಿಕೊಟ್ಟಂತಾಗುವುದು. ಆದ್ದರಿಂದ ವಿವಾಹ ಪೂರ್ವದಲ್ಲಿ ವೇಶ್ಯೆಯರ ಸಂಗ ಮಾಡುವ ಚಟ ಅಂಟಿಸಿಕೊಂಡ ಗಂಡಸರು ಸ್ವಯಂ ಸ್ಫೂರ್ತಿಯಿಂದ ಎಚ್.ಐ.ವಿ. ಸೋಂಕಿನ ಪರೀಕ್ಷೆಗೆ ಒಳಪಡಲು ಮುಂದಾಗಬೇಕಿದೆ. ಅದು ಮುಂದೆ ಒದಗಬಹುದಾದ ತೊಂದರೆಯನ್ನು ತಪ್ಪಿಸುತ್ತದೆ ಎಂಬುದರಲ್ಲಿ ಅನುಮಾನವಿಲ್ಲ. ಆದರೂ ನೈಜವಾದ ಸಮಸ್ಯೆ ಇರುವುದು ಸಮಾಜದಲ್ಲಿ ಬೇರುಬಿಟ್ಟಿರುವ ನಂಬಿಕೆಗಳನ್ನು ಹೋಗಲಾಡಿಸುವಲ್ಲಿ ಮತ್ತು ಸತಿ-ಪತಿಯರ ಸ್ವಭಾವದಲ್ಲಿ ಬದಲಾವಣೆ ತರುವುದರಲ್ಲಿ. ●

ವಿಚಾರ

• ಆರುಮ್ಗಂ

# ಮಾಂಸಾಹಾರ ಎಷ್ಟು ಸೂಕ್ತ?

"ದಿನಕ್ಕೆ ಎಷ್ಟು ಮೇಕೆ, ಎಮ್ಮೆಗಳು ಕಸಾಯಿಖಾನೆಗೆ ಹೋಗಬೇಕು?"

ಈ ಕುರಿತಂತೆ ನಿರ್ಧರಿಸಲು ಒಂದೂವರೆ ವರ್ಷದ ಹಿಂದೆ ದಿಲ್ಲಿ ರಾಜ್ಯದ ಮುಖ್ಯಮಂತ್ರಿ, ಲೆಫ್ಟಿನೆಂಟ್ ಗವರ್ನರ್ ಮತ್ತು ಅಲ್ಲಿಯ ಹೈಕೋರ್ಟುಗಳ ನಡುವೆ 'ಹಗ್ಗಜಗ್ಗಾಟ'ವೇ ನಡೆಯಿತು. ಒಂದೆಡೆ ಪ್ರಾಣಿದಯಾ ಸಂಘಗಳು ಪ್ರಾಣಿಹತ್ಯೆಯನ್ನು ನಿಲ್ಲಿಸುವಂತೆ ಮೊರೆಯಿಡುತ್ತಿದ್ದರೆ ಇನ್ನೊಂದೆಡೆ ದಿನವೂ ಕಸಾಯಿಖಾನೆಗೆ ಹೋಗಬೇಕಾದ ಪ್ರಾಣಿಗಳ ಸಂಖ್ಯೆಯ ಕುರಿತು ಉನ್ನತ ಮಟ್ಟದಲ್ಲಿ ಚರ್ಚೆ!

ಡಾಕ್ಟರುಗಳು ಮತ್ತೆ ಮತ್ತೆ ಒತ್ತಿ ಹೇಳುತ್ತಲೇ ಬಂದಿದ್ದಾರೆ- "ಮೇಕೆ ಹಾಗೂ ಎಮ್ಮೆಗಳ ಮಾಂಸವನ್ನು ತಿನ್ನುವುದರಿಂದ ಹೃದಯ ರೋಗ ಉಂಟಾಗುತ್ತದೆ." ಅನೇಕ ದೇಶಗಳಲ್ಲಿ ಈ ಕುರಿತಂತೆ ಜಾಗೃತಿ ಉಂಟಾಗಿದೆ. ಶಾಕಾಹಾರದತ್ತ ಜನರ ಒಲವು ಹೆಚ್ಚಿದೆ. ಆದರೆ ಭಾರತದಲ್ಲಿ ಮಾತ್ರ ಮಾಂಸಾಹಾರ ಫ್ಯಾಶನ್ ಆಗಿಬಿಟ್ಟಿದೆ.

ಆ ಸಂದರ್ಭದಲ್ಲಿ ದಿಲ್ಲಿಯ ಪತ್ರಿಕೆಯೊಂದರಲ್ಲಿ ಪ್ರಾಜ್ಞ ಓದುಗರೊಬ್ಬರು ವ್ಯಕ್ತಪಡಿಸಿದ ವ್ಯಂಗ್ಯಪೂರ್ಣ ಅಭಿಪ್ರಾಯ ಹೀಗಿದೆ: "ದಿಲ್ಲಿ ಕಸಾಯಿಖಾನೆಗೆ ಕಳಿಸಬೇಕಾದ ಪ್ರಾಣಿಗಳ ಸಂಖ್ಯೆಯ ನಿರ್ಧಾರ ಕುರಿತಂತೆ ಎದ್ದಿರುವ ಗದ್ದಲ ನೋಡಿ ನನಗೆ ನಗೆ ಬರುತ್ತಿದೆ. ಆಗೆಲ್ಲ ನನಗೆ 'ಒಂದು ವೇಳೆ ಮನುಷ್ಯ ಮಾಂಸವನ್ನೇ ತಿನ್ನುವ ದಿನಗಳಿವಾಗಿದ್ದಿದ್ದರೆ ದಿನಕ್ಕೆಷ್ಟು ಮನುಷ್ಯರನ್ನು ಕಸಾಯಿಖಾನೆಗೆ ಕಳಿಸಬೇಕು ಎಂಬ ಕುರಿತು ಗದ್ದಲವೆದ್ದು, ಅದೊಂದು ರೋಚಕ ಸುದ್ದಿಯೇ ಆಗುತ್ತಿತ್ತು. ಪತ್ರಿಕೆಗಳ ಪ್ರಸಾರವೂ ಹೆಚ್ಚುತ್ತಿತ್ತು.' ಎಂದೆನಿಸುತ್ತಿದೆ.

"ಮನುಷ್ಯಮಾಂಸ ಖಾದ್ಯಯೋಗ್ಯವೆಂದು ಈಗಾಗಲೇ ಪ್ರಮಾಣೀಕರಿಸಲ್ಪಟ್ಟಾಗಿದೆ. ಅಷ್ಟೇ ಅಲ್ಲ, ಅದು ಅತ್ಯಂತ ಸ್ವಾದಿಷ್ಟವೆಂಬುದೂ ಗೊತ್ತಾಗಿದೆ. ಸಿಂಹವನ್ನೇ ಕೇಳಿ ಬೇಕಾದರೆ. ಅದು ಒಮ್ಮೆ ನರಭಕ್ಷಕನಾಯಿತೆಂದರೆ ಮನುಷ್ಯ ಮಾಂಸವನ್ನೇ ತಿನ್ನುತ್ತದೆ ವಿನಾ ಅನ್ಯ ಜೀವಿಗಳನ್ನು ಬೇಟೆಯಾಡುವುದೇ ಇಲ್ಲ."

ಹಲವು ವರ್ಷಗಳ ಮೊದಲು ಆಲ್ಪ್ ಪರ್ವತದಲ್ಲಿ ವಿಮಾನ ದುರ್ಘಟನೆ ನಡೆಯಿತು. ಇದು ಎಲ್ಲಿ ನಡೆಯಿತೆಂಬುದನ್ನು ಪತ್ತೆ ಹಚ್ಚಲು ಮುಂದೆ ಇಪ್ಪತ್ತು-ಮೂವತ್ತು ದಿನಗಳ ತನಕ ಹುಡುಕಾಟ ಮುಂದುವರಿಯಿತು. ಪತ್ತೆಯಾದಾಗ ಅಷ್ಟೆಲ್ಲ ದಿನ, ಗಾಯಗೊಂಡು ಬದುಕುಳಿದ ಯಾತ್ರಿಗಳು ಸತ್ತ ಸಹಯಾತ್ರಿಗಳ ಶರೀರವನ್ನು ಬಗೆದು ಆ ಮಾಂಸವನ್ನೇ ಭಕ್ಷಿಸಿದ್ದರೆಂಬ ಸುದ್ದಿ ಗೊತ್ತಾಯಿತು. ಆಗ ಬದುಕಿದ್ದವರಾದರೂ ಎಷ್ಟು ಜನ? ಕೇವಲ ಇಬ್ಬರು. ಅವರನ್ನು ವಿಶೇಷ ವಿಮಾನದ ಮೂಲಕ ನಗರಕ್ಕೆ ಕರೆದೊಯ್ಯುವ ಏರ್ಪಾಟಾಯಿತು. ಊಟದ ಹೊತ್ತಿನಲ್ಲಿ ಗಗನಸಖಿ ತಟ್ಟೆಯೊಂದಿಗೆ ಬಂದರೆ ಆ ಇಬ್ಬರಲ್ಲೊಬ್ಬ ಆಕೆಯನ್ನೇ ಹಿಡಿದು ಕಚ್ಚತೊಡಗಿದನಂತೆ.

ಬೇರೇನೂ ಸಿಕ್ಕದ ಸಂದರ್ಭದಲ್ಲಿ ಶವ ಬಗೆದು ತಿಂದು ಬದುಕಿದವರೆಂಬುದು ಕನಿಕರ ತರಿಸುತ್ತದೆ. ಆದರೆ ಬೇರೆ ಆಹಾರ ಲಭ್ಯವಿದ್ದಾಗಲೂ ಮಾಂಸಾಹಾರವನ್ನೇ ಬಯಸುವುದೆಂದರೆ?

# ಎಂಥೆಂಥಾ ನಂಬಿಕೆಗಳು!

• ಈಶ್ವರ್ ಪ್ರಸಾದ್

**ಭಾ**ರತ ಮಾತ್ರ ಅಂಧ ವಿಶ್ವಾಸಗಳಿಂದ ತುಂಬಿದ ದೇಶವೆಂದು ಭಾವಿಸಿಕೊಳ್ಳಬೇಡಿ. ಜಗತ್ತಿನ ಎಲ್ಲ ದೇಶಗಳ ಎಲ್ಲ ಸಮಾಜಗಳಲ್ಲೂ ಮೂಢ ನಂಬಿಕೆಗಳು ಮನೆ ಮಾಡಿವೆ. ಶಕುನ-ಅಪಶಕುನಗಳ ಲೆಕ್ಕಾಚಾರವನ್ನು ಹಾಕದ ವ್ಯಕ್ತಿಯೇ ಇಲ್ಲ. ಮಜವೆಂದರೆ ಯಾವನೂ ತನ್ನನ್ನು ತಾನು ಅಂಧ ವಿಶ್ವಾಸಿ ಎಂದು ಒಪ್ಪಿಕೊಳ್ಳದಿರುವುದು. ಆತ ಇನ್ನೊಬ್ಬನಲ್ಲಿ ಅದೆಷ್ಟು ಮೂಢನಂಬಿಕೆಗಳು ಮಡುಗಟ್ಟಿವೆ ಎಂದು ಹೇಳುವುದರಲ್ಲಿಯೇ ಮೋಜು ಅನುಭವಿಸುತ್ತಾನೆ. ಇಲ್ಲಿ ಕೆಲವು ದೇಶಗಳಲ್ಲಿ ಹಿಂದೊಮ್ಮೆ ಪ್ರಚಲಿತದಲ್ಲಿದ್ದ ಮತ್ತು ಈಗಲೂ ಆಚರಣೆಯಲ್ಲಿರುವ ಅಂಥ ಕುರುಡು ನಂಬಿಕೆಗಳು ಪಟ್ಟಿಮಾಡಲ್ಪಟ್ಟಿವೆ.

ಬೆಳದಿಂಗಳೆಂದರೆ ಮನಸ್ಸು ಕುಣಿದಾಡುವುದಷ್ಟೇ. ಆದರೆ ಅದನ್ನು ಕೇಡೆಂದು ಬಗೆಯುವ ಜನರೂ ಇದ್ದಾರೆ. ಕ್ಯೂಬಾದ ನಿವಾಸಿಗಳಿಗೆ ಬೆಳದಿಂಗಳು ಬಾಧೆ ತರುತ್ತದೆಂಬ ಕಲ್ಪನೆಯಿದೆ. ಹಾಗಾಗಿ ಅವರು ಚಂದ್ರನ ಬೆಳಕು ಕಾಣಿಕೊಂಡು ಇದ್ದು ಇರುವಷ್ಟು ಕಾಲವೂ ತಲೆಯ ಮೇಲೊಂದು ಬಟ್ಟೆ ಮುಚ್ಚಿಕೊಂಡೇ ತಿರುಗಾಡುತ್ತಾರೆ.

ಗ್ರಹಣ ಕಾಲದಲ್ಲಿ ಪಾತ್ರೆ ಬಡಿದು ಗಲಾಟೆ ಮಾಡಿ ರಾಹುವಿನ ಹಿಡಿತದಿಂದ ಚಂದ್ರ ಇಲ್ಲವೆ ಸೂರ್ಯನನ್ನು ಬಿಡಿಸಲು ಭಾರತೀಯರು ಯತ್ನಿಸುತ್ತಿದ್ದುದು ಗೊತ್ತಲ್ಲವೆ? ಆದರೆ ಅಶಬ್ಬರು ಚಂಡಮಾರುತದ ಸಂದರ್ಭಗಳಲ್ಲಿ ಬಾಯಿ ಬಡಿದುಕೊಂಡು ಕೂಗಾಡುತ್ತಾರೆ. ಹೀಗೆ ಮಾಡುವುದರಿಂದ ಚಂಡಮಾರುತ ದೂರಕ್ಕೋಡುವುದಂತೆ.

ಸೈಬೀರಿಯದ ಎಸ್ಕಿಮೋಗಳು ಗಾಳಿ ಬೀಸುವ ದಿಕ್ಕನ್ನು ಬದಲಿಸಲೆಂದು ಢೋಲುಬಾರಿಸುತ್ತಾರೆ.

ಪೆರು ದೇಶದ ಜನ ಮಳೆ ಬರಲೆಂದು ಕರಿ ಕುರಿಯನ್ನು ಮೈದಾನದಲ್ಲಿ ಕಟ್ಟಿ ಹಾಕುತ್ತಾರೆ. ಮಳೆ ಬರುವ ತನಕ ಅವರು ಅದಕ್ಕೆ ಒಂದಿಷ್ಟು ಹುಲ್ಲನ್ನೂ ಹಾಕುವುದಿಲ್ಲ.

ಇಜಿಪ್ತದಲ್ಲಿ ಶತಮಾನಗಳಷ್ಟು ಹಿಂದೆ, ನೈಲ್ ನದಿಯ ಕೆಸರಿನ ಮೇಲೆ ಸೂರ್ಯ ಕಿರಣಗಳು ಬೀಳುವುದರಿಂದ ಅಲ್ಲಿಂದ ಕಪ್ಪೆಗಳು, ಏಡಿಗಳು, ಇಲಿ, ಹಾವು ಹಾಗೂ ಮೊಸಳೆಗಳು ಹುಟ್ಟಿ ಹರಿದಾಡತೊಡಗುತ್ತವೆ ಎಂಬ ಭಾವನೆಯಿತ್ತು. ಅಷ್ಟೇ ಅಲ್ಲ, ಹಣೆಯ ಮೇಲೆ ಬಿಳಿ ಕಲೆ ಇರುವ ಕರಿಯ ಎತ್ತನ್ನು ಪೂಜಿಸುತ್ತಿದ್ದ ಅವರು ಹಾಗೆ ಮಾಡುವುದರಿಂದ ತಮ್ಮ ಉಳಿದ ಜಾನುವಾರುಗಳಿಗೆ ಜಾಡ್ಯ ಪೀಡಿಸುವುದಿಲ್ಲ ಎಂದು ಬಗೆಯುತ್ತಿದ್ದರು.

ಪರ್ಶಿಯದವರಿಗೆ ಇಂದಿಗೂ ಮನೆಯ ಮೇಲೆ ಕೂತ ಕಾಗೆಯನ್ನು ಕಂಡರೆ ಅಪಶಕುನವೆ. ಅಲ್ಲಿ ಕೂತು ಅದು ಕೂಗಿದರೆ ಮುಂದೊಂದು ವರ್ಷದೊಳಗಾಗಿ ಮನೆಯ ಯಜಮಾನನ ಮೃತ್ಯು ಸಂಭವಿಸುತ್ತದೆಂಬ ತಪ್ಪು ತಿಳುವಳಿಕೆ ಅವರದು.

ನ್ಯೂಜಿಲೆಂಡ್‌ನ ಮೂಲವಾಸಿಗಳು ಮೃತ ವ್ಯಕ್ತಿಯ ಎರಡೂ ಕೈಗಳನ್ನು ಬೆನ್ನ ಹಿಂದೆ ಬರುವಂತೆ ಕಟ್ಟಿದ ಮೇಲೆಯೇ ಹೂಳುತ್ತಾರೆ. ಹಾಗೇ ಬಿಟ್ಟರೆ ಆತ ಕುಣಿಯನ್ನು ಬಗೆದು ಹೊರಬಂದು ಕಾಡತೊಡಗುತ್ತಾನೆಂಬ ಭಯ ಅವರಿಗೆ.

ಆಫ್ರಿಕಾದ ಕೆಲ ಜನಾಂಗಗಳವರು ಸರ್ಪವನ್ನು ಕೊಂದು ಅದರ ಚರ್ಮ ಸುಲಿದು ಮರಕ್ಕೆ ನೇತು ಹಾಕಿ ಒಣಗಿಸುತ್ತಾರೆ. ನವಜಾತ ಶಿಶುಗಳಿಗೆ ಆ ಚರ್ಮವನ್ನು ತೊಳೆದ ನೀರಿನಿಂದ ಸ್ನಾನ ಮಾಡಿಸಿದರೆ ಆ ಮಗುವಿಗೆ ಎಂದೂ ಹಾವು ಕಡಿಯುವುದಿಲ್ಲವೆಂಬುದಾಗಿ ಅವರು ನಂಬುತ್ತಾರೆ.

ಬೆಕ್ಕು ಅಡ್ಡ ಹಾಯ್ದರೆ ನಮಗೆ ಅಪಶಕುನ. ಆದರೆ ಜರ್ಮನಿಯಲ್ಲಿ ಬೆಕ್ಕಿಗೆ ಕಷ್ಟಕೊಡುವುದೆಂದರೆ "ಕಷ್ಟಗಳನ್ನು ಆಹ್ವಾನಿಸಿದಂತೆ" ಎಂದು ತಿಳಿಯಲಾಗುತ್ತದೆ.

ಗ್ರೀನ್‌ಲ್ಯಾಂಡ್ ನಿವಾಸಿಗಳು ಮಗು ಸತ್ತರೆ ಅದರೊಟ್ಟಿಗೆ ಒಂದು ಜೀವಂತ ನಾಯಿ ಮರಿಯನ್ನೂ ಹುಗಿಯುತ್ತಾರೆ. ನಾಯಿ ಆ ಆತ್ಮದ ಸಂಗಾತಿಯಾಗಿದ್ದುಕೊಂಡು ರಕ್ಷಿಸುತ್ತ ಸ್ವರ್ಗದ ದಾರಿಯತ್ತ ಕೊಂಡೊಯ್ಯುತ್ತದೆಂದು ಅಲ್ಲಿಯ ಹಿರಿಯರು ಹೇಳುತ್ತಾರೆ.

ಜಪಾನಿಗರು ಯಾತ್ರೆಗೆ ಮೊದಲು ಎಂದೂ ಉಗುರು ಕತ್ತರಿಸಿಕೊಳ್ಳುವುದಿಲ್ಲ. ಊರು ತಲುಪಿದ ನಂತರವೆ ಅವರು ಹಾಗೆ ಮಾಡುವುದು.

ಹೊಸ ಸೊಸೆಗೆ ಬಲಗಾಲನ್ನಿಟ್ಟೇ ಮನೆ ಪ್ರವೇಶಿಸುವಂತೆ ನಮ್ಮಲ್ಲಿ ಹೇಳುವುದುಂಟಲ್ಲವೆ? ಸ್ಪೇನ್ ವಾಸಿಗಳಲ್ಲಿ ಮಾತ್ರ ಹಡಗನ್ನೇರುವಾಗ ಎಡಗಾಲೇ ಮೊದಲಾಗಬೇಕಂತೆ.

ಮನೆಯಂಗಳದ ಮರದಲ್ಲಿ ಯಾವುದಾದರೂ ರೆಂಬೆ ಬಾಗಿ ಅಲ್ಲಿ ಜೇನು ಕಟ್ಟಿದರೆ ಯುರೋಪಿನ ಜನರ ಮನಸ್ಸು ಅಳುಕುತ್ತದೆ. ವರ್ಷಾವಧಿಯಲ್ಲಿ ಆ ಮನೆಯಲ್ಲಿ ಸಾವು ಉಂಟಾಗುತ್ತದೆಂಬ ನಂಬಿಕೆಯೇ ಈ ಅಳುಕಿಗೆ ಕಾರಣ.

ಗ್ರೀಸ್ ದೇಶದಲ್ಲಿ ನವಜಾತ ಶಿಶುವನ್ನು ದುಷ್ಟಾತ್ಮಗಳ ದೃಷ್ಟಿಯಿಂದ ಕಾಪಾಡಲು.... ಅದನ್ನು ಜೋಳಿಗೆಯಲ್ಲಿ ಮಲಗಿಸಿ ಮೂರು ಸಲ ಅಗ್ಗಿಷ್ಟಿಕೆಯ ಮೇಲೆ ಆಚೆಂದೀಚೆ ತೂಗಲಾಗುತ್ತದೆ.

ಆಸ್ಟ್ರಿಯದ ಮೂಲನಿವಾಸಿಗಳು ಯಾರದಾದರೂ ಮನೆಯಲ್ಲಿ ಪ್ರಸವವಾದರೆ ಬಾಣಂತಿಗೆ ತಮ್ಮ ಮನೆಯಂಗಳದ ಗಿಡದ ಹೂವು-ಹಣ್ಣುಗಳನ್ನೊಯ್ದು ಕೊಡುತ್ತಾರೆ. ಅವನ್ನಾಕೆ ಸ್ವೀಕರಿಸಿ ಸಂತೃಪ್ತಿಪಟ್ಟರೆ ತಮ್ಮ ಮನೆ ಹೂವು-ಹಣ್ಣುಗಳಿಂದ ತುಂಬುತ್ತದೆಂದು ಅವರು ನಂಬುತ್ತಾರೆ.

ಪಾಕಿಸ್ತಾನದ ಹಿಂದಿನ ರಾಷ್ಟ್ರಪತಿ ಜನರಲ್ ಜಿಯಾ-ಉಲ್-ಹಕ್ "ಮುಸ್ಲಿಂ ಮಹಿಳೆಯರು ಸೀರೆಯುಟ್ಟರೆ ಅಲ್ಲಾಹನು ಸಿಟ್ಟೇಗೇಳುತ್ತಾನೆ" ಎಂದೇ ಭಾವಿಸಿದ್ದಂತೆ.

(ವಿವಿಧ ಮೂಲಗಳಿಂದ)

---

## ನಿಜವಾದ ಆನಂದ

ಕುವೆಂಪು ಕೀರ್ತಿಯ ಉತ್ತುಂಗದಲ್ಲಿದ್ದಾಗಿನ ಮಾತು. ಅವರನ್ನು ಕಾಣಲು ಅಭಿಮಾನಿಯೊಬ್ಬ ಅವರ ಮನೆಗೆ ಹೋಗಿದ್ದ. ಮಾತುಕತೆ ಸ್ವಲ್ಪ ದಿನ ಹಿಂದೆ ಪ್ರಕಟವಾಗಿದ್ದ "ಶ್ರೀ ರಾಮಾಯಣ ದರ್ಶನಂ" ಕುರಿತು ಸಾಗಿತ್ತು. "ಅದೆಲ್ಲ ಸರಿ ಸ್ವಾಮಿ, ಆದರೆ ಬೆಲೆ ಮಾತ್ರ ಹೆಚ್ಚಾಯ್ತು" ಅಂದ ಆಗಂತುಕ. ಕುವೆಂಪು ನಕ್ಕರು. ಮಾತು ಮತ್ತೆ ಮುಂದುವರೆಯಿತು. ಅಕಸ್ಮಾತ್ತಾಗಿ ಅಭಿಮಾನಿಯ ಕಾಲಿನ ಕಡೆ ಕುವೆಂಪು ದೃಷ್ಟಿ ಹರಿಯಿತು.

ಆತ ಹೊಸ ಬೂಟು ಧರಿಸಿದ್ದ.

"ಸ್ವಾಮಿ, ನಿಮ್ಮ ಬೂಟು ಚೆಂದವಾಗಿವೆ. ಎಷ್ಟಕ್ಕೆ ಕೊಂಡಿರಿ?" ಕುವೆಂಪು ಪ್ರಶ್ನಿಸಿದರು. ಅಭಿಮಾನಿ ಉಬ್ಬಿ, "ಓಹೋ! ಇದೀಗ ನೂರಿಪ್ಪತ್ತು ರೂಪಾಯಿಗೆ ಕೊಂಡೆ," ಅಂದ. ಆಗ ಕುವೆಂಪು, "ಹಾಗಾದರೆ ನನ್ನ ಪುಸ್ತಕದ ಬೆಲೆಗಿಂತ ಹೆಚ್ಚಾಯ್ತು. ನಿಮ್ಮ ಬೂಟು ಬಹಳವೆಂದರೆ ಒಂದೆರಡು ವರ್ಷ ಬಾಳಬಹುದು. ನನ್ನ ಕೃತಿ ನೀವಿರುವ ತನಕ ನಿಮಗೆ ಆನಂದ ನೀಡುವುದಲ್ಲ!" ಅಂದರು.

• ಪ್ರಕಾಶ ಎಸ್. ಮನ್ನಂಗಿ



ಯೋಗ ವಿಚಕ್ಷಕ
ಡಾ. ಪಾಲ್ ಬ್ರುಂಟನ್

# ಭಾರತಪ್ರೇಮಿ ವಿದೇಶೀಯ

• ಎಸ್.ಎಸ್. ನೀರಗಟ್ಟಿ

**ಡಾ.** ಪಾಲ್ ಬ್ರುಂಟನ್ ಅವರು ಇಂಗ್ಲಂಡಿನ ಖ್ಯಾತ ಪತ್ರಕರ್ತರಲ್ಲಿ ಒಬ್ಬರು. (ಜನನ: ೧೮೯೮ರಲ್ಲಿ; ಲಂಡನ್ನಿನಲ್ಲಿ) ಪತ್ರಿಕೋದ್ಯಮದ ಜೊತೆಗೆ ಬ್ರುಂಟನ್‌ರಿಗೆ ತುಲನಾತ್ಮಕ ಧರ್ಮ, ರಹಸ್ಯ ವಾದ ಮತ್ತು ಅಧ್ಯಾತ್ಮಗಳಲ್ಲಿ ಕೂಡ ವಿಶೇಷ ಆಸಕ್ತಿಯಿತ್ತು. ಅಂತಲೇ ಅವುಗಳಿಗೆ ಆಗರವಾದ ಪೌರಸ್ತ್ಯ ದೇಶಗಳಿಗೆ ಅನೇಕ ಸಲ ಭೇಟಿ ನೀಡಿದ ಅವರು ಅಲ್ಲಿಯ ವಿಲಕ್ಷಣ ಮಾಂತ್ರಿಕರು, ಹಾವಾಡಿಗರು, ಫಕೀರರು, ಸಾಧು ಸಂತರು ಮತ್ತು ಅನೇಕ ಯೋಗಿಗಳನ್ನು ಸಂದರ್ಶಿಸಿ ಅವರ ಬಗ್ಗೆ ಗಂಭೀರ ಅಧ್ಯಯನ ಗೈದರು. ಈ ಅಧ್ಯಯನಕ್ಕಾಗಿ ಸಂದರ್ಶಿಸಿದ ಸ್ಥಳಗಳು, ಉಂಟಾದ ಅನುಭವಗಳು ವರ್ಣನಾತೀತ.

ಒಮ್ಮೆ ಅವರು ಇಜಿಪ್ತಿನ ಜಗತ್ ಪ್ರಸಿದ್ಧ ಪಿರ್‍ಯಾಮಿಡ್ ಒಂದರಲ್ಲಿ ರಾತ್ರಿಯಿಡೀ ಒಬ್ಬಂಟಿಗರಾಗಿ ಕಳೆದ ಸಾಹಸವಂತೂ ರೋಮಾಂಚಕಾರಿಯಾದುದು. ಅಲ್ಲಿ ತಮಗಾದ ವಿಲಕ್ಷಣ ಅನುಭವಗಳನ್ನು ಡಾ. ಬ್ರುಂಟನ್ ತಮ್ಮ 'ಗುಪ್ತ ಇಜಿಪ್ತದಲ್ಲೊಂದು ಶೋಧನೆ' ಎಂಬ ಪುಸ್ತಕದಲ್ಲಿ ಮೈನವಿರೇಳಿಸುವಂತೆ ವರ್ಣಿಸಿದ್ದಾರೆ.

ಎಷ್ಟೋ ಕಾಲ ತಿಬೇಟಿನ ಕೈಲಾಸ ಪರ್ವತದಲ್ಲಿ ವಾಸವಾಗಿದ್ದ ಅವರು ಅಲ್ಲಿಯ ಮೋಹಕ, ನಿರ್ಮಲ, ಶಾಂತ ಹಾಗೂ ಗಂಭೀರ ವಾತಾವರಣ ಹೇಗೆ ಮನುಷ್ಯರಲ್ಲಿ ಆಧ್ಯಾತ್ಮಿಕ ಭಾವನೆಯನ್ನು ಜಾಗ್ರತಗೊಳಿಸುತ್ತದೆಂದು 'ಹಿಮಾಲಯದಲ್ಲೊಬ್ಬ ವಿರಕ್ತ' ಎಂಬ ಪುಸ್ತಕದಲ್ಲಿ ನಿರೂಪಿಸಿದ್ದಾರೆ.

ಡಾ. ಬ್ರುಂಟನ್‌ರಿಗೆ ಚಿಕ್ಕಂದಿನಿಂದಲೂ ಹಿಂದುಸ್ಥಾನದ ಬಗ್ಗೆ ವಿಶೇಷ ಒಲುಮೆ. ಎಳವೆಯಲ್ಲೇ ಒಮ್ಮೆ ತಮ್ಮ ಸಹಪಾಠಿಯೊಂದಿಗೆ ಯಾರಿಗೂ ತಿಳಿಯದಂತೆ ಭಾರತಕ್ಕೆ ಪಲಾಯನಗೈಯಲು ತಾವು ಹಾಕಿಕೊಂಡಿದ್ದ ಯೋಜನೆ ಹೇಗೋ ಬಯಲಾದಾಗ ಅವರು ತುಂಬ ನಿರಾಶರಾಗಿದ್ದರಂತೆ. ಮುಂದೆ ದೊಡ್ಡವರಾದರಂತೆ ಎರಡು ಸಲ ಅವರು ಈ ದೇಶಕ್ಕೆ ಬಂದಿದ್ದರು.

ಆದರೆ ಅವರು ಕೇವಲ ಒಬ್ಬ ಯಾತ್ರಿಕನಂತೆ ಇಲ್ಲಿಗೆ ಬರಲಿಲ್ಲ. ಇಲ್ಲಿಯ ಸಂಸ್ಕೃತಿ, ಪುರಾತನ ಜ್ಞಾನ ಹಾಗೂ ಸಾಧು ಸಂತರ ಬಗ್ಗೆ ಪಶ್ಚಿಮ ದೇಶಗಳಲ್ಲಿ ಪ್ರಚಲಿತವಿದ್ದ ದಂತಕತೆಗಳ ನಿಜಾಂಶವನ್ನು ಕಂಡುಕೊಳ್ಳುವುದು ಅವರ ಪ್ರವಾಸದ ಪ್ರಮುಖ ಕಾರಣವಾಗಿದ್ದಿತು.

ಪೌರಸ್ತ್ಯ ದೇಶಗಳಲ್ಲಿ ಎಷ್ಟೋ ಜನ ಕೆಲ ವಿಶಿಷ್ಟ ಸಿದ್ಧಿಗಳನ್ನು ಕರಗತಗೊಳಿಸಿ ತಮ್ಮ ಮನಸ್ಸು ಹಾಗೂ ಇಂದ್ರಿಯಗಳ ಮೇಲೆ ಹತೋಟಿ ಪಡೆದಿರುವುದುಂಟು. ಆ ಮೂಲಕ ಅವರು ಸಾಮಾನ್ಯರಿಗೆ ಸಾಧಿಸದ ಅನೇಕ ಚಮತ್ಕಾರಗಳನ್ನು ಮಾಡಿ ತೋರಿಸುವುದೂ ಇದೆ. ಅವೆಲ್ಲ ಆಧ್ಯಾತ್ಮಿಕತೆಯನ್ನು ತೋರಸೂಸುವ ಸೆಲೆಗಳಲ್ಲ, ಆದರೆ ಆತ್ಮಕ್ಕೆ ಸಂಬಂಧಿಸಿದ ಅಗಾಧ ರಹಸ್ಯಗಳ ಬಗ್ಗೆ ಸಂಶೋಧನೆ ಮಾಡಲಿಚ್ಛಿಸುವ ವಿಜ್ಞಾನಿಗಳಿಗೆ ಮಾತ್ರ ಆ ವಿದ್ಯೆಗಳ ಮೇಲೆ ಪ್ರಯೋಗ ನಡೆಸಲು ಅವು ಉಪಯುಕ್ತ ಸಾಧನಗಳು.

ಡಾ. ಬ್ರುಂಟನ್ ಶೋಧಿಸುತ್ತಿದ್ದುದು ಇಂಥ ಬರಡು ಶಕ್ತಿಗಳನ್ನಲ್ಲ. ಅವರಿಗೆ ಬೇಕಾಗಿದ್ದು ಸೂಕ್ಷ್ಮ ಮತ್ತು ಪರಿಪೂರ್ಣವಾದ ಆಧ್ಯಾತ್ಮಿಕ ಸತ್ಯ.

ಜಗತ್ತಿನಲ್ಲಿಯ ರಹಸ್ಯಮಯ ವಸ್ತುಗಳನ್ನು ಕಂಡುಕೊಳ್ಳುವದು ಮನುಷ್ಯನಿಗೆ ದುಸ್ತರ. ಅದರಲ್ಲೂ ಆಧ್ಯಾತ್ಮಿಕ ರಹಸ್ಯಗಳು ಇನ್ನೂ ನಿಗೂಢ. ಆದರೆ ಈ ನಿಟ್ಟಿನಲ್ಲಿ ಬ್ರುಂಟನ್ ತೋರಿದ ನಿಷ್ಠೆ, ಅವಿರತ ಪರಿಶ್ರಮಗಳಿಂದಾಗಿ ಅಸಾಧ್ಯವೂ ಸಾಧ್ಯವಾಗಿ ಪರಿಣಮಿಸಿತು.

ಹಿಂದುಸ್ಥಾನದ ಮೂಲೆ ಮೂಲೆಗೂ ಸಂದರ್ಶಿಸಿ ಇಲ್ಲಿಯ ಅನೇಕ ಯೋಗಿ, ಸತ್ಪುರುಷರ ದರ್ಶನ ಪಡೆದು ಅವರ ವಚನಾಮೃತವನ್ನು ಸವಿದ ಡಾ. ಬ್ರುಂಟನ್‌ರ ಮೇಲೆ ವಿಶೇಷ ಪ್ರಭಾವ ಬೀರಿದ ಮಹಾತ್ಮರೆಂದರೆ ಅರುಣಾಚಲದ ಯೋಗಿ ಶ್ರೀರಮಣ ಮಹರ್ಷಿಗಳು.

ಇಲ್ಲಿ ತಮಗಾದ ಅನುಭವಗಳನ್ನು ಅವರು ತಮ್ಮ 'ರಹಸ್ಯ ಭಾರತದಲ್ಲೊಂದು ಶೋಧ' ಎಂಬ ಪುಸ್ತಕದಲ್ಲಿ ಹೀಗೆ ವರ್ಣಿಸಿದ್ದಾರೆ. "ಹಿಂದುಸ್ಥಾನ ಪುರಾತನ ಗ್ರಂಥಗಳ ಸುವರ್ಣ ಪುಟಗಳಲ್ಲಿ ಇನ್ನೂ ಬೆಳಕು ಕಾಣದ ಅದೆಷ್ಟೋ ಅನುಚ್ಛೇದಗಳಿವೆ. ಅವುಗಳನ್ನು ಪಾಶ್ಚಿಮಾತ್ಯ ಓದುಗರ ಅವಗಾಹನೆಗೆ ತರಲು ನಾನು ಪ್ರಯತ್ನಿಸಿದ್ದೇನೆ.

"ಪ್ರತಿ ಸಾರಿ ಹಿಂದುಸ್ಥಾನದಿಂದ ಐರೋಪ್ಯ ದೇಶಗಳಿಗೆ ಮರಳುವ ಪ್ರತಿ ಯಾತ್ರಿಕನು ತನ್ನೊಡನೆ ಅಲ್ಲಿಯ ಫಕೀರರ ಬಗ್ಗೆ ಅದೆಷ್ಟೋ ಅಲೌಕಿಕ ಕತೆಗಳನ್ನು ಹೊತ್ತು ತರುತ್ತಾನೆ. ಆಧುನಿಕ ಪ್ರವಾಸಿಗಳಾದರೂ ಅಷ್ಟೇ.

"ಕೆಲವು ಜನರಿಂದ ಫಕೀರರು ಎಂದು ಕರೆಯಲ್ಪಡುವ ಹಿಂದುಸ್ಥಾನದ ಈ ರಹಸ್ಯಮಯಿ ಯೋಗಿಗಳ ಬಗ್ಗೆ ಆಗಾಗ ಕಿವಿಗೆ ತಲುಪುವ ದಂತ ಕತೆಗಳ ಹಿನ್ನೆಲೆಯಲ್ಲಿ ಅಡಗಿದ ಸತ್ಯವಾದರೂ ಏನು? ಹಿಂದುಸ್ಥಾನದ ಪುರಾತನ ಬ್ರಹ್ಮಜ್ಞಾನವನ್ನು ಅಭ್ಯಸಿಸಿದರೆ ಮನುಷ್ಯನಲ್ಲಿ ವಿಲಕ್ಷಣ ಬುದ್ಧಿಮತ್ತೆ ಬೆಳೆಯುತ್ತದೆಂದು ಕೇಳಿಬರುವಂಥ ಆವೇಶಪರ ಸಂಕೇತಗಳ ಹಿಂದೆ ಯಾವ ಸತ್ಯವಡಗಿದೆ? ಇದನ್ನು ಶೋಧಿಸಲೆಂದೇ ನಾನು ಹಿಂದುಸ್ಥಾನದ ಪ್ರವಾಸ ಕೈಗೊಂಡೆ.

"ಇಂಗ್ಲಂಡಿನ ಸಾವಿರಾರು ಜನರು ಹಿಂದುಸ್ಥಾನದಲ್ಲಿ ವಾಸವಾಗಿದ್ದಾರೆ. ಅಲ್ಲದೆ ಪ್ರತಿ ವರ್ಷ ನೂರಾರು ಜನರು ಪ್ರವಾಸಿಗರ ರೂಪದಲ್ಲಿಯೂ ಇಲ್ಲಿಗೆ ಬಂದು ಹೋಗುತ್ತಾರೆ. ಪ್ರತಿಸಾರಿ ಹಡಗುಗಳು ನಮ್ಮ ದೇಶಕ್ಕೆ ಅಲ್ಲಿಂದ ತುಂಬಿತರುವ ಬಹು ಮೂಲ್ಯ ಮುತ್ತು ರತ್ನಗಳಿಗಿಂತಲೂ ಅಮೂಲ್ಯವಾದ ವಸ್ತುವೊಂದು ಹಿಂದುಸ್ಥಾನದಲ್ಲಿದೆ ಮತ್ತು ಒಂದು ದಿನ ಅದು ಇಡೀ ಪ್ರಪಂಚಕ್ಕೆ ಅಪೂರ್ವ ವಸ್ತುವಾಗಿ ಪರಿಣಮಿಸಲಿದೆ ಎಂಬ ಅರಿವು ಅವರಲ್ಲಿ ಕೆಲವು ಜನರಿಗೆ ಮಾತ್ರ ಇದೆ.

"ತಮ್ಮ ಪರಂಪರೆಯನ್ನು ಕಡೆಗಾಣಿಸಿ ಅಲ್ಲಿಯ ರಹಸ್ಯಮಯಿ ಯೋಗಿಗಳ ಯೋಗ್ಯತೆಯನ್ನು ಕಂಡುಹಿಡಿಯಲು ಪ್ರಯತ್ನಿಸುವವರು ತೀರ ವಿರಳ. ಅರಣ್ಯದ ಗವಿಗಳಲ್ಲಿ ವಾಸಿಸುವ ಇಲ್ಲವೆ ಯಾವುದೋ ಒಂದು ಪ್ರಶಾಂತ ಕೋಣೆಯಲ್ಲಿ ಕುಳಿತು ತಮ್ಮ ಶಿಷ್ಯಂದಿರೊಂದಿಗೆ ಭಗವತ್ ಚಿಂತನೆಯಲ್ಲಿ ನಿರತನಾದ ಒಬ್ಬ ಕಂದು ಬಣ್ಣದ ಅರೆ ನಗ್ನ ಯೋಗಿಯನ್ನು ಸಂದರ್ಶಿಸಿ ಆತನ ಎದುರಿಗೆ ಶಿರಬಾಗಿಸಲು ಸಾವಿರದಲ್ಲಿ ಒಬ್ಬ ಆಂಗ್ಲ ವ್ಯಕ್ತಿಯೂ ಸಿದ್ಧನಿಲ್ಲ.

"ಇಪ್ಪತ್ತು ವರ್ಷ ಹಿಂದುಸ್ಥಾನದ ರೈಲು ಇಲಾಖೆಯ ಉನ್ನತ ಹುದ್ದೆಯಲ್ಲಿದ್ದ ಒಬ್ಬ ಆಂಗ್ಲ ಪದಾಧಿಕಾರಿಯನ್ನು ನಾನೊಮ್ಮೆ ಸಹಜವಾಗಿ, 'ನೀವು ಯಾರಾದರೂ ಯೋಗಿಯನ್ನು ಕಂಡಿರುವಿರಾ?' ಎಂದು ಕೇಳಿದ್ದಕ್ಕೆ ಆತನು ಆಶ್ಚರ್ಯದಿಂದ ಅರೆನಿಮಿಷ ನನ್ನೆಡೆಗೆ ಶೂನ್ಯ ದೃಷ್ಟಿ ಬೀರಿ,

'ಯೋಗಿಯೋ? ಹಾಗೆಂದರೇನು? ಯಾವುದಾದರೂ ಪ್ರಾಣಿಯ ಹೆಸರೇ ಅದು?' ಎಂದು ಕೇಳಿದ."

ಹಿಂದುಸ್ಥಾನದ ತಮ್ಮ ವಾಸ್ತವ್ಯದಲ್ಲಿ ಡಾ. ಬ್ರುಂಟನ್ ಆಗ ಇಲ್ಲಿ ಬಹು ಚರ್ಚಿತ ಅರುಣಾಚಲದ ಶ್ರೀರಮಣ ಮಹರ್ಷಿ, ಅಹಮದಾಬಾದಿನ ಪಾರ್ಸಿ ಸಂತ ಶ್ರೀ ಮೇಹರ್‌ಬಾಬಾ, ಕಾಂಚೀ ಪೀಠದ ಶ್ರೀ ಶಂಕರಾಚಾರ್ಯರು, ದಯಾಲ್ ಬಾಗಿನ ರಾಧಾಸ್ವಾಮಿ ಪಂಥದ ಶ್ರೀ ಸಾಬಜೀ ಮಹಾರಾಜ, ಕಲ್ಕತ್ತೆಯ ಚಂಡೀದಾಸ್ ಮಹಾರಾಜ ಹಾಗೂ ಶ್ರೀ ರಾಮಕೃಷ್ಣ ಪರಮಹಂಸರ ಚರಿತ್ರೆಯನ್ನು ಬರೆದ ಶ್ರೀ ಮಹೇಂದ್ರನಾಥ ಗುಪ್ತಾ ಮುಂತಾದ ಯೋಗಿಗಳನ್ನೂ ಬನಾರಸದ ಖ್ಯಾತ ಮಾಂತ್ರಿಕ ಶ್ರೀ ವಿಶುದ್ಧಾನಂದ, ಕಲ್ಕತ್ತೆಯ ಪ್ರಸಿದ್ಧ ಜ್ಯೋತಿಷಿ ಶ್ರೀ ಸುದ್ಯೆಬಾಬು ಅವರನ್ನಲ್ಲದೆ ಇನ್ನೂ ಅನೇಕ ಸಾಧು ಸಂತರನ್ನು ಭೇಟಿಯಾಗಿದ್ದರು.

ಅವರು ಒಂದೆಡೆ ಹೇಳುತ್ತಾರೆ: "ನಾನು ಇಲ್ಲಿಯ ಯೋಗಿಗಳ ಬಗ್ಗೆ ಅಲ್ಲಲ್ಲಿ ಪ್ರಚಲಿತ ಸುದ್ದಿಗಳನ್ನು ಕಲೆಹಾಕಿ ಅವುಗಳ ನಿಜಾಂಶವನ್ನು ಕಂಡು ಹಿಡಿಯಲು ಪ್ರಯತ್ನಿಸುತ್ತಿದ್ದೆ. ಕೆಲವು ಸಾರೆ ಸಾಧ್ಯವಿದ್ದಲ್ಲಿ ಅವರ ಬಳಿಗೆ ಹೋಗಿ ಅವರನ್ನು ಪ್ರತ್ಯಕ್ಷವಾಗಿ ಕಂಡು ಬರುತ್ತಿದ್ದೆ.

"ಒಂದು ಕಡೆ ನಾನು ಬಾಹ್ಯ ಪ್ರಪಂಚದ ಸಂಬಂಧ ಕಳಚಿ ಏಕಾಂತದಲ್ಲಿ ನನ್ನಂತೆಯೇ ಮನೋವಿಜ್ಞಾನದ ಬಗ್ಗೆ ಇತರರು ನಡೆಸಿದ ಗುಪ್ತ ಪ್ರಯೋಗಗಳ ಕುರಿತು ಬರೆದ ಪುಸ್ತಕಗಳನ್ ಓದುತ್ತಿದ್ದೆ. ಇನ್ನೊಂದು ಕಡೆ ಏಶಿಯಾ ಖಂಡದ ಪವಿತ್ರ ಗ್ರಂಥ ಮತ್ತು ಅವುಗಳ ಬಗ್ಗೆ ಸ್ಥಳೀಯ ಪಂಡಿತರು ಬರೆದ ಟೀಕೆ ಟಿಪ್ಪಣಿಗಳ ಪುಸ್ ಅಲ್ಲದೆ ಋಷಿಮುನಿಗಳ ಬಗ್ಗೆ ಇಂಗ್ಲೀಷ್ ಭಾಷೆಯಲ್ಲಿ ಉಪಲಬ್ಧ ಪುಸ್ತಕಗಳನ್ನು ಓದುತ್ತಿದ್ದೆ.

"ಆ ಜ್ಞಾನವು ನನಗೆ ಪೌರಸ್ತ್ಯ ಪದ್ಧತಿ ಮಾರುಹೋಗದೆ, ವಿಜ್ಞಾನವನ್ನು ಕಡೆಗಾಣಿಸ ಹಿಂದುಸ್ಥಾನದ ಯೋಗಿಗಳು ಮತ್ತು ಇಲ್ಲಿಯ ತ ಮೀಮಾಂಸೆಯ ಕುರಿತು ನಿಷ್ಪಕ್ಷ ವಸ್ತುಸ್ಥಿತಿಯನ ಕಂಡುಕೊಳ್ಳಲು ಪೂರಕವಾಯಿತು. ಇದಕ್ಕೆ ನ ಪತ್ರಕರ್ತ ವೃತ್ತಿಯ ಚಿಕಿತ್ಸಕ ಬುದ್ಧಿಯೂ ಬಹಳಷ ನೆರವಿಗೆ ಬಂತು. ವಿಜ್ಞಾನದ ಸಹಾಯವಿಲ್ಲದಿದ್ದ ನಾನು ಇಲ್ಲಿಯ ಕೆಲ ಮೂಢ ನಂಬಿಕೆಗಳಿ ಬಲಿಯಾಗಬಹುದಿತ್ತು.

"ಕೆಲವು ದಿನಗಳ ಹಿಂದೆ ದೇವರೆಂದ ಮನುಷ್ಯನ ಮನಸ್ಸಿನ ಭ್ರಾಂತಿಯೆಂತಲೂ, ಆಧ್ ತ್ಮಿಕ ಸತ್ಯವನ್ನು ಕೇವಲ ಅಸ್ಪಷ್ಟ ಬೆಳಕೆಂತಲ ಹಾಗೂ ಈಶ್ವರೀಯ ನ್ಯಾಯವನ್ನು ಬಾ ಬುದ್ಧಿಯ ಆದರ್ಶವಾದಿಗಳು ಇಚ್ಛಿಸುವ ಮಿ ಯಿಯೆಂತಲೂ ಪರಿಗಣಿಸುವವರಲ್ಲಿ ನಾನು ಒಬ್ಬನಾಗಿದ್ದೆ.

"ಕೆಲವು ಜನರು ತಾವೆಂದರೆ ದೇವರ ಜ ಗೀರಿನ ಪ್ರತಿನಿಧಿಗಳೆಂಬಂತೆ ವರ್ತಿಸುತ್ತ ಸ್ವರ್ಗ ಬಗ್ಗೆ ವಿಶ್ವಾಸ ಹುಟ್ಟಿಸುವ ವೇದಾಂತ ಸಾರುವುದ







ಬಗ್ಗೆ ಅಸಹನೆ; ತರ್ಕವಿಲ್ಲದ ಮತಾಂಧ ವೇದಾಂತಿಗಳು ಧರ್ಮದ ಬಗ್ಗೆ ನಡೆಸುವ ನಿರರ್ಥಕ ಪ್ರಯತ್ನಗಳ ಕುರಿತು ನನಗೆ ಅನಾದರವಿತ್ತು.

"ಒಬ್ಬ ಸಾಮಾನ್ಯ ಯಾತ್ರಿಕನು ಕಂಡರಿಯದ ಹಿಂದುಸ್ಥಾನದ ವಿಶಿಷ್ಟ ಸ್ವರೂಪವನ್ನು ನಾನು ಕಂಡೆನೆಂದು ಅತಿ ವಿನಮ್ರವಾಗಿ ಭಾವಿಸುತ್ತೇನೆ. ಆದರೆ ನಾನು ಯಾವುದೇ ಪೌರಸ್ತ್ಯಮತದ ಸಿದ್ಧಾಂತಗಳಿಗೆ ಅಂಟಿಕೊಂಡಿಲ್ಲ. ಏಕೆಂದರೆ ಅವುಗಳ ಬಗ್ಗೆ ಈಗಾಗಲೇ ಬೌದ್ಧಿಕವಾಗಿ ನಾನು ಸಾಕಷ್ಟು ಅಧ್ಯಯನಗೈದಿದ್ದೆ" ಎಂದಿದ್ದಾರೆ.

"ಆಧ್ಯಾತ್ಮಿಕ ಚಿಂತನೆಯ ಕುರಿತು ಬ್ರುಂಟನ್‌ರ ಅಭಿಪ್ರಾಯ ಹೀಗಿದೆ:

"ಮನುಷ್ಯನು ತನ್ನಲ್ಲಿ ಅಡಗಿರುವ ಈಶ್ವರೀ ಅಂಶದ ಜ್ಞಾನದ ಬಗ್ಗೆ ಅನಭಿಜ್ಞನಾಗಿರುತ್ತಾನೆ. ಅಂತಲೇ ಆತನಿಗೆ ತನ್ನ ನಿಜ ಸ್ವರೂಪದ ಅರಿವಾಗದು. ಎಲ್ಲಿಯವರೆಗೆ ಮನುಷ್ಯನಿಗೆ ತಾನೇ ಆಧ್ಯಾತ್ಮ ಬಾಧ್ಯತೆಯ ಕೇಂದ್ರಬಿಂದುವೆಂಬ ಆತ್ಮವಿಶ್ವಾಸ ಮೂಡುವದಿಲ್ಲವೋ ಅಲ್ಲಿಯವರೆಗೆ ಆತನು ಬೇರೆಯವರ ವಿಚಾರಗಳಿಗೆ ಅಂಟಿಕೊಂಡಿರುತ್ತಾನೆ."

ಶ್ರೀ ರಮಣ ಮಹರ್ಷಿಗಳನ್ನು ಇಜಿಪ್ತಿನ "ಸ್ಫಿಂಕ್ಸ್'ಗೆ (ರೆಕ್ಕೆಯುಳ್ಳ ಸಿಂಹದೇಹದ ಸ್ತ್ರೀಮುಖ) ಹೋಲಿಸಿದವರು ಡಾ. ಬ್ರುಂಟನ್. ತನ್ನ ಸುತ್ತ ಮುತ್ತ ದೃಷ್ಟಿ ಹೊರಳಿಸದ ಅದು ಕಣ್ಣುರೆಪ್ಪೆಯನ್ನೂ ಅಡಿಸದೆ ಯಾವಾಗಲೂ ಅಂತರ್ಮುಖಿಯಾಗಿರುತ್ತದೆ. ಆದರೆ ಅದರ ಮುಖದ ಮೇಲಿನ ಮಂಧಹಾಸ ಮಾತ್ರ ಚಿಮ್ಮುವುದು ಜ್ಞಾನದ ಅನುಭೂತಿಯಿಂದಲೇ. ಶ್ರೀ ರಮಣ ಮಹರ್ಷಿಗಳ ಮಂದಹಾಸ ಅಷ್ಟು ಪರಿಣಾಮಕಾರಿಯಾದದ್ದು."

ಡಾ. ಬ್ರುಂಟನ್ ಮತ್ತೊಂದೆಡೆ ಹೇಳುತ್ತಾರೆ: "ಅಂತಲೇ ನಾನೀಗ ದೇವರ ಬಗ್ಗೆ ಹೊಸ ವಿಚಾರಹೊತ್ತು ನನ್ನ ಪೂರ್ವಾಪರ ವಿಚಾರಗಳಿಗೆ ಭಿನ್ನವಾಗಿ ಆಲೋಚಿಸುತ್ತಿದ್ದೇನೆ. ಏಕೆಂದರೆ ಇಲ್ಲಿ ನನ್ನ ವಿಚಾರಗಳಿಗೆ ಒಂದು ಹೊಸ ತಿರುವು ದೊರಕಿದೆ. ಅವು ಬದಲಾಗಲು ಸಾಕಷ್ಟು ಪುಷ್ಟಿ ದೊರಕಿತು. ಇದನ್ನು ನಾನು ಒಂದು ಅಪೂರ್ವ ಕೊಡುಗೆಯೆಂದೇ ಭಾವಿಸುತ್ತೇನೆ. ನನ್ನ ಈ ಸಾಧನೆ ಬೇರೆಯವರ ದೃಷ್ಟಿಯಲ್ಲಿ ತುಚ್ಛ ಹಾಗೂ ವೈಯಕ್ತಿಕ ವಿಚಾರವೇ ಆಗಿರಬಹುದು. ಆದರೆ ಈ ಕೊಡುಗೆಯೆಂದರೆ ಧರ್ಮದ ಬಗ್ಗೆ ವಿಶ್ವಾಸವಿಲ್ಲದ ಮತ್ತು ಧಾರ್ಮಿಕ ವಿಚಾರಗಳನ್ನು ಕಠೋರ ಸತ್ಯದ ಒರೆಗಲ್ಲಿಗೆ ಹಚ್ಚಿ ಪರೀಕ್ಷಿಸುವ ಇಂದಿನ ಆಧುನಿಕ ಪೀಳಿಯ ಮಗುವಿಗೆ ಅದು- ಒಬ್ಬ ನಾಸ್ತಿಕ ಪು... ಪಡೆಯುವ ನಂಬಿಕೆಯಷ್ಟೇ ಮಹತ್ವದ್ದಾಗಿದೆ. ... ನಂಬಿಕೆ ದೊರೆತದ್ದು ಚರ್ಚೆ ಅಥವಾ ವಾದವಿವಾದಗಳಿಂದಲ್ಲ. ಅದು ಅಭ್ಯಾಗತ ಮತ್ತು ಅಭಿರಾಮ ಅನುಭವವಾಗಿದೆ."

ಭಾರತದಲ್ಲಿನ ಆಧ್ಯಾತ್ಮಿಕ ಲೋಕದ ಕುರಿತ ಚಿಂತನೆಗೈದವರಲ್ಲಿ ಡಾ. ಪಾಲ್ ಬ್ರುಂಟನ್‌ರದು ಅಪರೂಪದ ವ್ಯಕ್ತಿತ್ವ. ಒಬ್ಬ ಶ್ರೇಷ್ಠ ತತ್ವಜ್ಞಾನಿಗಿರಬೇಕಾದ ನಿರ್ಲಿಪ್ತತೆ ಸಮರ್ಪಣೆ, ಖಚಿತತೆ ಮತ್ತು ದೂರದೃಷ್ಟಿಗಳು ಇದ್ದುದರಿಂದಲೇ ಅವರೊಬ್ಬ ಅಪೂರ್ವ ತತ್ವಜ್ಞಾನಿಯಾಗಿ ಕಂಗೊಳಿಸುತ್ತಾರೆ. ಆದರೆ ಈ ಅಪೂರ್ವ ವ್ಯಕ್ತಿಯ ಜೀವನದ ಕುರಿತು ನಮಗೆ ದೊರಕುವ ಮಾಹಿತಿ ಅತ್ಯಲ್ಪ.

ತಮ್ಮ ಪುಸ್ತಕಗಳಲ್ಲಿ ಡಾ. ಬ್ರುಂಟನ್ ಸ್ವಂತದ ಜೀವನದ ಬಗ್ಗೆ ಏನನ್ನೂ ಬರೆದುಕೊಂಡಿಲ್ಲ. ಹೀಗಾಗಿ ಅವರ ಪುಸ್ತಕಗಳಿಗೆ ಗಣ್ಯರು ಬರೆದ ಮುನ್ನುಡಿಯಲ್ಲಿ ದೊರಕುವ ಅತ್ಯಲ್ಪವೆನಿಸುವ ವಿಚಾರಗಳಿಂದ ಅಷ್ಟಿಷ್ಟು ಕಲ್ಪನೆ ಮಾಡಿಕೊಳ್ಳಬೇಕಾಗುತ್ತದೆ.

ಅವರ 'ಹಿಮಾಲಯದಲ್ಲೊಬ್ಬ ವಿರಕ್ತ' ಎಂಬ ಪುಸ್ತಕಕ್ಕೆ ಮುನ್ನುಡಿ ಬರೆದ ನೇಪಾಳದ ರಾಜಕುವರ ಶಮಶೇರ ಜಂಗ್ ಬಹದ್ದೂರರು ಅದರಲ್ಲಿ ಹೀಗೆ ಅಭಿಪ್ರಾಯಪಟ್ಟಿದ್ದಾರೆ:

"ನನ್ನ ಮಿತ್ರರಾದ ಡಾ. ಪಾಲ್ ಬ್ರುಂಟನ್‌ರು ತೆಹರೀ ಪ್ರದೇಶದ ಪರ್ವತದಲ್ಲಿ ವಾಸವಾಗಿದ್ದಾಗ ನಾನೊಮ್ಮೆ ಆಕಸ್ಮಿಕವಾಗಿ ಅವರಿದ್ದಲ್ಲಿಗೆ ಹೋಗಿ ಕೆಲವು ದಿನ ಅವರ ಸಾನ್ನಿಧ್ಯದಲ್ಲಿ ಕಳೆದೆ. ಆ ದಿವಸಗಳು ಅದ್ಭುತವಾಗಿದ್ದು ನಮ್ಮನ್ನು ನಿತ್ಯ ಜೀವನದ ಭಯಂಕರ ಕೀಟಲೆಗಳಿಂದ ಎತ್ತಲೋ ಕೊಂಡೊಯ್ದು ಕನಸಿನ ಶಾಂತ, ಆಧ್ಯಾತ್ಮಪೂರಿತ ಒಂದು ಸುಂದರ ರಾಜ್ಯದಲ್ಲಿ ವಿಹರಿಸಿದಂತಿತ್ತು.

"ಆಗೊಮ್ಮೆ ಅವರು ತಾವು ಬರೆದ 'ಹಿಮಾ

ಲಯದಲ್ಲೊಬ್ಬ ವಿರಕ್ತ' ಪುಸ್ತಕದ ಕರಡು ಪ್ರತಿಯನ್ನು ನನಗೆ ತೋರಿಸಿ, 'ಇದನ್ನು ಇಲ್ಲಿಯೇ ಎಲ್ಲಾದರೂ ಒಂದು ಪರ್ವತದ ಅಡಿಯಲ್ಲಿ ಹೂತು ಬಿಡಬೇಕೆಂದಿದ್ದೇನೆ. ಏಕೆಂದರೆ ಇದರಿಂದ ಬಹಳಷ್ಟು "ಅಹಂ" ಹೊರಸೂಸುತ್ತಿದೆಯೆಂದರು. ಅದಕ್ಕೆ ನಾನು ಜೀವನದ ನೆನಪುಗಳನ್ನು ಬರೆಯುವಾಗ 'ಅಹಂ' ಬರುವದು ಸಹಜವೆಂದು ಹೇಳಿ ಸಮಾಧಾನಪಡಿಸಿದ್ದೆ. ಮುಂದೆ ಅದಕ್ಕೆ ಮುನ್ನುಡಿ ಬರೆಯುವ ಭಾರ ನನ್ನ ಮೇಲೆ ಬಿತ್ತು.

"ಅವರು ನಿಗರ್ವಿ. ಅವರನ್ನು ನಾನು ಆಧುನಿಕ ಯುಗದ ಆಧ್ಯಾತ್ಮಿಕ ಪ್ರವಾದಿಯೆಂದೇ ಭಾವಿಸುತ್ತೇನೆ. ಕಾರಣ ಇಪ್ಪತ್ತನೇ ಶತಮಾನದ ತಿಳುವಳಿಕೆಗೂ ಮೀರಿದ ನಮ್ಮ ಯೋಗ ಮತ್ತು ಏಶಿಯಾ ಖಂಡದ ತತ್ವಜ್ಞಾನದ ಸೂಕ್ಷ್ಮ ಜಟಿಲತೆ ಮತ್ತು ಆಧ್ಯಾತ್ಮಿಕ ತಂತ್ರಗಳು ಇವುಗಳನ್ನು ಪ್ರಾಚೀನ ಪದ್ಧತಿಯಂತೆ ಪ್ರತಿಪಾದಿಸುವದಕ್ಕಿಂತಲೂ ಸ್ಪಷ್ಟವಾಗಿ ಡಾ. ಬ್ರುಂಟನ್‌ರು ತಮ್ಮ ವೈಜ್ಞಾನಿಕ, ತಾರ್ಕಿಕ ಮತ್ತು ಸಾಂಪ್ರದಾಯಕತೆ ಮೀರಿದ ಆಧುನಿಕ ರೀತಿಯಲ್ಲಿ ವಿವರಿಸಿದಾಗ ಅದನ್ನು ತಿಳಿದುಕೊಳ್ಳಲು ನನಗೆ ತೀರ ಸುಲಭವಾಗುತ್ತಿತ್ತು."

ಡಾ. ಬ್ರುಂಟನ್‌ರ ನಂಬಿಕೆ ಪ್ರಶ್ನಾತೀತವಾದುದು. ಬುದ್ಧಿಗೆ ಎಟುಕದ ಜೀವನದ ಆಚೆಗಿರುವ ಸತ್ಯವನ್ನು ಕಂಡುಕೊಳ್ಳಲು ಅವರು ಮಾಡಿದ ತ್ಯಾಗ ಅಮೋಘವಾದದ್ದು. ನಿಜಾರ್ಥದಲ್ಲಿ ಅವರನ್ನು ತಿಳಿದು ಅರಿತವರು ತೀರ ವಿರಳ.

ಅವರು ಬರೆದ ಪುಸ್ತಕಗಳನ್ನು ಹಿಂದುಸ್ಥಾನದ ಎಲ್ಲ ಪತ್ರಿಕೆಗಳು ಮುತ್ತು ಮುಖಂಡರು ಅತಿಯಾಗಿ ಪ್ರಶಂಸಿಸುತ್ತಿದ್ದಾಗ ಪಾಶ್ಚಿಮಾತ್ಯರಲ್ಲಿ, ಅವರೊಡನೇ ಹುಟ್ಟಿ ಬೆಳೆದ, ಕೆಲ ಕಲಕತ್ತಾ ಆಂಗ್ಲ ಪತ್ರಿಕೆಗಳ ಅಜ್ಞ ವಿಮರ್ಶಕರು ಅನುಭವ ಮತ್ತು ತಿಳುವಳಿಕೆಯ ಅಭಾವದ ಮೂಲಕ ಅವರಿಗೆ ವಿಶ್ವಾಸಘಾತ ಮಾಡಿದರು. ಅವರು ಬರೆದ 'ರಹಸ್ಯ ಭಾರತದಲ್ಲೊಂದು ಶೋಧ' ಪುಸ್ತಕದ ಒಕ್ಕಣಿಕೆ ಸುಳ್ಳೆಂತಲೂ 'ಗುಪ್ತ ಇಜಿಪ್ತದಲ್ಲೊಂದು ಶೋಧ'ದಲ್ಲಿ ಬರೆದ ಅವರ ಅನುಭವಗಳು ಕೇವಲ ಪತ್ರಿಕಾ ಆಕರ್ಷಣೆಗಳೆಂತಲೂ ಟೀಕಿಸಿದ್ದರು.

ಪ್ರೊ. ಮ್ಯಾಕ್ಸ್‌ಮುಲರ್, ಬರ್ನೊವ್ ಮತ್ತು ಕೋಲ್‌ಬ್ರೂಕ್‌ರಂತೆಯೆ ಡಾ. ಬ್ರುಂಟನ್ ಕೂಡ ಹಿಂದುಸ್ಥಾನದ ಆಧ್ಯಾತ್ಮಿಕ ವಿಚಾರದ ಕುರಿತು ಪಾಶ್ಚಿಮಾತ್ಯರಿಗಿದ್ದ ತಪ್ಪು ಕಲ್ಪನೆಗಳನ್ನು ಹೊಡೆದು ಹಾಕಲು ಸಾಕಷ್ಟು ಪ್ರಯತ್ನಪಟ್ಟಿದ್ದಾರೆ.

ಡಾ. ಬ್ರುಂಟನ್ ಹಿಂದುಸ್ಥಾನದ ಆಧ್ಯಾತ್ಮಿಕ ಚಿಂತನೆ ಕುರಿತು ನಡೆಸಿದ ಅಧ್ಯಯನ, ಅದಕ್ಕಾಗಿ ಪಟ್ಟ ಶ್ರಮ ಗಣನೀಯವಾದುದು. ಇದರ ಬದಲು ಕಿಂಚಿತ್ತಾದರೂ ಅವರು ತಮ್ಮ ಧರ್ಮದ ಬಗ್ಗೆ ದುಡಿದಿದ್ದರೆ ಅವರೊಬ್ಬ ಪ್ರಸಿದ್ಧ ಪುರುಷರಾಗುತ್ತಿದ್ದರೇನೋ! ಆದರೆ ಹಾಗೆ ಮಾಡದೇ ಹಿಂದು ಧರ್ಮದ ಬಗ್ಗೆ ಜಗತ್ತಿಗೆ ತಿಳಿಸಿಕೊಡಲು ಅವರು ಮಾಡಿದ ಅಪೂರ್ವ ಪ್ರಯತ್ನಕ್ಕೆ ಭಾರತ ಅವರಿಗೆ ಋಣಿಯಾಗಿರಬೇಕು.

## ಧಗೆ

ಇನ್ನೂ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದಿರಲಿಲ್ಲ. ಬೇಸಿಗೆಯ ದಿನಗಳು. ಒಂದು ದಿನ ಚಕ್ರವರ್ತಿ ರಾಜಗೋಪಾಲಾಚಾರಿ ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದರು. ಅದೇ ಬೋಗಿಯಲ್ಲಿ ಒಬ್ಬ ಬ್ರಿಟಿಶ್ ಪ್ರಯಾಣಿಕ ಕೂಡ ಇದ್ದ.

ತೀವ್ರವಾದ ಬಿಸಿಲಿನಿಂದ ಆ ಆಂಗ್ಲ ಪ್ರಯಾಣಿಕ ಬೆವರಿನಿಂದ ತೊಯ್ದುಹೋಗಿದ್ದ. "ಅಬ್ಬ ಏನು ಧಗೆ" ಎಂದ ಆತ ರಾಜಾಜಿಯನ್ನು! ನೋಡುತ್ತ. "ಇಲ್ಲ, ಇನ್ನೂ ಅಂದುಕೊಂಡಷ್ಟು ತೀವ್ರವಾಗಿಲ್ಲ" ಎಂದರು ರಾಜಾಜಿ.

"ಅಂದರೇನು?" ಎಂದು ಆಶ್ಚರ್ಯದಿಂದ ಕೇಳಿದ ಆತ.

"ತಡೆಯಲಾರದಷ್ಟು ಸೆಕೆಯಾಗಿದ್ದರೆ ನಿಮ್ಮಂತಹ ಬ್ರಿಟೀಶರು ಎಂದೋ ಈ ದೇಶಬಿಟ್ಟು ಹೋಗಿಬಿಡುತ್ತಿದ್ದರು," ಎಂದರು ರಾಜಾಜಿ ನಗುತ್ತಾ.

• ಜಿ.ವಿ. ತಿಪ್ಪೇಸ್ವಾಮಿ



# ಕೇಳಿದ್ದೀರಾ? ಮೀನು ಮಳೆ!

• ವಿಶಾಖದತ್ತ.

ನೀವು ನಂಬಲಿಕ್ಕಿಲ್ಲ. ಆದರೆ ಇದು ನಿಜ. ಆಕಾಶದಿಂದ ಮೀನು ಮಳೆ ಸುರಿದ ಪ್ರಸಂಗಗಳು 'ಪ್ರಕೃತಿಯ ಅದ್ಭುತ ಇತಿಹಾಸ' ಪುಟಗಳಲ್ಲಿ ದಾಖಲಾಗಿವೆ. ಆದರೂ ಈ ವೈಚಿತ್ರ್ಯವನ್ನು ಒಡೆದು ನೋಡಿ ವಿವರಿಸಲು ಇಂದಿಗೂ ವಿಜ್ಞಾನಿಗಳಿಗೆ ಸಾಧ್ಯವಾಗಿಲ್ಲ.

೧೮೯೬ರ ಜುಲೈ ತಿಂಗಳು. ಜರ್ಮನಿಯ ಐಸನ್ ನಗರದಲ್ಲಿ ಮುಸಲಧಾರೆಯಾಗಿ ಮಳೆ ಸುರಿಯಿತು. ಆಲಿಕಲ್ಲುಗಳು ಮನೆಗಳ ಸೂರುಗಳಿಗೆ ಅಪ್ಪಳಿಸಿ ಅಪ್ಪಚ್ಚಿಯಾದವು. ಯಾರೋ ಒಬ್ಬ ಮನೆಯ ಬಾಗಿಲಲ್ಲಿ ನಿಂತುಕೊಂಡು ಮಳೆ ಅದರಲ್ಲೂ ಆಲಿಕಲ್ಲು ಮಳೆಯನ್ನು ಕಂಡು ಆನಂದಿಸುತ್ತಿದ್ದ ಕೋಳಿ ಮೊಟ್ಟೆಯಂಥದೊಂದು ಆತನ ಅಂಗಳದಲ್ಲೆ ಆಕಾಶದಿಂದ ಬಿದ್ದು ಬಾಯಿಬಿಚ್ಚಿಕೊಂಡಿತು. ಅದನ್ನು ನೋಡಿದ ಆತನೂ ಬಾಯಿಬಿಟ್ಟುಕೊಂಡೇ ನಿಂತ. ಒಡೆದ ಆ ಮೊಟ್ಟೆಯಂಥವರಿಂದ ಕಾರ್ಪ್‌ಜಾತಿಯ ಮೀನು ಮರಿಯೊಂದು ಚಿಮ್ಮಿ ಹರಿವ ನೀರಲ್ಲಿ ಬಿದ್ದಿತು. ಆತ ಓಡಿದ. ಮಳೆಯನ್ನು ಲೆಕ್ಕಿಸದೇ ಆ ಮೀನು ಇದ್ದಲ್ಲಿ ನೆಗೆದ. ಆ ಮೀನು ಇವನಿಗಿಂತ ಚೂಟಿ. ಕ್ಷಣಾರ್ಧದಲ್ಲೇ ನೀರಿನೊಂದಿಗೆ ಮಾಯವಾಯಿತು.

ಮರುದಿನದ ಪತ್ರಿಕೆಗಳಲ್ಲಿ ಆ ನಗರದ ಅಲ್ಲಲ್ಲಿ ಹೀಗೆ ಆಕಾಶದಿಂದ ಕೋಳಿ ಮೊಟ್ಟೆಯಂಥ ವಸ್ತು ಬಿದ್ದು ಅದರೊಳಗಿಂದ ಕಾರ್ಪ್ ಮೀನುಗಳು ಹೊರಬಂದದ್ದರ ಪ್ರತ್ಯಕ್ಷದರ್ಶಿ ಅನುಭವಗಳು ಪ್ರಕಟವಾದವು.

ನಾಲ್ಕು ವರ್ಷಗಳ ನಂತರ, ೧೯೦೦ರ ಮೇ ೧೪ ರಂದು ರೋಡ್ ಎಂಬ ದ್ವೀಪದಲ್ಲಿ ಬೆಳಗಿನಿಂದಲೇ ಎಡೆಬಿಡದ ಮಳೆ ಹತ್ತಿತು. ಆದರೆ ಅದರೊಂದಿಗೆ ಚಿಕ್ಕ ಚಿಕ್ಕ ಮೀನುಗಳು ತಲೆ ಕೆಳಗಾಗಿ ಬೀಳತೊಡಗಿದ್ದನ್ನು ಕಂಡ ಜನಕ್ಕೆ ತಮ್ಮ ಕಣ್ಣುಗಳನ್ನೇ ನಂಬಲಾಗಲಿಲ್ಲ. ಕೆಲವರಂತೂ ಆ ಮೀನು ಮರಿಗಳನ್ನು ಹಿಡಿದು ತಂದರು. ತಿನ್ನಲಿಕ್ಕಲ್ಲ; ಅವು ಯಾವ ಪ್ರಭೇದದವು ಎಂದು ಅರಿಯಲಿಕ್ಕೆ. ಒಂದೆಡೆ ಸ್ಟ್ರಾವುಟ್ ಜಾತಿಯವೂ ಮತ್ತೊಂದೆಡೆ ಪರ್ಚ್ ಗುಂಪಿನವೂ ಸುರಿದಿದ್ದವು. ಎರಡರಿಂದ ನಾಲ್ಕು ಅಂಗುಲಗಳವರೆಗಿನ ಉದ್ದದ ಮೀನುಮರಿಗಳವು.

೧೯೩೫ರ ಅಕ್ಟೋಬರ್ ೧೪ರಂದು ಆಸ್ಟ್ರೇಲಿಯದ ಕೆಲ ಪ್ರದೇಶಗಳಲ್ಲಿ ಇಂಥ ಮೀನು ಮಳೆಯಾಯಿತೆಂದು ವರದಿಗಳು ಪ್ರಕಟವಾದವು. ಜೆಲಿ ಜಾತಿಯ ಈ ಮೀನುಗಳು ಬಿದ್ದೊಡನೆಯೇ ಸತ್ತು ಹೋದವೆಂದೂ ರಸ್ತೆಗಳೆಲ್ಲ ಸತ್ತ ಮೀನುಗಳಿಂದ ತುಂಬಿದ್ದವೆಂದೂ ವರದಿಗಳಲ್ಲಿ ಹೇಳಲಾ

ಗಿತ್ತು.

ಅಮೆರಿಕದ ಉತ್ತರ ಭಾಗದಲ್ಲಿ ೧೯೫೨ರ ನವೆಂಬರ್ ೧೪ ರಂದು ಆದ ಮೀನು ಮಳೆಯೂ ಮಹತ್ವದ್ದೇ. ಈ ಮೀನುಗಳು ಅರ್ಧ ಅಂಗುಲದಿಂದ ಮುಕ್ಕಾಲು ಅಂಗುಲ ಉದ್ದದವು. ಅವುಗಳ ಸಂಖ್ಯಾಪ್ರಮಾಣ ಮಾತ್ರ ಈವರೆಗೂ ದಾಖಲೆಯಾಗೇ ಉಳಿದಿದೆಯಂತೆ. ೧೯೦೭ರ ಮೇ ೨೫ರಂದು ಆದ ವರ್ಷಾಧಾರೆಯಲ್ಲಿ ದೊಡ್ಡ ಗಾತ್ರದ ಆಲಿಕಲ್ಲುಗಳು ಬೀಳುತ್ತಿದ್ದುದನ್ನು, ಆ ಆಲಿಕಲ್ಲುಗಳಲ್ಲಿ ಮೀನಿನ ಮರಿಯ ಛಾಯೆಯಿರುವುದನ್ನೂ ಜನ ನೋಡಿದರು. ನೆಲಕ್ಕೆ ಬಿದ್ದ ಆಲಿಕಲ್ಲುಗಳು ಕರಗಿದಾಗ ಸಿಟಕಲ್ ಬ್ಯಾಂಕ್ ಎಂದು ಗುರುತಿಸಲಾಗುವ ಚಿಕ್ಕ ಚಿಕ್ಕ ಮೀನುಗಳು ಹೊರಬಿದ್ದವು.

ಭಾರತದಲ್ಲಿ ಜೆತಪುರ ಹಾಗೂ ರಾಜಕೋಟಗಳಲ್ಲಿಯೂ 'ಮತ್ಸ್ಯವರ್ಷ'ವಾದ ಉಲ್ಲೇಖಗಳಿವೆ. ಈ ಮೀನುಗಳು ಆರು ಅಂಗುಲದಿಂದ ಒಂದು ಅಡಿಯವರೆಗೆ ಉದ್ದವೂ, ಅರ್ಧ ಕಿಲೋಗ್ರಾಂನಿಂದ ಒಂದು ಕಿಲೋಗ್ರಾಂ ವರೆಗೆ ಭಾರದವೂ ಆಗಿದ್ದುವಂತೆ!

ಈ ಎಲ್ಲ ಘಟನೆಗಳಲ್ಲಿನ ಒಂದು ಗಮನಾರ್ಹ ಅಂಶವೆಂದರೆ ಯುರೋಪ್, ಅಮೆರಿಕಾ ಹಾಗೂ ಆಸ್ಟ್ರೇಲಿಯ ಖಂಡಗಳಲ್ಲಿನ ಮಳೆಯಲ್ಲಿ ಈಲ್, ಹೆರಿಂಗ್, ಸ್ಪ್ರಾವುಟ್, ಟ್ರಾವುಟ್, ಸ್ಮೆಲ್ಟ್, ಪೈಕ್, ಮಿನ್ನೊ ಮತ್ತು ಪರ್ಚ್ ಸ್ಯಾಂಡ್ ಜಾತಿಯವು ಸುರಿದಿದ್ದರೆ ಏಶಿಯದಲ್ಲಿ ಮಾತ್ರ ಇವುಗಳಿಗೆ ಭಿನ್ನವಾದ ಪ್ರಭೇದದವೇ ದೊರೆತವು.

ಮೀನು ಮಳೆಯನ್ನು ವೈಜ್ಞಾನಿಕ ಒರೆಗಲ್ಲಿಗೆ ಹಚ್ಚುವ ಪ್ರಯತ್ನಗಳೂ ನಡೆದಿವೆ. ಆದರೆ ಈ ನಿಕಷ ಪ್ರಯೋಗದಿಂದ ನಿಶ್ಚಿತ ಅಭಿಪ್ರಾಯಕ್ಕಿನ್ನೂ ಬರಲಾಗಿಲ್ಲ. ಪ್ರಖ್ಯಾತ ಮತ್ಸ್ಯ ವಿಶೇಷಜ್ಞ ಡಾ. ಈ. ಡಬ್ಲ್ಯು. ಗುಜರ್, "ಮತ್ಸ್ಯ ವರ್ಷಾಧಾರೆಗೆ ಚಂಡಮಾರುತ ಸಂದರ್ಭದಲ್ಲಿ ಸಮುದ್ರಗಳಲ್ಲಿ ಉಂಟಾಗುವ ಜಲಸ್ತಂಭಗಳೇ ಕಾರಣ," ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇಂಥ ಜಲಸ್ತಂಭಗಳು ಹತ್ತಾರು ಆಳು ಎತ್ತರಕ್ಕೆ ನಿಲ್ಲುತ್ತವಂತೆ. ಈ ನೀರುಕಂಬಗಳೊಂದಿಗೆ ಮೀನುಗಳೂ ಮೇಲಕ್ಕೆಳೆಯಲ್ಪಡುತ್ತವಂತೆ. ಮೀನು ಸಹಿತದ ಈ ನೀರ್ಗಂಬಗಳು ಗಾಳಿಯೊಂದಿಗೆ ಆಕಾಶದಲ್ಲಿ ಎತ್ತರದಲ್ಲಿ ಸಂಚರಿಸತೊಡಗುತ್ತವಂತೆ. ಚಂಡಮಾರುತದ ಕಾರಣದಿಂದ ಮೋಡ ಮುಸುಕಿ ಮಳೆಯಾಗುವ ಅನುಭವವೇನೂ ಹೊಸದಲ್ಲ. ಇಂಥ ಮಳೆಯೊಂದಿಗೆ ಮೇಲಿನಿಂದ ಮೀನುಗಳು ನೆಲಕ್ಕೆ ಬೀಳುತ್ತವೆ ಅಷ್ಟೆ," ಎಂದಿದ್ದಾರೆ ಡಾ. ಗುಜರ್. 'ನಾರ್ದರ್ನ್ ಆ್ಯಂಡ್ ಬೆಡ್‌ಫಾಸ್ಟ್. ಪೋಸ್ಟ್' ಎಂಬೊಂದು ಪತ್ರಿಕೆಯಲ್ಲಿ ೧೯೨೪ರ ಮೇ ೬ರಷ್ಟು ಹಿಂದೆಯೇ ಡಾ. ಗುಜರರ ಅಭಿಪ್ರಾಯವನ್ನು ಅನುಮೋದಿಸಿ ವಿಜ್ಞಾನಿ ಇಗ್ಲೀನೀ ಎಂಬವರು ಲೇಖನವೊಂದನ್ನು ಬರೆದರು.

ಇನ್ನೊಬ್ಬ ವಿಜ್ಞಾನಿ ಹ್ಯಾಂಬೋಲ್ಟ್‌ರು ಡಾ. ಗುಜರರ ಅಭಿಪ್ರಾಯವನ್ನು ಒಪ್ಪಲಿಲ್ಲ. ಅವರು ತಮ್ಮದೇ ಆದ ಬೇರೆ ಸಿದ್ಧಾಂತವನ್ನೇ ಮಂಡಿಸಿದರು. ಅವರ ಪ್ರಕಾರ, ಮೀನು ಮಳೆಗಳಿಗೆ ಜ್ವಾಲಾಮುಖಿಗಳ ಆಸ್ಫೋಟನೆಯೇ ಕಾರಣ. ತಮ್ಮ ಸಿದ್ಧಾಂತಕ್ಕೆ ಪೂರಕ ಪ್ರಮಾಣವಾಗಿ ಹ್ಯಾಂಬೋಲ್ಟ್‌ರು ಸಿಂಗಾಪುರ ಮತ್ತು ಅಮೇರಿಕಗಳ ಉದಾಹರಣೆ ನೀಡಿದರು. ಈ ಎರಡೂ ಕಡೆ ಜ್ವಾಲಾಮುಖಿಗಳು ಅಗ್ನಿಯನ್ನುಗುಳಿ ಕೆಲ ದಿನಗಳಲ್ಲಿ ಸುರಿದ ಜೋರುದಾರು ಮಳೆಯೊಂದಿಗೆ ಮೀನುಗಳೂ ಹನಿಯೊಂದಿಗೆ ನೆಲಕ್ಕಿಳಿದಿದ್ದವು. ●

---

ಬಡತನದಿಂದ ಹಾಗೂ ಹಸಿವಿನಿಂದ ನರಳುತ್ತಿದ್ದ ಹರಿರಾಮ್ ಕೊನೆಗೂ ಸಾವಿಗೆ ತುತ್ತಾಗಿ ಯಮರಾಜನ ಮುಂದೆ ನಿಂತ. ಯಮರಾಜ, "ನಿನಗೇನು ಬೇಕೋ ಕೇಳಿಕೋ," ಅಂದ. ಹರಿರಾಮನ ಕಣ್ಣಿನಿಂದ ಧಾರಾಕಾರವಾಗಿ ನೀರು ಹರಿಯಲು ಪ್ರಾರಂಭಿಸಿತು. ಅವನು ನಡುಗುತ್ತಿದ್ದ ತುಟಿಗಳಿಂದ

"ಪ್ರಭು, ಕೇವಲ ಒಂದು ಬಿಸಿ ರೊಟ್ಟಿಕೊಡಿಸಿ, ಅಷ್ಟೇ ಸಾಕು," ಅಂದ.

● ಟೇಕಲ್ ಗೋಪಾಲಕೃಷ್ಣ



# ಅಬ್ಬಾ! ೩,೬೦,೦೦೦ ಮದುವೆಗಳು

• ಸೋನಿ

ಒಂದೇ ದಿನ, ಒಂದೇ ಮುಹೂರ್ತ. ಆದದ್ದು ಒಟ್ಟು ಮೂರು ಲಕ್ಷ ಅರವತ್ತು ಸಾವಿರ ಜೋಡಿಗಳ ಮದುವೆಗಳು!

"ಎಲ್ಲಪ್ಪಾ ಇಂಥ ದೊಡ್ಡ ಪೆಂಡಾಲು ಹಾಕಿದ್ದರು? ಹೇಗಪ್ಪಾ ಅಷ್ಟೆಲ್ಲ ಜನಕ್ಕೆ ಊಟದ ವ್ಯವಸ್ಥೆ ಮಾಡಿದ್ದರು? ಬೀಗರು-ಬಿಜ್ಜರಿಗೆ ಇಳಿದುಕೊಳ್ಳುವ ವ್ಯವಸ್ಥೆ ಹೇಗೆ? ಒಬ್ಬನಾದರೂ ಅಳಿಯ ಅಥವಾ ಅವನ ಗೆಳೆಯ 'ಇಂಥ ವ್ಯವಸ್ಥೆಯಾಗಬೇಕಿತ್ತು, ಯಾಕೆ ಆಗಿಲ್ಲ?' ಎಂದು ರೊಳ್ಳಿ (ತಕರಾರು) ತೆಗೆಯಲಿಲ್ಲವೆ?" ಎಂದೆಲ್ಲ ನೀವು ಪ್ರಶ್ನಿಸುವ ಮುಂಚೆಯೆ ಒಂದೆರಡು ಸಂಗತಿಗಳನ್ನು ತಿಳಿಸಿಬಿಡುತ್ತೇನೆ.

ಇದು ಒಂದೇ ದಿನ ಒಂದೇ ಮುಹೂರ್ತದಲ್ಲಿ ನಡೆದ ಅಪೂರ್ವ ಸಮಾರಂಭವಾದರೂ ಒಂದೇ ಜಾಗದಲ್ಲಿ ನಡೆದದ್ದಲ್ಲ. ತುಂಬ ಪ್ರೀತಿ-ಸಹಕಾರಗಳಿಂದೊಡಗೂಡಿದ ಈ ಸಮಾರಂಭ, ಭಾರತವೂ ಸೇರಿದಂತೆ, ಜಗತ್ತಿನ ೧೬೦ ದೇಶಗಳಲ್ಲಿ ಏಕಕಾಲಕ್ಕೆ ನೆರವೇರಿತು. ಇದನ್ನು ಆಯೋಜಿಸಿದ್ದವರು 'ಫ್ಯಾಮಿಲಿ ಫೆಡರೇಶನ್ ಫಾರ್ ಯೂನಿಫಿಕೇಶನ್ ಆ್ಯಂಡ್ ವರ್ಲ್ಡ್ ಪೀಸ್' (ಜಾಗತಿಕ ಏಕತೆ ಹಾಗೂ ಶಾಂತಿಯ ಉದ್ದೇಶದ ಕೌಟುಂಬಿಕ ಒಕ್ಕೂಟ) ಎಂಬ ಸಂಸ್ಥೆಯವರು. ಉಪಗ್ರಹದ ನೆರವನ್ನು ಪಡೆದು ಅವರು ಈ ಅಭೂತಪೂರ್ವ ಕಾರ್ಯಕ್ರಮವನ್ನು ಸಾಂಗವಾಗಿ ಸಿದರು.

ದಕ್ಷಿಣ ಕೋರಿಯದ ರಾಜಧಾನಿ ಸಿಯೋಲ್ ನಗರದಲ್ಲೊಬ್ಬ ಮಹಾ ಕನಸುಗಾರನಿದ್ದಾನೆ. ಹೆಸರು ಸನ್ ಮ್ಯೂಂಗ್ ಮೂನ್. ಜಗತ್ತು ಒಂದೇ ಕುಟುಂಬದಹಾಗೆ ಶಾಂತಿಯಿಂದ ಕೂಡಿ ರಬೇಕೆಂಬ ಹೆಬ್ಬಯಕೆಯೇ ಮೂನ್‌ಗೆ ಈ ಸಂಸ್ಥೆಯನ್ನು ಸ್ಥಾಪಿಸಲು ಪ್ರೇರಣೆ. ಕಳೆದ ಕೆಲವಾರು ವರ್ಷಗಳಿಂದಲೂ ಆತ ಇಂಥ ಸಾಮೂಹಿಕ ವಿವಾಹಗಳನ್ನು ಏರ್ಪಡಿಸುತ್ತಲೇ ಬಂದಿದ್ದಾನೆ. ವರುವರುಷವೂ ಜನಪ್ರಿಯವಾಗುತ್ತಿರುವ ಕಾರ್ಯ ಕ್ರಮ ಇದು. ಮೊನ್ನೆ, ೧೯೯೫ರ ಅಗಸ್ಟ್ ೨೫ ರಂದು ನಡೆದದ್ದು ಈವರೆಗಿನ ಸಾಮೂಹಿಕ ವಿವಾಹಗಳಲ್ಲೇ ಅತ್ಯಂತ ದೊಡ್ಡದು.

ಮೂನ್ ಮುಖದ ಮೇಲೆ ಸದಾ ಬೆಳದಿಂ ಗಳು ಕುಣಿಯುತ್ತಿರುತ್ತದೆ. ಆ ಅಪೂರ್ವ ಕಾಂತಿ ಯುಕ್ತ ಮಸ್ತಕದಲ್ಲಿರುವ ಮಸ್ತಿಷ್ಕಕ್ಕೆ ಒಂದು ವಿಶೇಷ

ಶಕ್ತಿಯೂ ಇದೆ. ತನ್ನ ಬಳಿ ಬರುವ ಹುಡುಗ ಇಲ್ಲವೆ ಹುಡುಗಿಯ ಫೋಟೋ ನೋಡಿದಾಕ್ಷಣ ಯಾರು ಯಾರಿಗೆ ತಕ್ಕ ಜೋಡಿ ಎಂಬುದು ತಿಳಿದುಬಿಡುತ್ತದೆ. ಅದನ್ನು ಬೇಕಾದರೆ ಅತೀಂ ದ್ರಿಯ ಶಕ್ತಿ ಅನ್ನಿ.

ಒಂದು ರೀತಿಯಲ್ಲಿ 'ವಿವಾಹ ಸಂಸ್ಥೆ'ಯಂತೆ ಮೂನ್‌ನ ಒಕ್ಕೂಟ ಕೆಲಸ ಮಾಡುತ್ತದೆ ಎನ್ನ ಬೇಕು. ಆದರೆ ಇಲ್ಲೂ ಒಂದು ವೈಶಿಷ್ಟ್ಯ ಉಂಟು. ವಿವಾಹೇಚ್ಛು ಹುಡುಗ ಇಲ್ಲವೆ ಹುಡುಗಿ ತನ್ನ ಫೋಟೋ ಸಹಿತ ಎಲ್ಲಾ ವಿವರಗಳನ್ನೂ ನಿಗದಿತ ಅರ್ಜಿಫಾರ್ಮಿನಲ್ಲಿ ಬರೆದು ಒಕ್ಕೂಟಕ್ಕೆ ಕಳಿಸ ಬೇಕು. ಈ ವಿವರಗಳ ವಿಷಯದಲ್ಲಿ ತುಂಬ ಗೌಪ್ಯವನ್ನು ಕಾಪಾಡಿಕೊಂಡೇ ಕಾರ್ಯ ನಿರ್ವಹಿ ಸುವುದು ಮೂನ್‌ನ ಜಾಯಮಾನ. ತಾನು ಇಂಥ ಹುಡುಗನಿಗೆ ಇಂಥ ಹುಡುಗಿ ಎಂದು 'ಕಂಡು ಕೊಂಡ' ಮೇಲೆ ಮೂನ್ ಇನ್ನೂ ಒಂದು ಮಹತ್ವದ ಅಂಶದೆಡೆ ಗಮನಹರಿಸುತ್ತಾನೆ. ಅದೆಂ ದರೆ ಪ್ರತಿಯೊಬ್ಬ ವಿವಾಹೇಚ್ಛುವೂ ಡಾಕ್ಟರರಿಂದ ಪರೀಕ್ಷೆ ಮಾಡಿಸಿಕೊಳ್ಳಬೇಕಾಗುತ್ತದೆ. ಮುಖ್ಯವಾಗಿ ಏಡ್ಸ್ ಮುಂತಾದವು ಗಂಟುಬಿದ್ದಿಲ್ಲವಷ್ಟೆ? ಎಂಬ ಕುರಿತು ವೈದ್ಯಕೀಯ ಪ್ರಮಾಣ ಪತ್ರವನ್ನವರು ಪಡೆದು ಈ ಒಕ್ಕೂಟಕ್ಕೆ ಕಳಿಸಬೇಕಾಗುತ್ತದೆ.

ಇನ್ನು ಪತಿ-ಪತ್ನಿಯಾಗುವವರ ವಿಷಯ. ಅವ ರಿಬ್ಬರಿಗೂ ಮದುವೆಯ ದಿನದವರೆಗೂ ಯಾರು ಎತ್ತ ಎಂಬುದಾಗಲಿ, ಮುಖಪರಿಚಯವಾಗಲಿ ಇರುವುದಿಲ್ಲ. ಜಗತ್ತಿನ ಬೇರೆ ಬೇರೆ ಕೇಂದ್ರಗಳಲ್ಲಿ ನಡೆಯುವ ಮದುವೆಯ ವ್ಯವಸ್ಥೆಯೂ ಅಷ್ಟೇ ಗುಪ್ತವಾಗಿರುತ್ತದೆ. ಈ ಸಾಮೂಹಿಕ ವಿವಾಹದ ಮುಖ್ಯ ಸಮಾರಂಭ ಸಿಯೋಲ್‌ನ ಚಾಮ್‌ಸಿಲ್ ಒಲಿಂಪಿಕ್ ಮೈದಾನದಲ್ಲಿ. ಇಲ್ಲಿಗೇ ಬಂದು ಮದುವೆಯಾಗಬಯಸುವವರು ೬೦೦ ಡಾಲರುಗ ಳನ್ನು ನೀಡಬೇಕಾಗುತ್ತದೆ. ಇದರಲ್ಲಿ ವಿವಾಹ ಪೋಷಾಕು ಮತ್ತು ವಿವಾಹ ಭೋಜನದ ವೆಚ್ಚವೂ ಸೇರಿರುತ್ತದೆ.

ಮೂನ್ ನಿಶ್ಚಯಿಸಿ ನಡೆಸಿಕೊಟ್ಟ ಮದುವೆಗ ಳೆಲ್ಲ ಯಶಸ್ವಿಯೇ ಆಗಿವೆ. ಅಪರಿಚಿತರಾಗಿ ಬಂದು ದಂಪತಿಯಾಗಿ ಹಿಂದಿರುಗಿದವರೆಲ್ಲ ಸುಖೀ ಜೀವನ ನಡೆಯಿಸುತ್ತಿದ್ದಾರೆ. ಒಂದೇ ಒಂದು ವಿಚ್ಛೇದನವಾದ ಉದಾಹರಣೆಯೇ ಇಲ್ಲ. ಇಲ್ಲಿ ದಂಪತಿಯಾಗುವವರೆಲ್ಲ ಬಹುತೇಕ ಭಿನ್ನ ರಾಷ್ಟ್ರ, ಭಿನ್ನ ಸಂಸ್ಕೃತಿ, ಭಿನ್ನ ನಂಬಿಕೆ, ಭಿನ್ನ ಜಾತಿ-ಧರ್ಮ-ಸಂಪ್ರದಾಯದವರು. ಆದರೆ ಮೂನ್‌ನ ಮದುವೆ ಛತ್ರದಲ್ಲಿ ಅವರು ಅವನ್ನೆಲ್ಲ ಮರೆತುಬಿಡುತ್ತಾರೆ. ಆಸ್ಟ್ರೇಲಿಯದ ಹುಡುಗನಿಗೆ ಅರ್ಜೆಂಟಿನಾದ ಹುಡುಗಿ ಸಿಕ್ಕಬಹುದು. ಅಮೆರಿ ಕದ ಹುಡುಗಿಗೆ ಅಲ್ಜೀರಿಯದ ಹುಡುಗ ಪತಿಯಾಗಿ ಬರಬಹುದು. ಸಿಯೋಲ್‌ನ ಮುಖ್ಯ ಸಮಾರಂ ಭಕ್ಕೆ ಬರಲು ಆರ್ಥಿಕ ತೊಂದರೆಯಿರುವವರು ತಮ್ಮ ದೇಶದಲ್ಲೇ ಮೂನ್‌ನ ಅಪರೋಕ್ಷ ಪೌರೋ ಹಿತ್ಯದಲ್ಲಿ ಗೃಹಸ್ಥರಾಗುವ ಸೌಲಭ್ಯವೂ ಇದೆ. ಉಪಗ್ರಹ ಪ್ರಸಾರ ಸೇವೆ ಲಭ್ಯವಿರುವ ದೇಶಗಳ ಮುಖ್ಯ ನಗರಗಳಲ್ಲಿ ಈ ಸಮಾರಂಭ ಏರ್ಪಡು ತ್ತದೆ. ಅಂದಹಾಗೆ ಭಾರತದಲ್ಲಿಯೂ ಮೂನ್‌ನ ಸಂಸ್ಥೆ ಮದುವೆ ನಡೆಸುವುದುಂಟು: ದಿಲ್ಲಿಯ ಸಿರಿಫೋರ್ಟ್ ಆಡಿಟೋರಿಯಂ ಮತ್ತು ಬೆಂಗ ಳೂರಿನ ಸ್ವಾಮಿ ಶ್ರಿರಂಗನಾಥ ಆಶ್ರಮಗಳಲ್ಲಿ.

ಮದುವೆಯ ದಿನ ಮುಂಜಾನೆಯ ಅವಧಿ ಯೆಂದರೆ (ಸಿಯೋಲ್‌ನ ಸಮಯಕ್ಕನುಸಾರವಾಗಿ) ದಂಪತಿಯಾಗಬಯಸುವವರಿಗೆ ಸಡಗರ ಮತ್ತು ಕಾತರದ ಕ್ಷಣಗಳು. ವರ ಇಲ್ಲವೆ ವಧು ತನಗೆ ದೊರೆತ ಅನುಕ್ರಮ ಸಂಖ್ಯೆಯ ಚೀಟಿ ಹಿಡಿದು ವ್ಯವಸ್ಥಾಪಕರ ಕಚೇರಿಗೆ ಹೋಗಬೇಕು. ಅಲ್ಲಿ ತನ್ನ ಜತೆಗಾರ ಅಥವಾ ಜತೆಗಾತಿಯ ವಿವರ ಮತ್ತು ಭಾವಚಿತ್ರ ಪಡೆದು ಮುಹೂರ್ತಕ್ಕಾಗಿ ಕಾದು ನಿಲ್ಲಬೇಕು. ಕೆಲವು ಕುತೂಹಲಿಗಳು ಅಷ್ಟರೊಳಗಾ ಗಿಯೇ ಕೈಯಲ್ಲಿರುವ ಫೋಟೋದಲ್ಲಿನ ಮುಖ ಕಣ್ಣೆದುರು ಕಂಡು ಕುಲುಕುಲು ನಕ್ಕೀತೇ ಎಂದು ಅತ್ತಿತ್ತ ದೃಷ್ಟಿ ಹರಿಸುವುದುಂಟು. ಪವಿತ್ರ ಜಲ ಸಿಂಚನ, ಗೃಹಸ್ಥ ಜೀವನದ ಉದ್ದೇಶೋಪದೇಶಗಳ ನಂತರ "ದಂಪತಿಯಾದಿರಿ" ಎಂದು ಘೋಷಿಸ ಲಾಗುತ್ತದೆ. ಆ ಮೇಲೆ ಮೂನ್ ಮಹಾಶಯ ನಿಂದ 'ಆಶೀರ್ವಚನ'. ಇದು ಅಂಥಿಂಥ ಆಶೀ ರ್ವಚನವಲ್ಲ. "ಇಪ್ಪತ್ತೊಂದನೆಯ ಶತಮಾನದಲ್ಲಿ ಕಾಲಿಕ್ಕುತ್ತಿರುವ ಜಗತ್ತಿನಲ್ಲೀಗ

ಧಾರ್ಮಿಕ-ಜಾತೀಯ ಭಾವನೆಗಳು ಕೆರಳುತ್ತಿವೆ. ಭಯಂಕರ ಸ್ವರೂಪ ತಾಳುತ್ತಿವೆ. ಇದನ್ನು ಹೋಗಲಾಡಿಸುವುದು ನಿಮ್ಮೆಲ್ಲರ ಕರ್ತವ್ಯ. ಜಗತ್ತು ಅಖಂಡವಾಗಿರುವಂತೆ ಯತ್ನಿಸಿ. ನಾಳೆ ಹುಟ್ಟುವ ನಿಮ್ಮ ಮಕ್ಕಳಿಗೆ ಇದು ಮೊದಲಿನಿಂದಲೇ ಬೋಧಿಸಲ್ಪಡಲಿ. ಹಾಗೆಯೇ ಏಡ್ಸ್‌ನಂಥ ಮಾರಕ ರೋಗಗಳು, ಪರಿಸರವಿನಾಶ, ಭ್ರಷ್ಟಾಚಾರ, ಅಪರಾಧ, ಆತಂಕವಾದ, ನೈತಿಕ ಪತನಗಳ ವಿರುದ್ಧ ಹೋರಾಡಲು ನೀವೂ ನಿಮ್ಮ ಮಕ್ಕಳೂ ಮುಂದಾಗಿ. ನಾಳಿನ ಜಗತ್ತು ನಿಜಕ್ಕೂ ನಂದನವನವಾಗಲಿ....."

ವರದಕ್ಷಿಣೆ, ವಿವಾಹ ವಿಚ್ಛೇದನ, ವಧುದಹನ, ಲಿಂಗಭೇದಗಳಂಥ ಸಾಮಾಜಿಕ ತ್ರುಟಿಗಳೇ ಭಾರತದಲ್ಲಿ ರಾರಾಜಿಸುತ್ತಿರುವ ದಿನಗಳಿವು. ೧೯೯೨ರಲ್ಲಿ ದಿಲ್ಲಿಯ ವಿ.ಎ. ಜಕಾರಿಯಾ ಎಂಬ ಭಾರತೀಯ ಕ್ರಿಶ್ಚಿಯನ್ ಯುವಕ ಆದರ್ಶಮಯ ಜೀವನ ನಡೆಸುವ ಉದ್ದೇಶದಿಂದ ಸನ್ ಮ್ಯೂಂಗ್ ಮೂನ್‌ನನ್ನು ಸಂಪರ್ಕಿಸಿದ. ಅದೇ ವರ್ಷ ನಡೆದ ಸಾಮೂಹಿಕ ವಿವಾಹ ಕಾರ್ಯಕ್ರಮದಲ್ಲಿ ಪಾಲ್ಗೊಂಡ ಆತ ಕೈ ಹಿಡಿದದ್ದು ಒಬ್ಬ ಜಪಾನಿ ಯುವತಿಯನ್ನು. ಆಕೆ ಬೌದ್ಧ ಧರ್ಮೀಯಳು. ಪ್ರತಿ ವರ್ಷವೂ ಈ ಇಬ್ಬರೂ ಉಪಗ್ರಹ ಮೂಲಕ ದಿಲ್ಲಿಯಲ್ಲಿ ನಡೆಯುವ ಸಾಮೂಹಿಕ ವಿವಾಹದ ಉಸ್ತುವಾರಿಯಲ್ಲಿ ಸಡಗರದಿಂದ ತಿರುಗಾಡುತ್ತಾರೆ.

ಸನ್ ಮ್ಯೂಂಗ್ ಮೂನ್ ೭೫ ವರ್ಷದ ಹಿರಿಯ. ಹದಿಮೂರು ಮಕ್ಕಳ ತಂದೆ. ೨೯ ಮೊಮ್ಮಕ್ಕಳ ತಾತ. ಆತನ ಪತ್ನಿಗೆ ಸರಿಸುಮಾರು ೭೦ ವರ್ಷ. ಹಾಕ್ ಜಾ ಹಾನ್ ಕೂಡ ಗಂಡನ ವಿಚಾರಗಳಿಗೆ ತಕ್ಷಣ ಸ್ಪಂದಿಸುವವಳು. ಈ ಅಪೂರ್ವ ದಂಪತಿಗೆ ಈಗ ಜಗತ್ತೇ ಒಂದು ಮನೆ. ಇಂದು ಸಿಯೋಲ್, ನಾಳೆ ಟೋಕಿಯೋ, ನಾಡಿದ್ದು ಲಂಡನ್ ಎಂದು ಸಂಚರಿಸುವ ಮೂನ್ ಹೆಚ್ಚಾಗಿ ವಾಸಿಸುವುದು ಅಮೆರಿಕದಲ್ಲಿ. ಹಲವಾರು ಸಾಮಾಜಿಕ ಸೇವಾ ಸಂಸ್ಥೆಗಳನ್ನಾತ ಅಲ್ಲಿ ನಡೆಸುತ್ತಿದ್ದಾನೆ. ಆತನ ಧರ್ಮಪತ್ನಿ ಹಾಕ್ ಜಾ ಹಾನ್ ವಿಚ್ಛೇದಿತ-ಪತಿತ-ಶೋಷಿತ ಸ್ತ್ರೀಯರ ಅಭ್ಯುದಯಕ್ಕಾಗಿ ಯತ್ನಿಸುತ್ತಾಳೆ. ಅವರಿಗೊಂದು ನೆಮ್ಮದಿಯ ನೆಲೆಯನ್ನು ದೊರಕಿಸಿಕೊಡುವುದರತ್ತಲೇ ಆಕೆಗೆ ಸದಾ ಗಮನ.

ಇಂದು ಜಗತ್ತಿನಾದ್ಯಂತ ಮೂನ್‌ಗೆ ಮೂವತ್ತು ಲಕ್ಷಕ್ಕೂ ಹೆಚ್ಚು ಅನುಯಾಯಿಗಳಿದ್ದಾರೆ. ಆತನನ್ನು ತಮ್ಮ ಗುರುವೆಂದೇ ಅವರೆಲ್ಲ ಗೌರವಿಸುತ್ತಾರೆ. ಅಂತೆಯೇ ಮೂನ್ ಸಂಕಲ್ಪಗೈದದ್ದು ಸಾಕಾರಗೊಂಡು ಬಿಡುತ್ತದೆ.

"ಸಂಶಯ, ಒಣ 'ಅಹಂ'ಗಳೇ ಕೌಟುಂಬಿಕ ಶಾಂತಿ ಕದಡಲು ಕಾರಣ. ಕ್ರಮೇಣ ಇವು ಸಮಾಜ, ಜನಾಂಗ, ದೇಶ, ಜಗತ್ತು ಹೀಗೆಯೇ ಪಸರಿಸುತ್ತ ಎಲ್ಲೆಲ್ಲೂ ಅಶಾಂತಿ ಹರಡುವಂತಾಗುತ್ತದೆ. ಪರಸ್ಪರರನ್ನು ಅರಿಯುವಿಕೆ, ಪರಸ್ಪರರನ್ನು ಗೌರವಿಸುವಿಕೆ, ಪರಸ್ಪರ ಪ್ರೀತಿ ಈ ಮೂರು ಆಚರಣೆಗಳು ಮಂತ್ರೌಷಧಿಯಂತೆ ಕೆಲಸ ಮಾಡುತ್ತವೆಂಬುದು ನನ್ನ ಅನುಭವಕ್ಕೆ ಬಂದಿದೆ."

ಆತನ ಅನುಭವದ ಲಾಭವೀಗ ಜಗತ್ತಿಗೆ ತಟ್ಟುತ್ತಲಿದೆ ಎಂಬುದು ಸಮಾಧಾನದ ಸಂಗತಿ.

## ಮೊಸಳೆ ಮಹಾತಾಯಿ

ಭಾರತದಲ್ಲಿ ಎರಡು ಮಾತ್ರ ಮೊಸಳೆ ತೋಟಗಳಿವೆ. ಒಂದು ಸರಕಾರದ್ದು. ಇದು ಸಾತನೂರು ಅಣೆಕಟ್ಟು ಪ್ರದೇಶದಲ್ಲಿದೆ. ಮತ್ತೊಂದು ಮಹಾಬಲೀಪುರದ ಬಳಿಯ ವಡನೆಮಿಲಿ ಎಂಬಲ್ಲಿದೆ. ಇದು ಖಾಸಗಿಯದು. ಇಲ್ಲಿರುವವೆಲ್ಲ ಜವುಗು ಪ್ರದೇಶದ ಮೊಸಳೆಗಳು.

ಮೊಸಳೆಗಳಲ್ಲಿ ಎಷ್ಟು ಜಾತಿಗಳಿದ್ದರೂ ಅವುಗಳ ಗುಣ ಒಂದೇ. ಇವುಗಳು ಬುದ್ಧಿಹೀನ ಜೀವಿಯಾದ್ದರಿಂದ ಎಷ್ಟೇ ಪ್ರೀತಿಸಿದರೂ ಪ್ರತಿಕ್ರಿಯಿಸಲಾರವು. ಒಂದು ಮೊಸಳೆ ಒಂದೆರಡು ಕಿಲೋ ಮಾಂಸ ತಿಂದು ಎರಡು ಮೂರು ತಿಂಗಳು ಕೊರಡಿನಂತೆ ಸುಮ್ಮನೆ ಬಿದ್ದಿರಬಲ್ಲದು. ಇದರ ಚರ್ಮಕ್ಕೆ ಭಾರೀ ಬೆಲೆಯಿದೆ. ಇವು ಒಂದೇ ಸಲಕ್ಕೆ ಎಂಬತ್ತು ಮೊಟ್ಟೆಯಿಡಬಲ್ಲವು. ಆದರೆ ತಾಯಿ ಅರ್ಧದಷ್ಟು ಮರಿಗಳನ್ನು ತಿಂದು ಬಿಡುತ್ತದೆ. ಭಾರೀ ಬೆಳಕೆಂದರೆ ಮೊಸಳೆಗೆ ಆಗದು.

ಸಂಗ್ರಹ: ಗಣೇಶ ಪಿ. ನಾಡೋರ

# ಲಂಚ ನಿರ್ಮೂಲನೆಗೆ ಸಿಂಗಾಪುರದ ಪಾಠ

• ನಿಮೋಯ್

ಜಗತ್ತಿಗೆ ಜಗತ್ತೇ ಲಂಚ-ರುಷುವತ್ತುಗಳಲ್ಲಿ ಮುಳುಗಿರುವಾಗ ಸಿಂಗಾಪುರ ಅದರಿಂದ ದೂರ ಸರಿಯುತ್ತಿದೆ.

"ನಾವು ಸಿಂಗಾಪುರದವರೆನ್ನುವುದನ್ನು ನೆನಪಿನಲ್ಲಿಟ್ಟುಕೊಂಡು ವ್ಯವಹರಿಸಿ. ಲಂಚವೆಂದರೆ ನಮಗೆ ಒಗ್ಗದು" ಎಂಬ ಸಂದೇಶವನ್ನು ಯಾವುದೇ ವ್ಯವಹಾರದ ಮಾತುಕತೆಗೆ ಮೊದಲು ಸ್ಪಷ್ಟವಾಗಿ ತಿಳಿಸಿರಬೇಕೆಂಬುದು ಅಲ್ಲೀಗ ಕಟ್ಟಾಜ್ಞೆಯೇ ಆಗಿದೆ. "ವಿದೇಶಗಳಿಗೆ ತೆರಳುವ ತಮ್ಮ ಪ್ರತಿನಿಧಿಗಳಿಗೆ ಪ್ರತಿಯೊಬ್ಬ ಉತ್ಪಾದಕನೂ ಈ ರೀತಿಯ ನಿರ್ದೇಶನವನ್ನು ನೀಡಲೇಬೇಕು" ಎಂದು ಸಿಂಗಾಪುರದ ಉತ್ಪಾದಕರ ಸಂಘದ ಅಧ್ಯಕ್ಷ ರಾಬರ್ಟ್ ಚುಆ, ಸದಸ್ಯ ಸಂಸ್ಥೆಗಳಿಗೆ ಫರಮಾನು ಹೊರಡಿಸಿಯೂ ಆಗಿದೆ.

ಮಾಜಿ ಸಂಸತ್ಸದಸ್ಯರೂ ಆಗಿರುವ ರಾಬರ್ಟ್ ಚುಆ "ಈಗ ಸಿಂಗಾಪುರವೆಂದರೆ ಸ್ವಚ್ಛ ವ್ಯವಹಾರಕ್ಕೆ ಉಪಮೆ ಎನಿಸಿದೆ" ಎಂದು ಹೆಮ್ಮೆಯಿಂದ ಹೇಳುತ್ತಾರೆ. "ಲಂಚ-ರುಷುವತ್ತುಗಳು ಕಾನೂನು ಬಾಹಿರ ಎನ್ನುವದಕ್ಕಿಂತ ಮಹತ್ವದ ಸಂಗತಿ ಎಂದರೆ ಅದರಿಂದ ಆ ಪ್ರತಿನಿಧಿ, ಆತ ಪ್ರತಿನಿಧಿಸುವ ಸಂಸ್ಥೆ ಮತ್ತು ಆ ಸಂಸ್ಥೆಯಿರುವ ದೇಶವೇ ಭ್ರಷ್ಟತನದಿಂದ ಉಳಿದವರ ದೃಷ್ಟಿಯಲ್ಲಿ ಚಿಲ್ಲರೆಯಾಗಿ ಕಾಣಿಸಲಾರಂಭಿಸುವುದಂತೂ ದಿಟ. ಇದು ಪ್ರಗತಿಗೆ ಮಾರಕ," ಎಂಬುದು ಚುಆ ಅವರ ನಂಬಿಕೆ. "ಆದ್ದರಿಂದ ಲಂಚದ ಮಾತೆತ್ತಬೇಡಿ, ಅಂಥ ವ್ಯವಹಾರಗಳಲ್ಲಿ ತಪ್ಪಿಯಾದರೂ ತೊಡಗಿಕೊಳ್ಳಬೇಡಿ ಮತ್ತು ಅಂಥ ಪ್ರಯತ್ನಗಳನ್ನು ಖಂಡಿಸಿಬಿಡಿ" ಎಂಬ ಚುಆರ ಮಾತೀಗ ಸಿಂಗಾಪುರದ ಪ್ರತಿನಿಧಿಗಳಿಗೆ ವೇದವಾಕ್ಯವಾಗಿದೆ.

ಆದರೆ 'ಫಾರ್ ಈಸ್ಟರ್ನ್ ಇಕನಾಮಿಕ್ ರಿವ್ಯೂ' ಎಂಬ ಪತ್ರಿಕೆ ನಡೆಸಿದ ಸಮೀಕ್ಷೆಯ ವರದಿಯಿಂದ ಚುಆ ಕೆರಳಿದ್ದಾರೆ. "ಸಿಂಗಾಪುರ

## ಏಕೆ ಸಾಧ್ಯವಾಯಿತು?

ಏಶಿಯದ ಬಹುತೇಕ ರಾಷ್ಟ್ರಗಳಲ್ಲಿ ಭ್ರಷ್ಟಾಚಾರದ ಜೊತೆಗೆ ರಾಜಕೀಯ ಅಸ್ಥಿರತೆ, ಕಾನೂನಿನ ರಕ್ಷಣೆಯ ಸೌಲಭ್ಯದ ಕೊರತೆ, ಹಾಗೂ ಸರಕಾರಿ ಆಡಳಿತ ಯಂತ್ರದ ನಿಧಾನಗತಿಯ ಕಾರ್ಯವಿಧಾನಗಳು ಆಯಾ ದೇಶದೊಂದಿಗೆ ಇತರ ಖಂಡಗಳ ರಾಷ್ಟ್ರಗಳು ವ್ಯವಹಾರ ನಡೆಸಲು ಇರುವ ದೊಡ್ಡ ಆತಂಕಗಳು.

"ಭ್ರಷ್ಟಾಚಾರದ ವಿರುದ್ಧ ಕೈ ಎತ್ತಲು ಜನಕ್ಕೆ ಲಂಚದ ಬಗೆಗಿರುವ ಮನೋಭಾವನೆ ದೊಡ್ಡ ಪಾತ್ರ ವಹಿಸುತ್ತದೆ," ಎನ್ನುತ್ತಾರೆ ಪ್ರೊ. ಸೈಯದ್ ಹುಸೇನ್ ಅಲಟಾಸ್. ಅವರು ಕಳೆದ ನಾಲ್ಕು ದಶಕಗಳಲ್ಲಿ ಲಂಚ ಬೆಳೆದು ಬಂದ ಬಗೆಯ ಕುರಿತು ಆಳ ಅಧ್ಯಯನ ನಡೆಸಿದವರು. "ಈ ಸಂಬಂಧದಲ್ಲಿ ಏಶಿಯದ ರಾಷ್ಟ್ರಗಳೇ ಮೊದಲ ಸ್ಥಾನ ಪಡೆಯುತ್ತವೆ. ಇದು ಅಲ್ಲಲ್ಲಿಯ ನಾಯಕತ್ವದ

ಇನ್ನೂ ಪರಿಪೂರ್ಣವಾಗಿ ಲಂಚವಿಮುಕ್ತವಲ್ಲ. ಶೇಕಡಾ ೩೦ರಷ್ಟು ಪ್ರತಿನಿಧಿಗಳು 'ಲಂಚ ನೀಡದೇ ವ್ಯಾಪಾರ ಕುದುರುವುದಿಲ್ಲ. ಆದ್ದರಿಂದ ಲಾಭದಾಯಕ ವ್ಯವಹಾರವನ್ನು ಕಳೆದುಕೊಳ್ಳಬೇಕಾಗುತ್ತದೆ.' ಎಂಬ ಅಭಿಪ್ರಾಯದವರಾಗಿದ್ದಾರೆ. 'ವಿಶೇಷವಾಗಿ ಚೀನ, ವಿಯತ್‌ನಾಮ್, ಮತ್ತು ಮ್ಯಾನ್‌ಮಾರ್‌ಗಳೊಂದಿಗೆ ಲಂಚದ ಪ್ರಸ್ತಾಪವಿಲ್ಲದೆ ಮಾತುಕತೆ ಪ್ರಾರಂಭಿಸುವುದೇ ಸಾಧ್ಯವಾಗುವುದಿಲ್ಲ' ಎಂಬ ಅಳಲುತೋಡಿಕೊಂಡಿದ್ದಾರೆ,"- ಇದು ಆ ಸಮೀಕ್ಷೆಯ ವರದಿ.

ಚುಆ ಇದನ್ನು ಅಲ್ಲಗಳೆಯುತ್ತಾರೆ. "ನಮ್ಮಲ್ಲಿ ಲಂಚ ನಿರ್ಮೂಲನ ಕಾಯಿದೆ ಅದೆಷ್ಟು ಉಗ್ರವಾಗಿದೆ ಎಂಬುದು ಅರಿಯದ್ದೇನಲ್ಲ. ಯಾವುದೇ ಸಿಂಗಾಪುರಿಗನೂ ಲಂಚ ಸ್ವೀಕರಿಸುವುದಾಗಲಿ, ನೀಡುವುದಾಗಲಿ ಅಥವಾ ಅದನ್ನು ಪಡೆಯುವ ಇಲ್ಲವೆ ಕೊಡುವ ಕುರಿತು ಪ್ರಸ್ತಾಪಿಸುವುದಾಗಲಿ ಜಘನ್ಯ ಅಪರಾಧ. ಅದಕ್ಕೆ ಗರಿಷ್ಠ ಒಂದು ಲಕ್ಷ ಡಾಲರುಗಳ ದಂಡ ವಿಧಿಸಲಾಗುತ್ತದೆ. ಮತ್ತು ಸಂದರ್ಭಾನುಸಾರ ಅದರೊಂದಿಗೆ ಅಪರಾಧಿಗೆ ಐದು ವರ್ಷಗಳವರೆಗಿನ ಸೆರೆವಾಸದ ಶಿಕ್ಷೆಯೂ ಸಾರಲ್ಪಡುತ್ತದೆ. ಒಂದು ವೇಳೆ ಇಂಥ ಪ್ರಕರಣದಲ್ಲಿ ಸರಕಾರ ಅಥವಾ ಸಂಸತ್ಸದಸ್ಯನ ಕೈವಾಡವಿರುವುದು ಗೊತ್ತಾದರಂತೂ ಆ ಶಿಕ್ಷೆ ಏಳು ವರ್ಷಗಳದ್ದಾಗುತ್ತದೆ. ಜತೆಗೆ ಪಡೆದ ಲಂಚದ ಪೂರ್ತಿ ಹಣವನ್ನು ಅಪರಾಧಿ ನ್ಯಾಯಾಲಯಕ್ಕೆ ಮರಳಿಸಬೇಕಾಗುತ್ತದೆ," ರಾಬರ್ಟ್ ಚುಆ ಸ್ಪಷ್ಟಪಡಿಸುತ್ತಾರೆ.

ಸಿಂಗಾಪುರದ ಸರಕಾರ ಲಂಚ ನಿರ್ಮೂಲನೆಗಾಗಿ ಎರಡು ಪರಿಣಾಮಕಾರಿ ಅಸ್ತ್ರಗಳನ್ನು ಬಳಸುತ್ತಲಿದೆ. ಕಾನೂನು ಕ್ರಮ ಈ ಪೈಕಿ ಮೊದಲ

---

ಕಾರಣದಿಂದಾಗಿ ಆದದ್ದು" ಎನ್ನುತ್ತಾರೆ ಪ್ರೊ. ಸೈಯದ್ ಅಲಟಾಸ್.

ಪ್ರೊ. ಅಲಟಾಸ್ ಈಗ ಕೌಲಾಲಂಪುರದ ಕೆಬಾಂಗ್ಸಾನ್ ವಿಶ್ವವಿದ್ಯಾಲಯದಲ್ಲಿ 'ಅಭಿವೃದ್ಧಿ ತತ್ವಶಾಸ್ತ್ರ' ಪ್ರಾಧ್ಯಾಪಕ. ಅವರು ಹೇಳುತ್ತಾರೆ, "ತಮಗೆ ಅಂಟಿದ್ದ ಭ್ರಷ್ಟಾಚಾರದ ಕೊಳೆಯನ್ನು ತೊಳೆದುಕೊಳ್ಳಲು ಯುರೋಪಿನಲ್ಲಿ ನೂರು ವರ್ಷಗಳ ಹಿಂದೆಯೆ ಗಂಭೀರ ಪ್ರಯತ್ನಗಳನ್ನು ನಡೆಸಲಾಯಿತು. ಅದಕ್ಕೆ ಕಾರಣ ಆಗಿನ ವೃತ್ತ ಪತ್ರಿಕೆಗಳು. ಈ ಬಗ್ಗೆ ಜನಮತವನ್ನು ರೂಪಿಸುವ ಕಾರ್ಯಕ್ಕೆ ತೊಡಗಿದ್ದು. ಅಕ್ರಮ ಸಂಭಾವನೆ, ಲಂಚಗಳು ಆಗ ಎಲ್ಲೆಲ್ಲೂ ತಾವೇ ತಾವಾಗಿ ಮೆರೆಯುತ್ತಿದ್ದವು. ಅಮೆರಿಕದಲ್ಲಿ ಪತ್ರಕರ್ತ ಲಿಂಕನ್ ಸ್ಟೀಫನ್ಸ್ ಈ ಶತಮಾನದ ಪ್ರಾರಂಭದ ದಶಕಗಳಲ್ಲಿ ನಗರಗಳ 'ಹೊಲಸು ಮುಖ'ವನ್ನು ಜನತೆಯೆದುರು ಢಾಳಾಗಿ ಹಿಡಿದು ತೋರಿಸಿದ. ತತ್ಫಲವಾಗಿ ನ್ಯೂಯಾರ್ಕಿನ ಮೇಯರ್ ಜಿಮ್ಮಿ ವಾಕರ್ ೧೯೩೨ರಲ್ಲಿ ರಾಜೀನಾಮೆ ನೀಡಿದ. 'ಲಂಚ ಸ್ವೀಕಾರ ಹಾಗೂ 'ಧನ ದುರ್ವ್ಯವಹಾರ'ಗಳ ಆಪಾದನೆ ಸಿದ್ಧವಾಗಿ ಆತ ಪದತ್ಯಾಗ ಮಾಡಲೇಬೇಕಾದ್ದು ಅನಿವಾರ್ಯವಾಗಿತ್ತು.

"ಆದರೆ ಈಗಿನ ಪರಿಸ್ಥಿತಿಯಲ್ಲಿ ಏಶಿಯದ ರಾಷ್ಟ್ರಗಳಲ್ಲಿ ಅಂಥ ತೀರ್ಮಾನವನ್ನು ಯಾವ ರಾಜಕಾರಣಿಯೂ ತೆಗೆದುಕೊಳ್ಳುವುದಿಲ್ಲ. ಲಂಚ ಪಡೆಯುವ-ಕೊಡುವ ವಿಧಾನಗಳೂ ಬದಲಾಗಿವೆ. ಪತ್ರಿಕೆಗಳು ಅಷ್ಟು ಮುಕ್ತವಲ್ಲ. ಲಂಚದೊಂದಿಗೆ ಬೆಳೆದು ತಾವು ಬದುಕುವ ಸ್ವಭಾವವನ್ನು ಮೈಗೂಡಿಸಿಕೊಂಡ ಕೈಗಾರಿಕೋದ್ಯಮಿಗಳ, ವ್ಯವಹಾರಸ್ಥರ ಸಂಖ್ಯೆಯೇ ಜಾಸ್ತಿಯಾಗಿವೆ.

"ಸಿಂಗಾಪುರದಲ್ಲೇಕೆ ಲಂಚ ನಿರ್ಮೂಲನೆ ಸಾಧ್ಯವಾಯಿತು? ಅದಕ್ಕೆ ಕಾರಣ ಆ ನಗರರಾಜ್ಯದ ಗಾತ್ರ ಮತ್ತು ಜನರ ಭೀರುತನ. ಕಾನೂನನ್ನು ಅವರು ಗೌರವಿಸುವುದು ಮತ್ತು ಸರಕಾರ ಕೂಡ ನಿರ್ಮಲ ಆಡಳಿತ ನಡೆಸಲು ಬದ್ಧವಾದದ್ದು." ●

ನೆಯದಾದರೆ, ಎರಡನೆಯದು ನೌಕರರಿಗೆ ಹೆಚ್ಚಿನ ಸಂಬಳ ಸೌಕರ್ಯ ನೀಡುವದು.

ಅರವತ್ತರ ದಶಕದವರೆಗೆ ಸಿಂಗಾಪುರದಲ್ಲಿ ಲಂಚ ತುಂಬಿ ತುಳುಕುತ್ತಿತ್ತು. ನ್ಯಾಯಾಲಯಕ್ಕೆ ಬರುತ್ತಿದ್ದ ಪ್ರಕರಣಗಳಲ್ಲಿ ಮುಕ್ಕಾಲು ಪಾಲಿನಷ್ಟು ಲಂಚ ಸಂಬಂಧಿಯವೇ ಆಗಿರುತ್ತಿದ್ದವು. ಇದರಿಂದ ಅಂತಾರಾಷ್ಟ್ರೀಯವಾಗಿ ಸಿಂಗಾಪುರದ ಹೆಸರು ಇನ್ನೆಲ್ಲಿಲ್ಲದಷ್ಟು ಕೆಟ್ಟುಹೋಗಿತ್ತು.

ಆದರೆ ಈ ಮೂರುವರೆ ದಶಕಗಳ ಅವಧಿಯಲ್ಲಿ ಅಲ್ಲಿಯ ಚಿತ್ರವೇ ಬದಲಾಗಿದೆ. ಉಳಿದ ರಾಷ್ಟ್ರಗಳು ಮತ್ಸರಪಡುವಷ್ಟು ಪ್ರಗತಿ ಅಲ್ಲಿನದು. ಇತ್ತೀಚಿನ 'ಜಾಗತಿಕ ಸ್ಪರ್ಧಾತ್ಮಕ ಮನೋಭಾವದ ವರದಿ'ಯಲ್ಲಿ ಈ ನಗರರಾಜ್ಯಕ್ಕೆ ಎರಡನೆಯ ಸ್ಥಾನದ ಗೌರವ ದೊರೆತಿದೆ. ಸಾರ್ವಜನಿಕ ವಲಯದಲ್ಲಿ ಲಂಚ-ರುಷುವತ್ತುಗಳೇ ಇಲ್ಲದಂಥ ರಾಷ್ಟ್ರಗಳನ್ನು ಗುರುತಿಸುವ ಸಮೀಕ್ಷೆಯ ವರದಿ ಅದು. ನ್ಯೂಝೀಲಂಡ್ ಅದರಲ್ಲಿ ಮೊದಲ ಸ್ಥಾನ ಪಡೆದಿದೆ. ಅದಕ್ಕೂ ಹಿಂದಿನ ವರ್ಷ ಸಿಂಗಾಪುರ 'ತೃತೀಯ'ವೆನಿಸಿತ್ತು.

" 'ನಾವು ಮೊದಲ ಸ್ಥಾನಕ್ಕೇರಬೇಕು' ಎಂಬುದು ಸಿಂಗಾಪುರದ ಗುರಿಯಾಗಿದೆ,"- ಚುಆ ಹೇಳುತ್ತಾರೆ.

ಅಂದರೆ ಸಿಂಗಾಪುರದಲ್ಲಿ ರಾಜಕೀಯ ಮುಖಂಡರೆಂದೂ ಲಂಚ ಪ್ರಕರಣಗಳಲ್ಲಿ ತೊಡಗಿಯೇ ಇಲ್ಲವೇನು? ಎಂದು ನೀವು ಕೇಳಬಹುದು. ಇಲ್ಲವೇ ಇಲ್ಲ ಎಂದು ನಾನು ಹೇಳುವುದಿಲ್ಲ. ಕೇವಲ ಒಂದು ದಶಕದ ಅವಧಿಯಲ್ಲಿ ಇಂಥ ಎರಡು ಪ್ರಮುಖ ಘಟನೆಗಳು ಅಲ್ಲಿ ನಡೆದವು.

ವೀ ತೂನ್ ಬೂನ್ ಎಂಬಾತ ಸಿಂಗಾಪುರದ ಮಾಜಿ ರಾಜ್ಯ ಕಾರ್ಮಿಕ ಮಂತ್ರಿ. ಆತ ಅಪಾರ ಮೊತ್ತದ ಲಂಚ ಪಡೆದ. ಆದರೆ ಕಾನೂನಿನ ಕಣ್ಣಿನಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಅಲ್ಲಿಯ ನ್ಯಾಯಾಲಯ ವೀ ತೂನ್ ಬೂನ್‌ಗೆ ಐದು ವರ್ಷಗಳ ಕಾರಾವಾಸದ ಶಿಕ್ಷೆ ನೀಡಿತು. ತೆಹ್ ಚೀಂಗ್ ವಾನ್ ಎಂಬವ ಹೀಗೆ ಕಾನೂನು ಕ್ರಮಕ್ಕೊಳಪಟ್ಟ ಇನ್ನೊಬ್ಬ ಮಂತ್ರಿ. ರಾಷ್ಟ್ರೀಯ ಪ್ರಗತಿ ಇಲಾಖೆಯನ್ನು ನೋಡಿಕೊಳ್ಳುತ್ತಿದ್ದ ಆತ ಸ್ವಂತದ ಪ್ರಗತಿಗಾಗಿಯೇ ಹಗಲಿರುಳು ಪ್ರಯತ್ನಿಸುತ್ತಿದ್ದ. ೧೯೮೬ರಲ್ಲಿ ಭಾರಿ ಪ್ರಮಾಣದ ಅಕ್ರಮ ಸಂಭಾವನೆ ಪಡೆಯುತ್ತಲಿದ್ದಾಗ ವಿಚಕ್ಷಕ ದಳದವರು ಆತನನ್ನು ಬಂಧಿಸಿ ಕೋರ್ಟಿಗೆ ಎಳೆದರು. ವಿಚಾರಣೆ ನಡೆಯುತ್ತಿದ್ದಾಗಲೇ ಅದರಿಂದಾದ ಅವಮಾನವನ್ನು ಸಹಿಸಲಾಗದೆ ತೆಹ್ ಚಿಂಗ್ ವಾನ್ ಆತ್ಮಹತ್ಯೆ ಮಾಡಿಕೊಂಡ.

ಈ ಘಟನೆಗಳು ನಮಗೆ, ಭಾರತೀಯರಿಗೆ, ಒಂದು ಆದರ್ಶ ಕಥೆಯ ಕಲ್ಪಿತ ನಿರೂಪಣೆಯೆನ್ನಿಸಬಹುದು. ಆದರೆ ಇವು ಕಲ್ಪನೆಗಳಲ್ಲ, 'ಖರೇ ಸಂಗತಿ'ಗಳು ಎನ್ನುವುದು ನಮ್ಮನ್ನು ವಿಚಾರಕ್ಕೆ ಹಚ್ಚುವಂಥ ವಿಷಯ.

ಭಾರತವು ಸಿಂಗಾಪುರದ ಹೆಜ್ಜೆಯಲ್ಲಿ ಹೆಜ್ಜೆಯಿಟ್ಟೀತೇ?

(ಆಧಾರ: ಸಿಂಗಾಪುರದ 'ದಿ ಸ್ಟ್ರೇಟ್ಸ್ ಟೈಮ್ಸ್' ಪತ್ರಿಕೆಯಲ್ಲಿ ಪ್ರಕಟವಾದ ಸೂಸಾನ್ ಸಿಮ್ ಬರೆದ ಲೇಖನ.)

---

## "ಅತಿ ದೊಡ್ಡ ಕುಟುಂಬ"

**ಒಂದೇ** ಕುಟುಂಬದಲ್ಲಿ ೭೮೦ ಜನರಿದ್ದಾರೆಂದರೆ ನಂಬುವಿರಾ? ಕೇರಳ ರಾಜ್ಯದ ಕಲ್ಲಿಕೋಟೆಯ ಹತ್ತಿರ ಕುಟ್ಟಿಚಿರಾದಲ್ಲಿ ಕೋಶಾನಿ ವೀಡು ಎಂಬ ಮಹಮ್ಮದೀಯ ಕುಟುಂಬ ಈ ವಿಷಯದಲ್ಲಿ ದಾಖಲೆ ಸೃಷ್ಟಿಸಿ, ಗಿನ್ನೆಸ್ ಪುಸ್ತಕದಲ್ಲಿ ಸ್ಥಾನ ಸಂಪಾದಿಸಿದೆ. 'ಜೆರಿಯಾ ಆಯಿಷಾಜೀ' ಈ ಕುಟುಂಬದಲ್ಲಿ ಎಲ್ಲರಿಗಿಂತಲೂ ಹಿರಿಯಳು. ಅವಳಿಗೀಗ ೯೦ ವರ್ಷ. ಅವಳ ಮಕ್ಕಳು, ಮೊಮ್ಮಕ್ಕಳೂ, ಮರಿಮಕ್ಕಳು ಕೂಡಿ ಒಟ್ಟಿಗೆ ೭೮೦ ಮಂದಿ ಇದ್ದಾರೆ.

• **ಶಂಕರಗೌಡ ವಾಯ್. ಪಾಟೀಲ**

## ಸತ್ಯ ಕಥೆ



# ಹಸಿರು ಮೃತ್ಯು

ಸಂಗ್ರಹಾನುವಾದ: ಟಿ.ಎಸ್. ಲಲಿತ

ಒಂದು ಪಚ್ಚೆ ಅದೆಷ್ಟೇ ದೊಡ್ಡದಿರಲಿ, ಮೂರು ಶತಮಾನಗಳವರೆಗೂ ಒಂದು ರಾಷ್ಟ್ರದ ಚರಿತ್ರೆಯಲ್ಲೇ ದುರ್ದೈವಿಯಾಗಿ ಕಾಲಿಟ್ಟಿತೆಂದರೆ ನಂಬುವುದು ಕಷ್ಟ. ಆ ಕಲ್ಲು ಮಾಟಗಾತಿಯಿಂದ ಶಾಪಗ್ರಸ್ತವೆನ್ನುವುದೂ ಅವಿಚಾರಿಗಳ ಊಹೆ ಎನಿಸುತ್ತದೆ. ಈ ದಂತ ಕಥೆಯನ್ನು ನಾನಂತೂ ನಂಬುವುದಿಲ್ಲೆಂದು ಪ್ರಾರಂಭದಲ್ಲೇ ತಿಳಿಸಿಬಿಡುತ್ತೇನೆ.

ವಿಚಾರವಾದಿ ರಾಷ್ಟ್ರವಾದ ಅಮೇರಿಕದ ಪ್ರಜೆ ಎನಿಸಿ, ಅಲ್ಲಿನ ಸಬ್‌ವೇಗಳಲ್ಲಿ ಓಡಾಡಿ, ಎತ್ತರದ ಉಕ್ಕಿನ ಕಟ್ಟಡಗಳಲ್ಲಿ ಕೆಲಸ ಮಾಡುವಾಗ ಇಂಥ ವಿಷಯಗಳನ್ನು ಮರೆಯುತ್ತೇವೆ. ಆದರೂ ರಾಣಿ ಅಲೆಗ್ಸಾಂಡ್ರಾಳ ಎದೆಯ ಮೇಲೆ ತೂಗುತ್ತಿದ್ದ ಹೊಳೆವ ಆ ಕಲ್ಲನ್ನು ಮೊದಲ ಬಾರಿ ನೋಡಿದಾಗ, ಅದು ಆಹುತಿ ತೆಗೆದುಕೊಂಡ ಜನರ ಸಂಖ್ಯೆಯನ್ನು ಆಕೆ ತನ್ನ ಬೆರಳ ಮೇಲೆ ಎಣಿಸಿದಾಗ ನಾನೂ ನಂಬುವಂತಾಯ್ತು. ಇಡೀ ಕಥೆಯಲ್ಲಿ ಮಾಟಗಾತಿಯ ವಿಷಯವೊಂದನ್ನು ಬಿಟ್ಟರೆ ಉಳಿದುದೆಲ್ಲ ಯಾರಾದರೂ ಓದುವಂತಹ ಚರಿತ್ರೆ.

(ರಶಿಯದ ದಿವಂಗತ ರಾಜಕುಮಾರಿ ಕ್ಯಾಥರೀನ್ ರಡ್ಜಿವಿಲೆ ಬರೆದ 'ಗ್ರೀನ್ ಜ್ಯುವೆಲ್ ಆಫ್ ಡೆತ್'ನಿಂದ)

ನಿಕಿಟ ರೋಮನೋವ್ ಭಯಾನಕ ಸಾವಿಗೀಡಾದ ನಂತರ ಆ ಶೀತಲ ಹಸಿರು ಪದಕವನ್ನು ಕೈಲಿ ಹಿಡಿದವರೆಲ್ಲ ನಾಶವಾದರು. ನಾನು ಈ ಕಥೆ ಕೇಳಿದ ಮೇಲೆ ಕಡೆಯ ತ್ಸಾರ್ ಹಾಗೂ ರಾಣಿ ಅಲೆಗ್ಸಾಂಡ್ರಾ ಎಕಟೆರಿನ್‌ಬರ್ಗ್‌ನ ಸೆರೆಯಲ್ಲಿ ಕೊಲೆ ಮಾಡಲ್ಪಟ್ಟರೆಂಬುದನ್ನು ನೆನಪಿನಲ್ಲಿಡಬೇಕು. ಅದಕ್ಕೆ ಮೊದಲು ಸ್ವಲ್ಪ ರಾಜಕೀಯ ಚರಿತ್ರೆಯನ್ನು ತಿಳಿಯುವುದೊಳಿತು.

೧೫೮೪ರಲ್ಲಿ ಇವಾನ್ ಸತ್ತಾಗ ಅಶಕ್ತ ಮನಸ್ಸಿನ ಅವನ ಮಗ ಫೆದೋರ್ ಪಟ್ಟಕ್ಕೆ ಬಂದ. ಟಾರ್ಟರರು, ಸ್ವೀಡನ್ ಹಾಗೂ ಪೋಲೆಂಡ್ ಜನಗಳು ಅಪಾರ ಸಂಪತ್ತು ಹೊಂದಿದ ರಾಷ್ಟ್ರದ ಮುನ್ನೂರು ಚರ್ಚುಗಳ ಒಡೆತನಕ್ಕಾಗಿ ಸ್ಪರ್ಧಿಸಿದಾಗ, ರಶಿಯದ ಕಷ್ಟದ ದಿನಗಳು ಪ್ರಾರಂಭವಾದವು. ಫೆದೋರ್, ಐರೀನ್ ಗೊಡನೋಫ್ ಎಂಬ ಸುಂದರಿಯನ್ನು ಮದುವೆಯಾಗಿದ್ದ. ಅವಳಿಗೆ ತನ್ನ ಸೋದರ ಬೋರಿಸ್, ಫೆದೋರ್‌ನ ಹೆಸರಿನಲ್ಲಿ ರಾಜ್ಯವಾಳಬೇಕೆಂದು ಇಚ್ಛೆ ಇದ್ದಿತು. ದುರಾಸೆಯ ಬೋರಿಸ್ ತಾನೇ ಮುಂದಿನ ತ್ಸಾರ್ ಆಗಬೇಕೆಂದು ನಿರ್ಧರಿಸಿದ. ಫೆದೋರ್ ಸತ್ತಾಗ ತುಂಬಿದ ಸಭೆಯಲ್ಲಿ ಐರೀನ್ ರಾಣಿಯೆಂದು ಘೋಷಿಸಿದಾಗ, ಸಿಂಹಾಸನವನ್ನು ನಿರಾಕರಿಸಿದ ಆಕೆ ತಾನೇ ಸೋದರನ ತಲೆಯ ಮೇಲೆ ತನ್ನ ಗಂಡನ ಕಿರೀಟವನ್ನಿಟ್ಟಳು.

ಬೋರಿಸ್‌ನ ಅಪ್ಪಣೆಯಂತೆ ಫೆದೋರ್‌ನ ತಮ್ಮನ ಕೊಲೆ ನಡೆದರೂ, ಸಿಂಹಾಸನಕ್ಕೆ ಹಕ್ಕುದಾರರಾದ ಫೆದೋರ್, ಇವಾನ್ ಹಾಗೂ ನಿಕಟ ರೋಮನೋವ್‌ರನ್ನು ನಾಶಮಾಡಲುದ್ಯುಕ್ತನಾದ. ಮೊದಲನೆಯವ ಬಂಧಿಸಲ್ಪಟ್ಟ. ಅವನ ಹೆಂಡತಿ ಮಾರ್ಥಾಳನ್ನು ಕಾಸ್ಟ್ರೋಮಾದ ಇಪಾಟಿಫ್ ಕಾನ್ವೆಂಟಿನ ಗೃಹ ಬಂಧನದಲ್ಲಿಡಲಾಯ್ತು. ಕಾನ್ವೆಂಟ್ ಸೋದರಿಯ ಸಹಾಯದಿಂದ ಮಾರ್ಥಾ ಗುಟ್ಟಾಗಿ ತನ್ನ ಗಂಡನನ್ನು ಸಂಧಿಸುತ್ತಿದ್ದಳು. ಅವಳಿಗೊಬ್ಬ ಮಗನೂ ಹುಟ್ಟಿದ.

ಎರಡನೆ ತಮ್ಮ ಇವಾನ್ ವಿಷಪ್ರಾಶನದಿಂದುಂಟಾದ ವಿಚಿತ್ರ ಕಾಯಿಲೆಯಿಂದ ಸತ್ತ. ಮೂರನೆಯವನಾದ ನಿಕಿಟನನ್ನು ಕೊಲ್ಲುವುದು ಅಷ್ಟು ಸುಲಭವಾಗಿರಲಿಲ್ಲ. ಅವನಿಗೆ ಹೆಚ್ಚು ಸ್ನೇಹಿತರಿದ್ದರು. ಸುಂದರನಾದ ಆತ ಧೈರ್ಯಶಾಲಿ. ರಾಜಕೀಯದ ಗೊಡವೆಗೆ ಹೋಗದೆ ಉತ್ತಮ ಭೋಜನ ಹಾಗೂ ಸುಂದರ ಹುಡುಗಿಯರ ಸಹವಾಸದಲ್ಲಿ ಕಾಲಕಳೆಯುವವ. ಟಾರ್ಟರ್ ಮುಸ್ಲಿಂ ರಾಜ ಚಾಲುಕ್ ಖಾನ್‌ನ ಒಬ್ಬಳೇ ಮಗಳು ಇಸ್ಸಾಳ್‌ನ್ನು ರಾಣಿಯ ಭೋಜನ ಕೂಟವೊಂದರಲ್ಲಿ ನೋಡಿ ಪ್ರೀತಿಸಿದ. ಚಾಲುಕ್ ತನ್ನ ಮಗಳನ್ನು ಮದುವೆಯಾಗುವಂತೆ ಹೇಳಿದ. ಆದರೆ ಗುಲಾಮ ಸಂತತಿಯವನ ಮಗಳನ್ನು ಮದುವೆಯಾಗಲು ನಿಕಿಟ ಸಿದ್ಧನಿರಲಿಲ್ಲ. ಸಿಟ್ಟಿಗೆದ್ದರೂ ಸುಮ್ಮನಾದ ಚಾಲುಕ್.

ಇದುವರೆಗಿನದು ಇತಿಹಾಸ. ಮುಂದಿನದು ದಂತ ಕಥೆ.

ಚಾಲುಕ್ ಖಾನ್ ನಿಕಿಟನನ್ನು ಭೇಟಿಯಾದ ರಾತ್ರಿಯೆ ಒಬ್ಬ ಮಾಟಗಾತಿಯನ್ನು ಕಂಡ. ಕತ್ತಲು ಕೋಣೆಯೊಂದರಲ್ಲಿ ಚಾಲುಕ್‌ನನ್ನು ಸ್ವಾಗತಿಸಿ ಆಕೆ ಹೇಳಿದಳು, "ನಿನ್ನ ಮಗಳಿಗೆ ಅನ್ಯಾಯ ಮಾಡಿದ ಮನುಷ್ಯನ ಮೇಲೆ ನೀನು ಹಗೆ ತೀರಿಸಿಕೊಳ್ಳಬೇಕಲ್ಲವೆ?" ಹೇಳುತ್ತಾ ಒಳಗೆ ಹೋಗಿ ಬಂದಾಗ ಅವಳ ಕೈಲೊಂದು ಚಿನ್ನದ ಕಟ್ಟಿನ ಪಚ್ಚೆ ಇತ್ತು. ಅದಕ್ಕಾಗಿ ಕೈ ನೀಡಿದ ಟಾರ್ಟರನಿಗೆ "ನಾನು ಹೇಳುವವರೆಗೂ ಮುಟ್ಟಬೇಡ. ಅದರಲ್ಲಿ ಸೈತಾನನಿದ್ದಾನೆ," ಎಂದಳು.

ಯಾವುದೋ ವಿಚಿತ್ರ ಭಾಷೆಯ ಮಂತ್ರ ಉಚ್ಚರಿಸುತ್ತ ಅಲ್ಲಿದ್ದ ಕಡಾಯಿಯಲ್ಲಿ ಆ ಪಚ್ಚೆಯನ್ನದ್ದಿ "ತೆಗೆದುಕೋ. ಇದರ ಸೌಂದರ್ಯ ಹೇಳತೀರದ್ದು. ದಿನಗಳೆದಂತೆ ಇದರ ಬೆಲೆ ಏರುತ್ತ ಹೋಗುತ್ತದೆ. ಇದು ಶಾಪಗ್ರಸ್ತ ಕಲ್ಲು. ಇದು ಯಾರ ವಶದಲ್ಲಿರುತ್ತದೆಯೋ ಅವರಿಗೆ ನೋವು, ನಷ್ಟ, ದುರಾದೃಷ್ಟ ಹಾಗೂ ಸಾವನ್ನು ತರುತ್ತದೆ. ಇದನ್ನು ನಿಕಿಟ ರೋಮನೋವ್‌ಗೆ ಕೊಟ್ಟು, ಅದು ಆತನಿಗೆ ತರುವ ತೊಂದರೆಯನ್ನು ನೋಡು. ಸೈತಾನನು ಓಡಾಡುವ ಜಾಗವಿದು. ನಿನ್ನ ಹಣದ ಚೀಲವನ್ನಿಟ್ಟು ಹೋಗು."

ಇದು ಪಚ್ಚೆಯ ಹುಟ್ಟಿನ ಕಥೆ. ಮುಂದಿನದು ಇತಿಹಾಸ. ಸೇವಕನಾದ ತನ್ನ ಮನೆಯ ಔತಣಕ್ಕೂ

ಟಕ್ಕೆ ಬರುವಂತೆ ಚಾಲುಕ್‌ಖಾನ್ ಬರೆದ ಕಾಗದ ಇಂದಿಗೂ ರಶಿಯದ ಪುರಾತತ್ವ ಸಂಗ್ರಹಾಲಯ ದಲ್ಲಿದೆ. ಈ ಮುದಿಗೂಬೆ ಎಲ್ಲೋ ಅಂದಿನ ಪ್ರಸಂಗವನ್ನು ಮರೆಸಿ ಹೊಂದಾಣಿಕೆಗೆ ಪ್ರಯತ್ನಿ ಸಿದ್ದಾನೆಂದು ತೋರುತ್ತದೆ, ಎಂದುಕೊಂಡು ನಿಕಿಟ ಔತಣದಲ್ಲಿ ಹರ್ಷದಿಂದ ಪಾಲ್ಗೊಂಡ. ಊಟ ಮುಗಿಸಿ ಹೊರಟಾಗ "ನನ್ನ ಪೂರ್ವಜ ಚೆಂಗಿಜ್ ಖಾನ್‌ನ ಈ ಪಚ್ಚೆಯನ್ನು ಉಡುಗೆಗೆ ಹಾಕುವ ಬ್ರೋಚಿನಂತೆ ತಯಾರಿಸಿ ಇಟ್ಟಿದ್ದೇನೆ. ಇದನ್ನು ನೀನು ಸ್ವೀಕರಿಸಿದರೆ ಹಿಂದಿನ ಕಸಿಪಿಸಿ ಯನ್ನು ನೀನು ಮರೆತಿದ್ದೀ ಎಂದು ತಿಳಿಯುತ್ತೇನೆ," ಎನ್ನುತ್ತ ಆ ಪಚ್ಚೆಯನ್ನು ನಿಕಿಟನ ಕೈಗಿತ್ತ.

ಮೂರು ದಿನಗಳ ನಂತರ ರಾತ್ರಿ ತನ್ನೊಬ್ಬ ಪ್ರೇಯಸಿಯ ತೋಳ್ತೆಕ್ಕೆಯಲ್ಲಿದ್ದ ನಿಕಿಟನನ್ನು ಬೋರಿಸ್‌ನ ಸ್ನೇಹಿತರು ಬಂಧಿಸಿ ಸೈಬೀರಿಯಾಕ್ಕೊ ಯ್ದರು. ಅವನ ಹಣ ಲೂಟಿಯಾದರೂ, ಕಾಕತಾ ಳೀಯವೆಂಬಂತೆ ಆ ಪಚ್ಚೆ ಮಾತ್ರ ಅವನೊಂದಿ ಗಿತ್ತು. ಹಿಮರಾಶಿಯಲ್ಲಿ ಹಳ್ಳತೋಡಿ ನಿಕಿಟನನ್ನೆ ಸೆದು, ಗುಂಡಿಯ ಮೇಲೆ ಅರೆಬರೆ ಮುಚ್ಚಿ, ಕಾಲಕಾಲಕ್ಕೆ ಬ್ರೆಡ್ಡಿನ ತುಣುಕೊಂದನ್ನೂ ಸ್ವಲ್ಪ ನೀರನ್ನೂ ಕೆಳಗಿಳಿಸಲಾಗುತ್ತಿತ್ತು. ಕಾವಲುಗಾರರು ಒಂದು ದಿನ ಅವನು ಸತ್ತ ಸುದ್ದಿ ತಂದಾಗ ಗುಂಡಿಯನ್ನು ಮಣ್ಣು ಹಾಕಿ ಮುಚ್ಚಲಾಯಿತು.

ಕಾಲ ಸರಿದು, ಬೋರಿಸ್ ಸತ್ತಾಗ, ಅಣ್ಣ ಫೆಡೋರ್ ನಿಕಿಟನ ಮತ್ತು ಮಾರ್ಥಾರ ಮಗ ಮೈಕೇಲ್ ತ್ಸಾರ್ ಎನಿಸಿದ. ಅವನ ವಂಶದವರು ಮುಂದಿನ ಮುನ್ನೂರ ನಾಲ್ಕು ವರ್ಷ ರಾಜ್ಯವಾ ಳಿದರು. ಪ್ರಪಂಚ ನಿಕಿಟನನ್ನು ಮರೆತಿತು. ಮಹಾನ್ ಪೀಟರ್ ಸೋದರಿ ರಾಣಿ ಸೋಫಿಯಾ, ನಿಕಿಟನ ಭೂಗತ ಅವಶೇಷಗಳನ್ನು ತೆಗೆಸಿ, ಮತ್ತೊಮ್ಮೆ ವಿಧಿಪೂರ್ವಕ ಸಂಸ್ಕಾರ ನಡೆಸಿ, ಅವನ ನೆನಪಿಗೊಂದು ಚಾಪೆಲ್ (ಸಣ್ಣ ಚರ್ಚು) ಕಟ್ಟಿಸಿದಳು.

ನಿಕಿಟನನ್ನು ಅಗೆದು ತೆಗೆದಾಗ, ಸಿಕ್ಕಿದ ವಸ್ತು ಗಳಲ್ಲಿ ಸೌಂದರ್ಯ ಕುಂದದ ಈ ಪಚ್ಚೆಯೂ ಒಂದು. ಅದನ್ನು ಸೇವಕರಿಂದ ಪಡೆದ ಸೋಫಿಯಾ ಕತ್ತಿನಲ್ಲಿ ಹಾರದೊಂದಿಗೆ ಧರಿಸಿ ದಳು. ತನ್ನ ಹೆಸರಲ್ಲಿ ಆಳುತ್ತಿದ್ದ ಸೋಫಿಯಾಳನ್ನು ದೂರ ಸರಿಸಿ ತಾನೇ ಆಳಬೇ ಕೆಂಬ ಆಸೆಯ ಪೀಟರ್, ಅವಳನ್ನು ಕಾನ್ವೆಂಟ್ ಒಂದರಲ್ಲಿ ಬಂಧಿಸಿದ. ಒಂದು ದಿನ ಕೊನೆ ಯುಸಿರೆಳೆದಳು. ಅವಳನ್ನು ಎಳೆದೊಯ್ಯುವಾಗ, ಪೀಟರ್‌ನ ಹೆಂಡತಿ ಯುಡೋಕ್ಸಿಯಾ ಲೋಪೋ ಕಿನಳ ಕೈಗೆ ಆ ಪಚ್ಚೆಯನ್ನಿತ್ತು ನಡೆದಿದ್ದಳವಳು. ಸ್ವಲ್ಪ ದಿನಗಳಲ್ಲೇ ನಿಷ್ಕರುಣೆಯಿಂದ ಅವಳನ್ನೋಡಿಸಿದ ಪೀಟರ್ ರೈತನ ಮಗಳೊಬ್ಬಳನ್ನು ಮದುವೆಯಾದ. ಯುಡೋಕ್ಸಿಯಾ ತನ್ನೊಬ್ಬನೇ ಮಗ ಅಲೆಕ್ಸಿಸ್ ನಿಂದ ಬೀಳ್ಕೊಂಡಾಗ ಆ ಪಚ್ಚೆ ಅವನ ಕೈ ಸೇರಿತು.

ಆ ಮತಿಗೆಟ್ಟ ಹುಡುಗ ತನ್ನ ತಾಯಿಯನ್ನು ತೊರೆದ ತಂದೆ ಎಂಬವನನ್ನೆದುರಿಸಲು ತಾನು ಸಾಕಷ್ಟು ಬಲಶಾಲಿ ಎಂದೆಣಿಸಿದ್ದ. ಆದರೆ ಕತ್ತಲ ಸೆರೆಯಲ್ಲವನನ್ನು ಕೂಡಿಹಾಕಿದ ಪೀಟರ್ ಚಿತ್ರಹಿಂಸೆ ನೀಡಿ ಅವನನ್ನು ಹೊಡೆದು ಕೊಂದ. ಸಾಯುವವರೆಗೂ ಆತ ಹಿಡಿದೇ ಇದ್ದ ಚೀಲವನ್ನು ಸೇವಕರು ತಂದೊಪ್ಪಿಸಿದಾಗ, ಅದರಲ್ಲಿದ್ದ ಪಚ್ಚೆ ಯನ್ನು ಕೈಲಿ ಮುಟ್ಟಲು ನಿರಾಕರಿಸಿ, ಅದನ್ನು ತನ್ನ ಖಜಾನೆಗೆ ಸೇರಿಸಿ ಬೀಗ ಹಾಕಿದ.

ರಾಣಿ ಅನ್ನಾ ಇವಾನೋವ್ನ ರಶಿಯದ ಸಿಂಹಾ ಸನವೇರುವವರೆಗೂ ಪಚ್ಚೆ ಖಜಾನೆಯಲ್ಲೇ ಇತ್ತು. ರಾಜ ಮನೆತನದ ಒಡವೆಗಳನ್ನು ಪರೀಕ್ಷಿಸುವಾಗ ಈ ಪಚ್ಚೆ ಅವಳ ಗಮನ ಸೆಳೆಯಿತು. ಅದನ್ನವಳು ತನ್ನ ಪ್ರಿಯತಮ ಡ್ಯೂಕ್ ಆಫ್ ಕೋರ್ಲೆಂಡ್‌ಗೆ ಕೊಟ್ಟಳು. ಅನ್ನಾಳ ಉತ್ತರಾಧಿಕಾರಿಯಾದ ರಾಣಿ ಎಲಿಜಬೆತ್ ಪೆಟ್ರೋವ್ನಳಿಂದ ಅಪಮಾನಿತನಾದ ಡ್ಯೂಕ್ ಗಡಿಪಾರು ಮಾಡಲ್ಪಟ್ಟ. ಆತ ಆ ಪಚ್ಚೆಯ ಕೆಡುಕನ್ನು ತಿಳಿದು ಅದನ್ನು ಎಲಿಜಬೆತ್‌ಳಿಗೇ ಮರಳಿಸಿದ. ಅದನ್ನವಳು ಚಿನ್ನದ ಉಂಗುರದಲ್ಲಿ ಅಳವಡಿಸಿ ತನ್ನ ಸೋದರನ ಮಗನಾದ ಮೂರನೇ ಪೀಟರ್‌ಗೆ ಕಳಿಸಿದಳು.

ಸುಂದರಿ ಕ್ಯಾತರೀನ್‌ಳೊಂದಿಗೆ ಪೀಟರ್‌ನ ಮದುವೆಯಾಯಿತು. ಪೀಟರ್ ಎಲಿಜಬೆತ್‌ಳ ಪಟ್ಟವನ್ನು ಏರಿದ. ಸ್ವಲ್ಪ ದಿನದಲ್ಲೇ ಅರಮನೆಯ

ರಕ್ಷಕರು ಅವನನ್ನು ಹಿಡಿದರು. ಕ್ಯಾತರೀನ್‌ಳ ಹತ್ತಿರದವನಾದ ಗ್ರೆಗೊರಿ ಆರ್ಲಾಫ್ ರಾಪ್‌ಸ್ಕಾದ ಕೋಟೆಯಲ್ಲಿ ಅವನನ್ನು ನೇಣಿಗೆ ಹಾಕಿದ. ಅವನ ಮೃತಶರೀರದ ಬೆರಳಿಂದ ಕಷ್ಟಪಟ್ಟು ಆ ಪಚ್ಚೆ ಯನ್ನು ತೆಗೆದು ಮತ್ತೆ ಬೊಕ್ಕಸಕ್ಕೆ ಒಪ್ಪಿಸಲಾಯಿತು.

ಕ್ಯಾತರೀನ್ ಮೊದಮೊದಲು ಆ ಪಚ್ಚೆಯ ಬಗ್ಗೆ ಆಸಕ್ತಿ ವಹಿಸಲಿಲ್ಲ. ಅವಳು ಮೂಢ ನಂಬಿಕೆಯ ವಳೂ ಆಗಿರಲಿಲ್ಲ. ಒಮ್ಮೆ ಕುತೂಹಲದಿಂದ ಆ ಪಚ್ಚೆಯನ್ನವಳು ಧರಿಸಿದಾಗ ಅದರ ಸೌಂದರ್ಯ ಅವಳನ್ನದೆಷ್ಟು ಆಕರ್ಷಿಸಿತೆಂದರೆ, ಅದನ್ನು ತನ್ನ ಮಗ ಪಾಲ್‌ನ ಹೆಂಡತಿ ಮೇರಿ ಫೆದರೋವ್ನಾಗಾಗಿ ಒಂದು ಆಭರಣ ತಯಾರಿಸಲು, ದರ್ಬಾರಿನ ಚಿನಿವಾಲನನ್ನು ಕರೆಸಿ ವಿಚಾರಿಸಿದಳು. ಆದರೆ ಅಂದೇ ಸಂಜೆ ವಿಚಿತ್ರ ಅಪಸ್ಮಾರಕ್ಕೆ ತುತ್ತಾಗಿ ಸತ್ತಳು.

ನಂತರ ಯಾರೊಬ್ಬರೂ ಬರಿಗೈಯಿಂದ ಈ ಪಚ್ಚೆಯನ್ನು ಮುಟ್ಟಲಿಲ್ಲ. ಪಾಲ್‌ನ ಸ್ನೇಹಿತರು ಹೇಗಾದರೂ ಈ ಪಚ್ಚೆಯನ್ನು ತೊಲಗಿಸುವಂತೆ ಹೇಳಿದರು. ಇಚ್ಛಿಸದ ಪಾಲ್, ಅದನ್ನು ರಾಜ ದರ್ಬಾರಿನ ವಿಶೇಷ ಸಂದರ್ಭಗಳಲ್ಲಿ ಮಾತ್ರ ಉಪಯೋಗಿಸುವಂಥ ಕತ್ತಿಯ ಹಿಡಿಗೆ ಅಳವಡಿ ಸಿಕೊಂಡ. ಸಂಜೆ ಮೊದಲ ಬಾರಿಗೆ ಆ ಕತ್ತಿಯನ್ನು ಪಾಲ್ ಧರಿಸಿದಾಗ, ಪಿತೂರಿಕಾರರು ಅವನ ಮಗ ಅಲೆಕ್ಸಾಂಡರ್‌ನ ಹೇಳಿಕೆಯಂತೆ ಪಾಲ್‌ನ ಶಯನ ಕಕ್ಷೆಗೆ ನುಗ್ಗಿ, ಸಿಂಹಾಸನ ತ್ಯಾಗ ಮಾಡುವಂತೆ ಬಲಾತ್ಕರಿಸಿದರು. ಪಾಲ್ ತನ್ನನ್ನು ರಕ್ಷಿಸಿಕೊಳ್ಳಲು ಆ ಕತ್ತಿಯನ್ನು ಹಿರಿದನಾದರೂ ಸೆಣಸಾಟದಲ್ಲಿ ಆತ ಗಾಯಗೊಂಡ. ಪಚ್ಚೆ ಕತ್ತಿಯಿಂದ ಕಳಚಿಕೊಂ ಡಿತು. ಪಾಲ್ ಆಗ ಉಂಟಾದ ಗಾಯದಿಂದ ಚೇತರಿಸಿಕೊಳ್ಳಲೇ ಇಲ್ಲ.

ಅಲೆಗ್ಸಾಂಡರ್‌ಗೆ ಆ ಪಚ್ಚೆಯನ್ನು ನೋಡು ವುದು ಬೇಕಿರಲಿಲ್ಲ. ಅದನ್ನು ಚರ್ಚಿಗೆ ದಾನ ಮಾಡಬೇಕೆಂದುಕೊಂಡ. ಆದರೆ ಪಾದ್ರಿ, ಅದು ಸೈತಾನನಿಂದಲೇ ಶಾಪಗ್ರಸ್ತವಾಗಿರುವುದರಿಂದ ಅದನ್ನು ತೆಗೆದುಕೊಳ್ಳಲು ನಿರಾಕರಿಸಿದ. ಮುಂದಿನ ಸಾರ್ವಭೌಮ ಒಂದನೇ ನಿಕೋಲಾಸ್ ಕೂಡ ಪಚ್ಚೆಯ ಬಗ್ಗೆ ಇದೇ ನಿಲುವನ್ನೇ ತಳೆದ. ಹಾಗಾಗಿ ಪಚ್ಚೆ ಖಜಾನೆಯ ಕಬ್ಬಿಣದ ಪೆಟ್ಟಿಗೆಯನ್ನು ಸೇರಿತು.

ಅನೇಕ ವರ್ಷಗಳು ಅಲ್ಲಿಯೇ ಇದ್ದ ಈ ಪಚ್ಚೆಯ ವಿಷಯ ತಿಳಿದು, ಅದನ್ನು ನೋಡಲು ಅನುಮತಿ ನೀಡಬೇಕೆಂದು ಎರಡನೆ ಅಲೆಗ್ಸಾಂಡ ರ್‌ನ ಮಡದಿ, ರಾಜಕುಮಾರಿ ಡೊಲ್ಗೊರೂಕಿ ಕೇಳಿದಳು. ಸ್ವತಃ ಆ ಪಚ್ಚೆಯನ್ನು ಕಂಡಿರದ ಅಲೆಗ್ಸಾಂಡರ್ ಮಡದಿಯ ಆಗ್ರಹದ ಮೇಲೆ ಅದನ್ನು ತರಿಸಿ ನೋಡಿ ಅದೆಷ್ಟು ಪ್ರಭಾವಿತನಾದ ನೆಂದರೆ, ರಾಣಿಗೆ ಪದಕ ಮಾಡಿಸಿ ಕೊಡುವ ಇಚ್ಛೆಯಿಂದ ಅದನ್ನು ತನ್ನ ಕಿಸೆಗೆ ಸೇರಿಸಿಕೊಂಡು ಬಿಟ್ಟ. ಅದನ್ನು ತನ್ನ ಪ್ರಿಯ ಬಂಧು ಕ್ಯಾಥೆರಿನ್ ಮಿಖೆಲೋವ್ನಾಳಿಗೆ ತೋರಿಸಬೇಕೆಂದು ಹೋಗಿ, ಭೋಜನಕೂಟದಿಂದ ಮರಳುತ್ತಿದ್ದ ಅಲೆಗ್ಸಾಂ ಡರ್ ಬಾಂಬ್ ದಾಳಿಗೆ ತುತ್ತಾದ. ಆ ದಾಳಿಯ ಸ್ಥಳದಿಂದ ಮರುದಿನ ಪೊಲೀಸನೊಬ್ಬ ಪಚ್ಚೆಯನ್ನು ಅರಮನೆಗೆ ತಂದ. ಮೂರನೇ ಅಲೆಗ್ಸಾಂಡರ್ ಹಾಗೂ ಅವನ ಹೆಂಡತಿ ಮೇರಿ ಅದನ್ನು ನೋಡಲೂ ಇಷ್ಟಪಡಲಿಲ್ಲ. ತಮ್ಮ ಜವಾಹಿರಿಗ ಳೊಂದಿಗೆ ಅದನ್ನು ಇರಿಸಲೂ ಬಯಸಲಿಲ್ಲ. ರೋಮ್‌ನೋವ್ ಸಂತತಿಯ ನಾಶಕ್ಕೆ ಆ ಪಚ್ಚೆಯೇ ಕಾರಣವೆಂದರು. ಆದರೆ ಅವರ ಸೊಸೆ ಅಲೆಗ್ಸಾಂಡ್ರಾ ಕೇವಲ ಒಂದು ಪಚ್ಚೆ ಇಷ್ಟೆಲ್ಲಾ ಅನಾಹುತಕ್ಕೆ ಕಾರಣವೆಂದು ನಂಬಲಿಲ್ಲ. ಅದನ್ನು ತನ್ನ ಪದಕದಲ್ಲಿ ಅಳವಡಿಸಿ ಹಾಕಿಕೊಂಡಳು.

ಅಲೆಗ್ಸಾಂಡ್ರಾಳ ಕುತ್ತಿಗೆಯಲ್ಲಿ ಈ ನತದೃಷ್ಟ ಪಚ್ಚೆಯನ್ನು ನಾನು ಕಂಡಿದ್ದೆ. ತನ್ನ ಗಂಡ ಮಕ್ಕ ಳೊಂದಿಗೆ ಸೈಬೀರಿಯಾಕ್ಕೆ ಗಡಿಪಾರಾದಾಗ ಅದನ್ನ ವಳು ತನ್ನೊಂದಿಗೆ ಒಯ್ದಳು. ಏಕಟೆರಿನ್‌ಬರ್ಗ್‌ ನಲ್ಲಿ ತಾನೇ ರೋಮನೋವ್ ವಂಶದ ಕೊನೆಯ ಆಹುತಿ ಆದಾಗಲೂ, ಅಲೆಗ್ಸಾಂಡ್ರಾ ಆ ಪಚ್ಚೆ ಯನ್ನು ಬಿಟ್ಟುಕೊಟ್ಟಿರಲಿಲ್ಲ.

ಆ ಪಚ್ಚೆ ಈಗೆಲ್ಲಿದೆಯೋ ತಿಳಿದಿಲ್ಲ. ರಶಿಯದ ರಾಜರಿಂದ ಮಾರಾಟವಾದ ಒಡವೆಗಳ ಪಟ್ಟಿ ಯಲ್ಲೂ ಅದು ಸೇರಿರಲಿಲ್ಲ. ಮೂಢನಂಬಿಕೆಯ ಪರಮಾವಧಿ ಎಂಬಂತೆ ಜನ "ಸೈತಾನನೇ ಅದನ್ನು ವಾಪಸ್ಸು ತೆಗೆದುಕೊಂಡಿದ್ದಾನೆ," ಎಂದು ಮಾತಾಡಿಕೊಂಡರು. ●

# ನಿವೇದನೆ:
# ಸಾಹಿತ್ಯಕಾರನ ಇತಿವೃತ್ತ

ಸಾಹಿತ್ಯ ಮತ್ತು ಶಿಕ್ಷಣಕ್ಕೆ ಸಂಬಂಧಪಟ್ಟಂತೆ ಬರೆದಿರುವ 'ನಿವೇದನೆ-ಸಾಹಿತ್ಯಕಾರನ ಇತಿವೃತ್ತ'ದಲ್ಲಿ ಕನ್ನಡದ ಸುಪ್ರಸಿದ್ಧ ಅಂಕಣಕಾರರಾದ ಪ್ರೊ. ಕು.ಶಿ. ಹರಿದಾಸ ಭಟ್ಟರ ಬದುಕಿನ ವೃತ್ತಾಂತವಿದೆ. ಸಾಹಿತ್ಯದ ಅಧ್ಯಯನ ಮತ್ತು ಸಾಹಿತಿಗಳ ಸಂಗದಲ್ಲಿ ಬದುಕನ್ನು ತೇದು ಸುತ್ತಣ ಪರಿಸರದಲ್ಲಿ ಪರಿಮಳ ಹಬ್ಬಿಸಿದ ಒಂದು ಸರಳ ವ್ಯಕ್ತಿತ್ವ ಪ್ರಾಸಂಗಿಕ ಸಂಕೀರ್ಣತೆಗಳ ನಡುವೆಯೂ ಧನ್ಯತೆಯ ಗುರಿ ತಲುಪಲು ಮಾಡಿದ ಹೆಣಗಾಟ ಕಳೆದುಹೋದ ತಲೆಮಾರಿನ ಸಾಹಿತ್ಯೇತಿಹಾಸವನ್ನು, ಶೈಕ್ಷಣಿಕ ನಿಲುಮೆಗಳನ್ನೂ ಪ್ರತಿಬಿಂಬಿಸಿ ಬೇಂದ್ರೆಯವರ 'ಪಟ್ಟ ಪಾಡೆಲ್ಲವು ಹುಟ್ಟು ಹಾಡಾಗುವ' ಕಾವ್ಯ ತತ್ವವನ್ನು ಪ್ರತಿಪಾದಿಸುತ್ತದೆ.

ಸಾಹಿತ್ಯ ಪ್ರಸಾರಣೆ ಮತ್ತು ಜಾನಪದ ಸಂಶೋಧನೆಯಲ್ಲಿ ಸದ್ಯ ನಿರತರಾಗಿರುವ ಪ್ರೊ. ಕು. ಶಿ. ಹರಿದಾಸ ಭಟ್ಟರು ಉಡುಪಿಯ ಎಂ.ಜಿ.ಎಂ. ಕಾಲೇಜಿನ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಪ್ರಾದೇಶಿಕ ಜಾನಪದ ಕಲೆಗಳ ಸಂಶೋಧನಾ ಕೇಂದ್ರ ಮತ್ತು ತುಳು ನಿಘಂಟು ಯೋಜನೆಯ ನಿರ್ದೇಶಕರು.

(ಪುಸ್ತಕದ ಬೆನ್ನುಡಿಯಿಂದ)

## ಅಧ್ಯಾಯ ೧
## ಒಂದಾನೊಂದು ಕಾಲದಲ್ಲಿ....

ಇದೊಂದು ನಿವೇದನೆ, ಆತ್ಮಚರಿತ್ರೆಯಲ್ಲ. ಹೇಳಿಕೊಳ್ಳುವಂಥ ಚರಿತ್ರೆ ನನಗೇನೂ ಇರುವುದಿಲ್ಲ. ಅನುಭವ- ನಾನು ಓಡಿಯಾಡುವ ಕ್ಷೇತ್ರಗಳಲ್ಲಿ ಎಲ್ಲರಿಗೂ ಇರುವಷ್ಟೇ. ಸ್ಮರಣೆಯಲ್ಲಿಳಿದ ಅನುಭವ ಸಂಗ್ರಹವೇ ನನ್ನ ಕಥನದ ಮೂಲ ಬಂಡವಾಳ. ಬಹುಶಃ ಎಲ್ಲರಿಗೂ ಕರಗತವಾಗದ 'ಬರವಣಿಗೆ' ನನಗೆ ಒಲಿದಿರುವುದರಿಂದ ನನ್ನ ಅನುಭವಗಳು, ಲೆಕ್ಕಣಿಕೆಯ ಬಾಯಿಂದ ಹರಿದು ಬರುವುದು ಸುಲಭವಾಗಿದೆ. ನನ್ನ ಬಗ್ಗೆ ಹೇಳಿಕೊಳ್ಳುವುದು ನನಗೆ ಇಷ್ಟವಾದ ಕೆಲಸ ಅಲ್ಲ, ಮಿತ್ರರ ಒತ್ತಾಯ ರಿಜಿಸ್ಟ್ರಿಗೆ ಕಟ್ಟುಬಿದ್ದು ನಾನು ತೆರೆದುಕೊಳ್ಳುತ್ತಿದ್ದೇನೆ- ಯಾರಿಗೆ ಉಪಕಾರವೋ ನಾನರಿಯೆ. ಇಂಥ 'ನಿವೇದನೆ'ಗಳನ್ನು ನನಗಿಂತ ಮೊದಲು ಒಪ್ಪಿಸಿದವರಿರುವುದರಿಂದ ಈ ಸಂಪ್ರದಾಯ ಹೊಸದೇನೂ ಆಗಿಲ್ಲ. ಹುಟ್ಟಿದವನು ಬದುಕುತ್ತಾನೆ, ಉಸಿರಾಡುತ್ತಾನೆ. ಅದಕ್ಕೆ ನಿಲುಗಡೆಯಾಗುವ ವರೆಗೂ ಹೊರಗಿಂದ, ಒಳಗಿಂದ ಅನುಭವಗಳಿಗೆ ಈಡಾಗುತ್ತಾನೆ. ಕೆಲವನ್ನು ತಾನೇ ಸಹಿಸಿಕೊಳ್ಳುತ್ತಾನೆ. ಕೆಲವನ್ನು ತನ್ನ ಸಂಸಾರ, ಹಿತೈಷಿಗಳು, ಸುತ್ತಲಿನ ಪರಿಸರ ಮತ್ತೆ ಸಮಾಜದೊಡನೆ ಹಂಚಿಕೊಳ್ಳುತ್ತಾನೆ. ದೈನಂದಿನ ಜೀವನದಲ್ಲಿ, ಜೀವನೋಪಾಯದ ಹತ್ತು ಹಲವು ಹಾದಿಗಳಲ್ಲಿ ಸಂದರ್ಭಗಳಲ್ಲಿ ಏನೇನನ್ನೋ ಅಪೇಕ್ಷಿಸುತ್ತಾನೆ. ಸಿಕ್ಕಾಗ ಸಂತುಷ್ಟನಾಗಿ ಸಿಗದಿರುವಾಗ ನಿರಾಶನಾಗಿ ಬದುಕು ಮುಂದುವರಿಸುತ್ತಾನೆ.....

## ಅಧ್ಯಾಯ ೨
## ಹುಟ್ಟಿದೆ

೧೯೨೪ನೆಯ ಇಸವಿಯ ಒಂದು ಏಕಾದಶೀ ದಿವಸ ನಾನು ಹುಟ್ಟಿದ್ದಂತೆ. ಅದೇನೋ ಅಂಥ ದೊಡ್ಡ ಉತ್ಸವ ಆಗಿರಲಾರದು. ಕಾರಣ ನನಗಿಂತ ಎರಡು ವರ್ಷ ಮೊದಲು ನನ್ನ ಅಕ್ಕ, ಅದಕ್ಕೂ

ನಾಲ್ಕಾರು ವರ್ಷ ಮೊದಲು ನನ್ನ ಅಣ್ಣ ಹುಟ್ಟಿದ್ದ. ನಾನು ಹುಟ್ಟುವುದಕ್ಕೆ ಹತ್ತು ವರ್ಷ ಮೊದಲೇ ನನ್ನ ತಂದೆ ಗದುಗಿನಲ್ಲಿ ತನ್ನ ತಮ್ಮನೊಂದಿಗೆ ಕೂಡಿ ಒಂದು ಚಹದಂಗಡಿ ಪ್ರಾರಂಭ ಮಾಡಿದ್ದರು. ಹೋಟೇಲ್ ಉದ್ಯಮದ ಮೂಲ ಪುರುಷರಲ್ಲಿ ನಮ್ಮ ತಂದೆ ಕೂಡ ಒಬ್ಬರು. ಗದುಗಿನ ಸ್ಟೇಶನ್ ರೋಡಿನ ಬಳಿ ಅವರು ಪ್ರಥಮ ಮಹಾಯುದ್ಧ ಕಾಲದಲ್ಲಿ ಸ್ಥಾಪಿಸಿದ ಅಂಗಡಿ ಸ್ಥಳಾಂತರ ಮಾಡಿ 'ಮಹಡಿ ಅಂಗಡಿ' ಎನಿಸಿ ಪ್ರಸಿದ್ಧವಾಯಿತು. ಮತ್ತೊಮ್ಮೆ ಸ್ಥಳಾಂತರಿಸಿಕೊಂಡು 'ಗದಗ ರೆಸ್ಟೋರೆಂಟ್' ಆಗಿ ಇನ್ನೂ ಗದುಗಿನ ನಾಗರಿಕರ ಸೇವೆಯಲ್ಲಿ ನಿರತವಾಗಿದೆ. ಎರಡು ಚಹದ ಪೆಟ್ಟಿಗೆಗಳ ಮೇಲೆ ಇರಿಸಿದ ಹಲಗೆಯೇ ಸೀಟು, ಚಹಮಾಡುವವರೂ ಕೊಡುವವರೂ ಒಬ್ಬರೇ ಇರುತ್ತಿದ್ದ ಆ ಕಾಲದಲ್ಲಿ 'ಉದ್ಯಮ' ಬರೇ ಜೀವನೋಪಾಯವಾಗಿತ್ತು. ಆದರೆ ಯುದ್ಧ ಮುಗಿದಮೇಲೆ ಮಂದಿಯ ಯುಗದಲ್ಲಿಯೂ ಸಾಹಸಿಗಳಾದ ನಮ್ಮ ಹಿರಿಯರಿಬ್ಬರು ಧೈರ್ಯದಿಂದ ಮುನ್ನಡೆದು ಮಹಡಿಯುಳ್ಳ ಒಂದು ಕಟ್ಟಡದಲ್ಲಿ ವ್ಯಾಪಾರಕ್ಕೆ ತೊಡಗಿದರು. ಅಲ್ಲಿಂದ ಮುಂದಿನ ಕೆಲವೇ ವರ್ಷಗಳಲ್ಲಿ- ಹುಬ್ಬಳ್ಳಿಯ ದುರ್ಗದ ಬೈಲಿನಲ್ಲಿ ಇನ್ನೊಂದು ಅಂಗಡಿಯನ್ನು ತೆರೆದುದರಿಂದ ನಮ್ಮ ಕುಟುಂಬದ ದಟ್ಟ ದಾರಿದ್ರ್ಯ ಕೊಂಚ ಮರೆಯಾಯಿತು. ಹುಲ್ಲು ಹೊದಿಸಿದ ಮನೆಗೆ ಹಂಚಿನ ಛಾವಣಿ ಏರಿತು. ಉಡುಪಿಯ ಕುಂಜಿಬೆಟ್ಟದಲ್ಲಿ ಶಿವ ಗೋಪಾಲಭಟ್ಟರೂ, ಶಿವ ಅನಂತ ಭಟ್ಟರೂ 'ತಕ್ಕ ಮಟ್ಟಿನ ಗಟ್ಟಿಕುಳ'ಗಳೆಂದು ಪರಿಗಣಿತರಾದರು. ನನ್ನ ತಂದೆ ಶಿವ ಗೋಪಾಲಭಟ್ಟರು ಊರು ಬಿಟ್ಟು ಭವಿಷ್ಯ ನಿರ್ಮಾಣಕ್ಕಾಗಿ ಗದುಗಿಗೆ ಹೋಗುವ ಮೊದಲು ಉಡುಪಿಯ ಶ್ರೀ ಕೃಷ್ಣ ಮಠದಲ್ಲಿ ಎರಡು ರೂಪಾಯಿ ಸಂಬಳದಲ್ಲಿ ಪಾಕ ಶಾಲೆಯ ಕೆಲಸದಲ್ಲಿದ್ದರು. ಅವರು ಬೇರೆ ಯಾವ ಶಾಲೆಯ ಮುಖ ಕಂಡವರೂ ಅಲ್ಲವಾದರೂ ದುಡಿಮೆಯಲ್ಲಿ ನಿಷ್ಠಾವಂತರು, ಪ್ರಾಮಾಣಿಕರು, ಬಡಜನರ ಮೇಲೆ ತುಂಬಾ ಕರುಣೆಯುಳ್ಳವರು ಎಂದು ಹೋದಲ್ಲೆಲ್ಲ ಹೆಸರು ಮಾಡಿದರು. ಉಡುಪಿಯ ಕೃಷ್ಣಮಠದಲ್ಲಿ ಕೆಲಸಕ್ಕೆ ಸೇರಿದಾಗಲೆ ಅವರು ಸುಬ್ರಹ್ಮಣ್ಯಸ್ವಾಮಿಗಳೊಡನೆ ಅಖಿಲ ಭಾರತ ಪ್ರವಾಸ 'ನಡಿಗೆ ಮತ್ತು ರೈಲು' ಮೂಲಕ ಮಾಡಿದ್ದರಿಂದ ಅವಿದ್ಯಾವಂತರಾದರೂ ಅವರ ಲೋಕಜ್ಞಾನ ಪರ್ಯಾಪ್ತವಾಗಿತ್ತು. ಉಡುಪಿಯ ಸ್ವಾಮಿಗಳಂತೆ 'ತುಳು'ವಿನಲ್ಲಿ ತಮ್ಮ ದಸ್ಕತ್ತು ಹಾಕುವಷ್ಟು ಅವರು ಅಕ್ಷರಸ್ಥರಾಗಿದ್ದರು. ತಮ್ಮನಾದ ಅನಂತ ಭಟ್ಟರು (ನನ್ನ ಚಿಕ್ಕಪ್ಪ) ಅವರಿಗಿಂತ ಹೆಚ್ಚು ಅಕ್ಷರ ಬಲ್ಲವರು. ಎರಡು ಮೂರು ಕ್ಲಾಸು ಮಾಡಿರಬೇಕು. ಕನ್ನಡದಲ್ಲಿ ಪತ್ರ ಬರೆಯುವಷ್ಟು ಮುಂದೆ ಸಾಗಿದ್ದರು. 'ಸಂಯುಕ್ತ ಕರ್ನಾಟಕ'ದ ಶಿರೋನಾಮೆ ಓದಿ ತೃಪ್ತರಾಗುವಷ್ಟು ಕುತೂಹಲಿಗಳಾಗಿದ್ದರು. ಸಾಲದ್ದಕ್ಕೆ ತುಂಬಾ ರಸಿಕರು ಕೂಡ- ಪಿಟೀಲು ವಾದನದ ಕೆಲವು ಪಾಠ ಮಾಡಿಸಿಕೊಂಡು ಬೇಸರ ಕಳೆಯಲು ರಾತ್ರಿ ಹೊತ್ತು ಅವರು ಪಿಟೀಲು ಹಿಡಿಯುತ್ತಿದ್ದರು. ಪಾಠದ ಮೊದಲ ಎರಡು ಹಾಡಿನ ಹೊರತು ಮೂರನೆಯದು ಅಲ್ಲಿ ಹೊರಡದಿದ್ದರೂ ತನ್ಮಯರಾಗಿ ಬಾರಿಸುತ್ತಿದ್ದರು. ನಮ್ಮ ತಂದೆಗೂ ನಾಟಕದ ಹುಚ್ಚು. ೨೦ನೇ ದಶಕದಲ್ಲಿ ಗದಗು ಸದಾಶಿವರಾಯರು, ವಾಮನರಾವು ಮಾಸ್ತರರು ಮುಂತಾದವರ ನಾಟಕಗಳ ಪ್ರದರ್ಶನಕ್ಕೆ ಹೆಸರಾಂತ ತಾಣವಾಗಿತ್ತಷ್ಟೆ. ನಮ್ಮ ತಂದೆ ತನ್ನ ವೃದ್ಧಾಪ್ಯದಲ್ಲೂ ತನ್ನ ನಾಟಕಪ್ರಿಯತೆ ಕಳೆದುಕೊಳ್ಳಲಿಲ್ಲ.

ನಮ್ಮ ಕುಟುಂಬದ ಮೂಲಪುರುಷ ಶಿವಯ್ಯ ಮೂಲತಃ ಉಡುಪಿಯವರಲ್ಲ; ಅವರು ಕೋಟದವರು. ನೀಲಾವರದಲ್ಲಿ ನಮ್ಮ ಕುಲದೇವರು. ಶಿವಯ್ಯನಂಥ ಕೋಟಸ್ಥರನ್ನು ಉಡುಪಿ ಆಕರ್ಷಿಸಲು ಪ್ರಬಲ ಕಾರಣ ಉಡುಪಿಯ ಕೃಷ್ಣಮಠದಲ್ಲಿ ಸಿಗುತ್ತಿದ್ದ ಧರ್ಮಾರ್ಥ ಊಟ. ಅದಕ್ಕೆ ಹಕ್ಕು ಪಡೆಯಲು ಸುಲಭದ ಉಪಾಯವನ್ನು ನಮ್ಮ

ಮುತ್ತಾತ ಹುಡುಕಿ ತೆಗೆದರು. ಶಿವಭಕ್ತಿಗೆ ತಿಲಾಂಜಲಿಕೊಟ್ಟು 'ವಿಷ್ಣುಭಕ್ತ'ರಾದರು. ಮುದ್ರಾಧಾರಣ ಮಾಡಿಸಿಕೊಂಡು ಉಡುಪಿಯ ಮಾಧ್ವಬ್ರಾಹ್ಮಣರಾಗಿ, 'ಊಟಕ್ಕೆ ಅರ್ಹತೆ' ಸಂಪಾದಿಸಿದ್ದರಿಂದ ನಾವೆಲ್ಲ ಬದುಕುವಂತಾಯಿತು....

## ಅಧ್ಯಾಯ ೨
## ಕಡಿಯಾಳಿ ಶಾಲೆ

ನಾನು ಹುಟ್ಟಿದ ಬಳಿಕ ಏಳೆಂಟು ವರ್ಷಗಳಲ್ಲಿ ನಮ್ಮ ಸಂಸಾರದ ಆರ್ಥಿಕ ಬಲ ಸಂವರ್ಧನೆ ಆಗತೊಡಗಿತು. ನನ್ನ ತಂದೆಯವರೂ ಚಿಕ್ಕ ತಂದೆಯವರೂ ಒಂದಿಷ್ಟು ಆಸ್ತಿಪಾಸ್ತಿ ಕೂಡ ಮಾಡಿದರು. ಮನೆಗೆ ಉಪ್ಪರಿಗೆ, ಹಂಚು ಬಿತ್ತು. ಹುಬ್ಬಳ್ಳಿಯಿಂದ ಬರುವಾಗ ನನ್ನ ತಂದೆ ಒಮ್ಮೆ ನನಗೊಂದು ಮೂರು ಚಕ್ರದ ಬೈಸಿಕಲ್ ತಂದರು. ಆಟದಲ್ಲಿ ಮುಂದು, ಊಟದಲ್ಲಿ ಹಿಂದು ನಾನು. ದಿನವಿಡೀ ಆಟ ಆಡಿದರೂ ತೃಪ್ತಿ ಇಲ್ಲ. ಆಚೆ ಮನೆ, ಈಚೆ ಮನೆ-ಎರಡರಲ್ಲೂ ಸ್ವಾತಂತ್ರ್ಯ. ಶಾಲೆಗೆ ಹೋಗುವ ವಯಸ್ಸಾಯಿತು. ಕಡಿಯಾಳಿ ಶಾಲೆಗೆ ಸೇರಿಸಿದರು. ಆದರೆ ನಾನು ಸುಲಭದಲ್ಲಿ ಬಲೆಗೆ ಬೀಳಲಿಲ್ಲ. ಗಂಜಿ ಊಟ ಮಾಡಿ ಹೊರಡು ಎಂದು ಹೇಳಿದರೆ ನಾನು ಹಿತ್ತಲಿಗೆ ಹೋಗಿ ಬಿಡುತ್ತಿದ್ದೆ. ಮನೆ ಮುಂದಿನ ದೊಡ್ಡ ಹುಣಸೇಮರದ ಮರೆಯಲ್ಲಿ ಅಡಗಿ ಪಾರಾಗಲು ಯತ್ನಿಸುತ್ತಿದ್ದೆ. ನನ್ನ ಅಣ್ಣನಿಗೆ ಹುಣಸೇ ಅಡರಿಸಿಂದ ಸ್ವಲ್ಪ ಸೇವೆ ಮಾಡಿ ನನ್ನನ್ನು ದರಪರನೆ ಎಳೆದುಕೊಂಡು ಕ್ಲಾಸಿಗೆ ಕೂಡಿಸುವ ಕೆಲಸ. ಎಷ್ಟೋ ದಿನಗಳ ಮೇಲೆ ಶಾಲೆ ನನಗೆ ಒಗ್ಗಿತು. ಆದರೆ ಓದಿನಲ್ಲಿ ಮನಸ್ಸು ಕೂರದು. ಒಂದನೇ ಕ್ಲಾಸಿನಲ್ಲಿ ತೇರ್ಗಡೆ ಪ್ರಕಟನೆಯ ದಿನ, ನನ್ನ ಹೆಸರನ್ನು ಕರೆಯಲೇ ಇಲ್ಲ. ಶಾಲೆಯ ಮೆನೇಜರ್ ನಾರ್ಣಪ್ಪಯ್ಯನವರು ಶಾಲಾರಂಭದ ದಿವಸ ತೇರ್ಗಡೆಯಾದ ಹುಡುಗರ ಹೆಸರು ಹೇಳಿದ ಕೂಡಲೇ ಸ್ಲೇಟು ಚೀಲ ಹಿಡಿದುಕೊಂಡು ಮುಂದಿನ ಕ್ಲಾಸಿಗೆ ಓಡುವದು ವಾಡಿಕೆ. ಉಳಿದ ಹುಡುಗರೆಲ್ಲ ಓಡಿದರೂ ನನಗೆ ಕರೆ ಬರಲಿಲ್ಲ ಎಂದು ಗೋಳೋ ಎಂದು ಅಷ್ಟ ದಿಕ್ಪಾಲಕರಿಗೂ ಕೇಳುವಂತೆ ದನಿ ಎತ್ತಿ ಅಳತೊಡಗಿದೆ. ನಾರ್ಣಪ್ಪಯ್ಯ ತಿರುಗಿ ಬಂದು ನನ್ನನ್ನು ಮುಂದಿನ ಕ್ಲಾಸಿಗೆ ನೂಕಿದರು. ಫೇಲೆಂಬುದರ ಪೂರ್ತಿ ಅರ್ಥ ತಿಳಿಯದಿದ್ದರೂ ನನ್ನ ಸಂಗಡಿಗರನ್ನೂ ಬಿಟ್ಟಿರಲಾರೆನೆಂದು ನಾನು ಅತ್ತೆ. ನನ್ನ ಅಳುವಿನಿಂದಲೇ ನನಗೆ ತೇರ್ಗಡೆ ದೊರೆಯಿತು. ಇಂಥ ಅವಕಾಶ ಆಮೇಲೆ ನನಗೆಂದೂ ದೊರೆಯಲಿಲ್ಲ. 'ಫೇಲ್'ನ ಪ್ರಥಮ ಮತ್ತು ಕೊನೆಯ ಅನುಭವ ಇದು!

ಚಿಕ್ಕಂದಿನಲ್ಲಿ ನಾನು ಭಾರೀ ಹಠಮಾರಿಯಾಗಿದ್ದೆನೆಂದು ನನ್ನ ಹೆತ್ತವರ ಅನುಭವ, ಕಂಡದ್ದು ಕೊಂಡುಕೊಳ್ಳಲೇ ಬೇಕು. ಹೀಗೆ ಮಾಡದೇ ಹೋದಲ್ಲಿ ರಸ್ತೆಯಲ್ಲೇ ಸತ್ಯಾಗ್ರಹ, ರೋದನ. ಸಾಮಾಜಿಕ ಆರೋಗ್ಯದ ದೃಷ್ಟಿಯಿಂದಲಾದರೂ ನನಗೆ ಬೇಕಾದ್ದನ್ನು ನನ್ನ ಜೊತೆ ಬಂದವರು ತೆಗೆಸಿಕೊಡಲೇ ಬೇಕು. ಒಮ್ಮೆ ನನ್ನ ತಂದೆಯವರು ನನ್ನನ್ನು ಗದಗಿಗೆ ಕರೆದೊಯ್ದರು. ಮಹಡಿ ಅಂಗಡಿಯ ಉಪ್ಪರಿಗೆಯಲ್ಲಿ ನಮ್ಮ ಮನೆ. ಹಿಂದಿನ ಹೈಸ್ಕೂಲ ಬಯಲಲ್ಲಿ ನಾನೊಂದು ಜಿಂಕೆಯ ಮರಿಯಂತೆ ಕಾಣುವ ಕತ್ತೆ ಮರಿಯನ್ನು ಕಂಡೆ. ಕೂಡಲೇ ಸೀತೆ ರಾಮನಿಗೆ ಹೇಳಿದಂತೆ ನನ್ನಮ್ಮನಿಗೆ ಆ ಮರಿ ಬೇಕು ಎಂದು ಕೂಗಾಡಿದೆ. ಅಮ್ಮ ನಮ್ಮ ಆಳು ಚಂದಯ್ಯನ ಹತ್ತಿರ ಅದನ್ನು ಹಿಡಿದುಕೊಂಡು ಬಾ ಎಂದಳು. ಚಂದಯ್ಯ ನಮ್ಮ ಊರಿನವ. ಗದುಗಿಗೂ ಕತ್ತೆಗಳಿಗೂ ಹೊಸಬ. ಅವನು ಅದು ದನದ ಎಳೆಗರುವೆಂದು ಭಾವಿಸಿ ಆ ಮರಿಯನ್ನು ತೆಕ್ಕೆಯಲ್ಲಿ ಹಿಡಿಯಲು ಹೋದರೆ, ಅದು ಅವನ ಮುಸುಡಿಗೆ ಹಿಂಗಾಲಿನ ರುಚಿ ತೋರಿಸಿಯೇ ಬಿಟ್ಟಿತು. ಕತ್ತೆ ಮರಿಯನ್ನಲ್ಲ ಎರಡು ಹಲ್ಲುಗಳನ್ನು ಹಿಡಿದುಕೊಂಡು ಬಂದ ಚಂದಯ್ಯ.

ಕಡಿಯಾಳಿಯ ಪ್ರಾಥಮಿಕ ಹಂತದ ಕೆಲ ತರಗತಿಗಳಿಗೆ ಒಂದು ಕಠೋರ ಶಾಸನವಿತ್ತು. ಸಂಜೆಯ ಕೊನೇ ಕ್ಲಾಸಿಗೆ ಮೆನೇಜರರು ಬೆತ್ತ ಹಿಡಿದುಕೊಂಡು 'ಮಗ್ಗಿ ಪರೀಕ್ಷೆ'ಗೆ ಬರುತ್ತಿದ್ದರು. ಅವರು ಎಲ್ಲರ ಪರೀಕ್ಷೆಗಾಗಿ ಬಂದರೂ, ನನಗೇಕೋ ಅವರು 'ನನ್ನ ಪರೀಕ್ಷೆಗಾಗಿ'ಯೇ ಬರುತ್ತಿರುವಂತೆ ಭಯ. ಅದನ್ನು ಬಿಟ್ಟರೆ ಉಳಿದ ನಾಲ್ಕು ವರ್ಷಗಳನ್ನು ನಾನು ಕಡಿಯಾಳಿಯಲ್ಲಿ ಸಂತೋಷದಿಂದ ಕಳೆದೆ. ಐದನೇ ಕ್ಲಾಸಿನಲ್ಲಿ ಆವಾಗಲೇ ನನಗೆ ಇನ್ನೊಬ್ಬರು ಉಪಾಧ್ಯಾಯರು ಪೂರ್ವ ಪುಣ್ಯದಿಂದ ಒದಗಿಬಂದರು. ನನ್ನ ಸಾಹಿತ್ಯ ಜೀವನಕ್ಕೆ ಪ್ರಥಮ ಪ್ರೇರಣೆಯನ್ನೂ ಪೋಷಣೆಯನ್ನೂ ಒದಗಿಸಿದ ಈ ಮಹನೀಯರಿಗೆ ನಾನು ಋಣಿ. ಅವರ ಹೆಸರು ಕಡಿಯಾಳಿ ರಾಮಚಂದ್ರ ಉಪಾಧ್ಯರು. ಕಡಿಯಾಳಿಯ ಅರ್ಚಕ ಕುಟುಂಬಕ್ಕೆ ಸೇರಿದ ಅವರು ಸಂಸ್ಕೃತ ಎಂಟ್ರೆನ್ಸ್ ಮುಗಿಸಿ ಕಡಿಯಾಳಿಯಲ್ಲಿ ಪಂಡಿತರಾಗಿ ಸೇರಿದ್ದರು. ಅವರು ಮದ್ರಾಸಿನ ಕನ್ನಡ ವಿದ್ವಾನ್ ಪರೀಕ್ಷೆಗೆ ಕಟ್ಟುತ್ತಿದ್ದುದು ನನಗೂ ನನ್ನ ಓರಗೆಯ ಮಿತ್ರರಿಗೂ ವರದಾನವಾಯಿತು. ಅವರು ಓದುತ್ತಿದ್ದ ಕುಮಾರ ವ್ಯಾಸ, ಜೈಮಿನಿ ಭಾರತ, ರಾಮಾಶ್ವಮೇಧದ ಪಾಠಗಳು ನನಗೆ ಶಿಕ್ಷಣದ ಪ್ರಾಥಮಿಕ ಹಂತದಲ್ಲೇ ದೊರೆಯುವಂತಾಯಿತು.

ನನ್ನ ಸಮಕಾಲೀನರಾಗಿ ಕಡಿಯಾಳಿಯ ಗರಡಿಯಲ್ಲಿ ಪಳಗಿದ ಇನ್ನಿಬ್ಬರು ನನ್ನ ಜೀವನಸಾಥಿಗಳಾಗಿ, ಸ್ನೇಹಿತರಾಗಿ, ಹಿತವಂದಿಗರಾಗಿ ಉಳಿದು ಬಂದಿದ್ದಾರೆ. ಅವರೇ ಕಲ್ಬಂಕದ ಪೈಗಳು-'ಕಮಲಾಕ್ಷ ಪೈ' (ಕೆ.ಕೆ.ಪೈ) ಮತ್ತು ಪ್ರಭಾಕರ ಪೈ ಎಂಬಿಬ್ಬರು ಅಣ್ಣಾ ತಮ್ಮಂದಿರು. ನನ್ನ ಬದುಕಿನಲ್ಲಿ ಇವರು ಆಳವಾದ ಪ್ರಭಾವ ಬೀರಿದರು. ಆಪದ್ಬಾಂಧವರೆನಿಸಿದವರು. ನನ್ನ ನಿರುದ್ಯೋಗ ಪರ್ವದಲ್ಲಿ, ಉದ್ಯೋಗ ಪರ್ವದಲ್ಲಿ ತದನಂತರ ನಿವೃತ್ತಿಯಲ್ಲಿ, ಪ್ರವೃತ್ತಿಯಲ್ಲಿ ಇವರದು ಒಂದು ರೀತಿಯ ಸಹಯೋಗ, ಸಹಚಿಂತನ, ಸಹಮತ. ಪರಸ್ಪರ ಸಂಸಾರದ ಸುಖದುಃಖದಲ್ಲಿ ಸಮಭಾಗಿಗಳು ನಾವು.

## ಅಧ್ಯಾಯ ೩
## ಮರುಧರೆಯ ಯಾತ್ರಿಕ

ಕಡಿಯಾಳಿಯ ಪ್ರೇಮಮಯ ವಾತಾವರಣದಿಂದ ಉಡುಪಿ ಬೋರ್ಡು ಹೈಸ್ಕೂಲಿಗೆ ಮುಂದಡಿ ಇಟ್ಟದ್ದು ಒಂದು ಮರುಳುಗಾಡಿನಲ್ಲಿ ಕಾಲಿಟ್ಟ ಹಾಗೆಯೇ ಆಯಿತು. ತಾಲೂಕು ಬೋರ್ಡಿನ ಆಡಳಿತವುಳ್ಳ ಉಡುಪಿ ಬೋರ್ಡು ಹೈಸ್ಕೂಲನ್ನು ನಾನು ೧೯೩೦ರಲ್ಲಿ ಸೇರಿಕೊಂಡೆ.

ಸ್ಪಷ್ಟವಾಗಿ ನೆನಪಿನಲ್ಲಿ ಉಳಿದಿರುವ ವಿಷಯವೆಂದರೆ ಇತಿಹಾಸ ಅಧ್ಯಾಪಕ ನರಸಿಂಗರಾಯರು ತುಂಬಾ ಸಾಧು ಸ್ವಭಾವದ ಮನುಷ್ಯ. ತುಂಟ ಹುಡುಗರಿಗೆ ನೋಡಿ, ಒಂದು ದಿನ ನೀವೂ ನನ್ನ ಹಾಗೆ ಮಾಸ್ತರರಾಗಬೇಕು ಎಂದು ಆಶೀರ್ವಾದ ಮಾಡುವುದರ ಹೊರತು ಗಟ್ಟಿಯಾಗಿ ಗದರಿಸಲೂ ತಿಳಿಯದವರು. ಉದ್ಯಾವರ ವೆಂಕಟರಾಯರು ಇಂಗ್ಲೀಷ್ ಕಲಿಸುತ್ತಿದ್ದರು. ಇವರು ಕುಳ್ಳಗಿನ ಆಳು. ಖಾದಿವಾದಿ. ಗಾಂಧೀ ಚಳವಳಿಯ ಯುಗದಲ್ಲಿ ಹರಿಜನರೊಡನೆ ಊಟ ಮಾಡುವಷ್ಟು ಪ್ರಗತಿಶೀಲರು. ವ್ಯಾಕರಣ ಎಂದೂ ತಪ್ಪಲಾರದ ನನ್ನ ಇಂಗ್ಲೀಷ್ ಪ್ರಬಂಧವನ್ನು ತಿದ್ದಿ ಅವರು ಮೆಚ್ಚಿಗೆ ಸೂಚಿಸುವುದಿತ್ತು. ವೆಂಕಟರಾಯರ ಮಕ್ಕಳಲ್ಲಿ ಕೆಲವರು ಮುಂಬಯಿಯ ಪತ್ರಿಕೋದ್ಯಮದಲ್ಲಿ ಆ

> **ಜಟ್ಟಿ**
>
> ಈತ ಜಗ ಜಟ್ಟಿ ನಿಜ,
> ವಾಸ್ತವದಲ್ಲಿ.....
> ಮೂಕ ಮಾಂಸದ ಗಟ್ಟಿ- ಎಂಬುದೂ
> ಸಹಜ!
>
> • ದೊಡ್ಡ ರಂಗೇಗೌಡ

ಮೇಲೆ ಕೀರ್ತಿಗಳಿಸಿದರು. ಯು.ಜಿ.ರಾವು, ಯು.ಎಸ್.ರಾವು, ಲಕ್ಷ್ಮೀಪತಿ ರಾವು- ಮುಂಬಯಿಯ ಟೈಮ್ಸ್, ಫಿಲ್ಮ್‌ಫೇರ್ ಮುಂತಾದ ಪತ್ರಿಕೆಗಳಲ್ಲಿ ಕೆಳಗಿನಿಂದ ದುಡಿಯುತ್ತ ಬಂದು, ಸಂಪಾದಕ ಸ್ಥಾನದವರೆಗೋ ಅದಕ್ಕೆ ಸಮೀಪವೋ ಉತ್ತೀರ್ಣಗೊಂಡವರು.

## ಅಧ್ಯಾಯ ೪
## ಉಪಾಧ್ಯಾಯ ತರಬೇತಿ

ನಮ್ಮ ಮನೆಗೆ ಗುಂಡ್ಮಿ ಕಡೆಯಿಂದ ಒಬ್ಬರು ಜೋಯಿಸರು ಬರುತ್ತಿದ್ದರು. ಪಕ್ಕದ ಮನೆಯ ಚಿನ್ನದ ಕೆಲಸದ ನಾರಾಯಣ ಆಚಾರಿಯವರ ಮೂಲಕ ನಮಗೆ ಅವರ ಪರಿಚಯವಾದದ್ದು. ಲೋಕಾಭಿರಾಮವಾಗಿ ಮಾತಾಡಲು ಐತಾಳ ಜೋಯಿಸರು ಎತ್ತಿದ ಕೈ. ಒಂದು ದಿನ ತಂದೆಯವರು ಇವರಿಗೆ ಕೈ ತೋರಿಸು ಎಂದುಬಿಟ್ಟರು. ನಾನು ತೋರಿಸಿದೆ: ಐತಾಳರು ಇವನಿಗೆ ವಿದ್ಯೆಯಲ್ಲಿ ವಿಘ್ನಕಾರಕನಿದ್ದಾನೆ. ಆದರೆ ಅದನ್ನು ಮೀರಿ ಇವನು ಮುಂದೆ ಹೋಗುವುದೇ ಸೈ ಎಂದರು. ಜೋಯಿಸರ ಮಾತು ಹುಸಿ ಮಾಡಬಾರದೆಂದೋ ಏನೋ ನನ್ನ ತಂದೆಯವರ ವತಿಯಿಂದಲೇ ನನ್ನ ವಿದ್ಯೆಗೆ ಮೊದಲ ವಿಘ್ನ ಬಂತು. ತಂದೆಯವರ ಜ್ಞಾನ ಪರಿಧಿಯಲ್ಲಿ ಕಾಲೇಜೆಂದರೆ ಭಾರೀ ಖರ್ಚಿನ ಬಾಬು; ಮನೆವೆಚ್ಚ ಸರಿದೂಗುವುದು ಪ್ರಯಾಸಕರ ಎಂಬ ಭಾವನೆ ಬಂದಿತ್ತು. ನನ್ನ ಅಕ್ಕ-ತಂಗಿ ಇಬ್ಬರಿಗೂ ಮದುವೆ ಆಗಿದ್ದರೂ ಪ್ರಸಂಗತ್ವೇನ ಅವರಿಬ್ಬರೂ ನಮ್ಮ ಮನೆಯೊಳಗೆ ಬೀಡುಬಿಟ್ಟಿದ್ದರು. ನಾನು ಎಸ್.ಎಸ್.ಎಲ್.ಸಿ. ಪಾಸಾಗುವಾಗ ನಮ್ಮ ಸಂಸಾರದ ಆರ್ಥಿಕ ಸ್ಥಿತಿ ಏನೇನೂ ಚೆನ್ನಾಗಿರಲಿಲ್ಲ. ಸಂಪೂರ್ಣ ಚಿಕ್ಕಪ್ಪನ ಮೇಲೆಯೇ ಅವಲಂಬನೆ. ಒಟ್ಟು ಪರಾಧೀನಸ್ಥಿತಿ. ಅಣ್ಣನಿಗೆ ಹೆಣ್ಣುಮಕ್ಕಳ ಮೋಹ ಜಾಸ್ತಿ ಆಯಿತೆಂದು ಚಿಕ್ಕಪ್ಪನೂ ಸಿಟ್ಟುಗೊಳ್ಳುವುದಿತ್ತು. ಆದರೆ ಸಂಸಾರಕ್ಕೆ ಉಳಿದ ಒಬ್ಬನೇ ಗಂಡು ಮಗನಾದ ನನ್ನ ಮೇಲೆ ಉಭಯ ಪಿತೃಗಳಿಗೂ ಸಾಕಷ್ಟು ಪ್ರೀತಿ ಇತ್ತು. 'ಒಳ್ಳೆಯ ಅಂಕದಲ್ಲಿ ಎಸ್.ಎಸ್.ಎಲ್.ಸಿ. ಪಾಸಾದ್ದರಿಂದ ಕಾಲೇಜಿಗೆ ಹೋದರೂ ಸಂತೋಷ. ನನಗೆ ದೇವರು ಕೊಟ್ಟಷ್ಟು ದಿನ ನಿನಗೆ ನಾನು ಕೊಡುತ್ತೇನೆ- ಆದರೆ ನಿನ್ನಪ್ಪಯ್ಯನ ಹತ್ತಿರ ಕೇಳಿ ಅವರು ಹೇಳಿದಂತೆ ಮಾಡು' ಎಂದು ಚಿಕ್ಕಪ್ಪ ಗದುಗಿನಿಂದ ಬರೆದರು. ಅಪ್ಪಯ್ಯ ಸಂಸಾರ ಪೋಷಣೆಯ ಭೀತಿಗ್ರಸ್ತರಾಗಿ ಎರಡು ವರ್ಷದಲ್ಲಿ ಮುಗಿಯುವ ಶಿಕ್ಷಕ ತರಬೇತಿಯೇ ನನಗೆ ಸರಿಯಾದ್ದೆಂದು ತೀರ್ಮಾನಿಸಿ, ಒತ್ತಾಯಿಸಿ, ಮಂಗಳೂರಿಗೆ ಕರೆದುಕೊಂಡು ಹೋಗಿ ಸರಕಾರಿ ಕಾಲೇಜಿನೊಳಗೆ ಅಂತರ್ಗತವಾಗಿರುತ್ತಿದ್ದ ಸೆಕೆಂಡರಿ ತರಬೇತಿ ಶಾಲೆಗೆ ನನ್ನನ್ನು ಸೇರಿಸಿದರು. ಹೆಡ್ಮಾಸ್ತರ ಮೊಂತೆರೋ ಕೇಳಿದರು, "ಏನು ಸ್ವಾಮಿ, ಇಷ್ಟು ಮಾರ್ಕಿನ ಹುಡುಗನನ್ನು ಇಲ್ಲಿಗೆ ತಂದಿದ್ದೀರಿ? ನಾನು ಸೀಟು ಕೊಡುತ್ತೇನೆ, ಆದರೆ ಇವನಿಗೆ ಕಾಲೇಜು ಸರಿಯಾದ ಸ್ಥಳ," ಎಂದರು. ಅಂತೂ ಜೂನ್ ೧೯೪೦ರಲ್ಲಿ ನಾನು ಮಂಗಳೂರಿನಲ್ಲಿ ಶಿಕ್ಷಕ ವೃತ್ತಿಯ ತರಬೇತಿ ಆರಂಭಮಾಡಿದೆ.

ಕಾರ್ನಾಡ್ ಸದಾಶಿವರಾವು ರಸ್ತೆಯಲ್ಲಿರುವ ಮಾಡರ್ನ್ ಹೋಟೇಲಿನಲ್ಲಿ ೬ ರೂಪಾಯಿಗೆ ಒಂದು ಡಬ್ಬಲ್ ರೂಮಿನಲ್ಲಿ ನಾನೂ ಆಮೇಲೆ ಕಮ್ಯೂನಿಸ್ಟರಾಗಿ, ಸಂಸತ್‌ಸದಸ್ಯರಾಗಿ ಹೆಸರು ಮಾಡಿದ ಬಿ.ವಿ.ಕಕ್ಕಿಲ್ಲಾಯರೂ ವಸತಿ ಹೂಡಿದೆವು. ಕಕ್ಕಿಲ್ಲಾಯರು ಏಲೋಶಿಯಸ್ ಕಾಲೇಜಿನ ಬಿ.ಎ. ವಿದ್ಯಾರ್ಥಿ; ಕ್ಷೌರದ ರೇಜರ್ ಹಿಡಿಯಲು ಕಲಿಸಿದ್ದೇ ಅವರು ನನಗೆ. ಅವರ ಕ್ರಾಂತಿಕಾರಿ ಮನೋವೃತ್ತಿಯ ಪ್ರಥಮ ಪರಿಚಯವೂ ನನಗಾಯಿತು.

ಶಿಕ್ಷಣ ಕಲೆಯ ಮರ್ಮವನ್ನರಿಯಲು ಸೈದ್ಧಾಂತಿಕವಾಗಿ ಎಷ್ಟು ಬೇಕೋ ಅಷ್ಟು ಶಾಸ್ತ್ರಜ್ಞಾನವನ್ನು ನೀರುಕುಡಿದಷ್ಟು ಸುಲಭವಾಗಿ ವಶಪಡಿಸಿಕೊಂಡದ್ದಕ್ಕಿಂತಲೂ ರ್‍ಯಾಂಕ್ ಸಮೇತ ಪಾಸಾದ್ದಕ್ಕಿಂತಲೂ

ಮುಖ್ಯ ವಿಷಯ ನನ್ನ ವ್ಯಕ್ತಿತ್ವದಲ್ಲಿ ಬೇರುಬಿಟ್ಟ ಆತ್ಮ ವಿಶ್ವಾಸ. ಗೃಹಪಂಜರದಿಂದ ಹೊರಬಿದ್ದು ಮಂಗಳೂರಿನ ಸನ್ನಿವೇಶದಲ್ಲಿ ಹೊಸ ಗೆಳೆಯರ ಸಹವಾಸದಲ್ಲಿ ಹೊಸ ಸ್ಥಳದಲ್ಲಿ ಹೊಸ ಅಭ್ಯಾಸದಲ್ಲಿ ಆಸಕ್ತನಾದ ನನ್ನಲ್ಲಿ ಅಂಜುಬುರುಕುತನ ಮಾಯವಾಗಿಬಿಟ್ಟಿತ್ತು. ಅಧ್ಯಯನ ಭಾಗದಲ್ಲಿ ಅಧ್ಯಾಪನದಲ್ಲಿ ನಾನೂ ಜಯಗಳಿಸೇ ತೀರುವೆನೆಂಬ ವಿಶ್ವಾಸ ಮೂಡಿತು. ಜತೆಗೆ ಒಂದು ವಿಶಿಷ್ಟ ಸಾಹಿತ್ಯಾಭ್ಯಾಸದ ಅವಕಾಶವನ್ನೂ ಅಲ್ಲಿ ನಾನೇ ಸಮಾನಾಂತರವಾಗಿ ಮಾಡಿಕೊಂಡೆ. ಇದು ನನ್ನ ಮಾನಸಿಕ ದಿಗಂತವನ್ನು ವಿಸ್ತರಿಸಿ, ಕಾಲೇಜಿಗೆ ಹೋಗದಿರುವ ಕೊರತೆಯನ್ನು ಬಹಳಷ್ಟು ತುಂಬಿಸಿಕೊಟ್ಟಿತು. ೧೯೪೦ರ ಜೂನ್ ತಿಂಗಳಿನಿಂದ ಮಂಗಳೂರಿನ ಗಣಪತಿ ಹೈಸ್ಕೂಲಿನಲ್ಲಿ ಸಾಹಿತ್ಯ ಪರಿಷತ್ತಿನ ಕನ್ನಡ ಜಾಣ ತರಗತಿ ನಡೆಯುತ್ತಿತ್ತಂತೆ. ನನಗಿದು ತಿಳಿದದ್ದು ಡಿಶಂಬರ್ ತಿಂಗಳದಲ್ಲಿ-ಪರೀಕ್ಷೆಗೆ ಐದು ತಿಂಗಳಿರುವಾಗ. ಆದರೂ ನಾನು ಜಾಣದ ಸಂಜೆ ವರ್ಗಗಳಿಗೆ ದಾಖಲಿಸಿಕೊಂಡೆ. ಕಾದಂಬರೀ ಸಂಗ್ರಹ, ಹರಿಶ್ಚಂದ್ರ ಕಾವ್ಯ ಪಾಠ ಹೇಳಲು ದಿ.ಕಡೆಂಗೊಡ್ಲು ಶಂಕರಭಟ್ಟರು, ಕನ್ನಡ ಕೈಪಿಡಿ ವ್ಯಾಕರಣಕ್ಕೆ ಸೇಡಿಯಾಪು ಕೃಷ್ಣಭಟ್ಟರು, ಡಿ.ವಿ.ಜಿ. ಅವರ ಜೀವನ ಸೌಂದರ್ಯ ಮತ್ತು ಸಾಹಿತ್ಯ ಪಾಠ ಹೇಳಲು ೩ ದಿನ ಶಿವರಾಮ ಕಾರಂತರೇ ಬಂದರು. 'ಜಾಣ' ಪರೀಕ್ಷೆಗೆ ಮೇಲ್ವಿಚಾರಕರಾಗಿ ಬಂದದ್ದು ಕಾರಂತರೇ.... ನಮಗೆ ಪ್ರಶ್ನೆ ಪತ್ರಿಕೆ ಕೊಟ್ಟು ತಾವು ಯಾವುದೋ-ಪ್ರಾಯಃ 'ಮರಳಿ ಮಣ್ಣಿಗೆ'- ಯ ಪ್ರೂಫ್ ತಿದ್ದಿಕೊಂಡು ಕೂತಿರುತ್ತಿದ್ದರು. ನಾನು ಜಾಣ ತರಗತಿ ಸೇರುವ ಮೊದಲು ಮುಳಿಯ ತಿಮ್ಮಪ್ಪಯ್ಯನವರು ಕೂಡ ಅಲ್ಲಿ ಪಾಠ ಮಾಡುತ್ತಿದ್ದರಂತೆ. ಆದರೆ ಮುಳ್ಳು ತಗಲಿ, ಕಾಲು ಬೇನೆಗೆ ತುತ್ತಾಗಿ ಮನೆ ಸೇರಿದ್ದರಿಂದ ನಮ್ಮ ತರಗತಿಯ ವಿದಾಯಕೂಟ ಅವರ ಮನೆಯಲ್ಲೇ ನಡೆಯಿತು. ಫೋಟೋ ಕಾರ್ಯಕ್ರಮವಿತ್ತು. ತರಗತಿಗೆ ಬಂದು 'ಜಾಣ' ರಾದ ೧೪ ಮಂದಿಯಲ್ಲಿ ಹೆಚ್ಚಿನವರು ಮೊದಲೇ ಅಧ್ಯಾಪಕರು ಅಥವಾ ಆಮೇಲಾದವರು ನನ್ನಂತೆ; ನನಗಂತೂ ಕನ್ನಡ ಸಾಹಿತ್ಯದ ಹರವನ್ನೂ ಆಳವನ್ನೂ ಅರಿಯುವ ಒಂದು ಅವಕಾಶ ಒದಗಿ ಇನ್ನಷ್ಟು ಅಭ್ಯಾಸ ಮಾಡಬೇಕೆಂಬ ಕುತೂಹಲ ಕೆರಳಿತು. ಈ ಪರೀಕ್ಷೆ ಹೈದರಾಬಾದ್ ಕರ್ನಾಟಕದಲ್ಲಿ ಸರಕಾರದ ಮನ್ನಣೆ ಪಡೆದದ್ದರಿಂದ ಗುಲ್ಬರ್ಗ, ಬೀದರ್ ಕಡೆಯಲ್ಲಿ ಜನಪ್ರಿಯವಾಯಿತು. ಹತ್ತು-ಹದಿನೈದು ವರ್ಷಗಳು ಕಳೆದು ನಾನೊಮ್ಮೆ ಜಾಣದ ಪರೀಕ್ಷಕನಾದಾಗ ಚಿಂಚೋಳಿ, ಲಿಂಗಸಗೂರು ಮುಂತಾದ ವಿಲಕ್ಷಣ ಹೆಸರಿನ ಕೇಂದ್ರಗಳ ಪರೀಕ್ಷಾರ್ಥಿಗಳ ಕನ್ನಡದ ವೈಲಕ್ಷಣ್ಯವನ್ನು ಅರಿಯುವಂತಾಯಿತು. ಪ್ರಮಾಣ ಪತ್ರ, ಪರೀಕ್ಷೆಗಳ ದೃಷ್ಟಿಯಿಂದಲ್ಲವಾದರೂ ಬರೇ ಸಾಹಿತ್ಯಾಭ್ಯಾಸದ ದೃಷ್ಟಿಯಿಂದ ಪರಿಷತ್ತಿನ ಜಾಣ-ಕಾವಗಳನ್ನು ಸಾಹಿತ್ಯಾಸಕ್ತರು ಗಮನಿಸಬೇಕು ಎಂದು ಈಗಲೂ ನನಗನಿಸುತ್ತದೆ.

ನನ್ನ ಶಿಕ್ಷಕವೃತ್ತಿಯ ಮೊದಲ ಪಾಠ ಮಂಗಳೂರಿನ ಗಣಪತಿ ಹೈಸ್ಕೂಲ್ ಪಕ್ಕದ ಒಂದು ಪ್ರಾಥಮಿಕ ಶಾಲೆಯಲ್ಲಿ ನಡೆಯಿತು. ಪಾಠಪಟ್ಟಿಯ ಕಡ್ಡಾಯಕ್ಕೆ ಎಲ್ಲರೂ ಮಾದರಿಪಾಠ ಮಾಡಬೇಕಾಗಿತ್ತು. ಪಂಜೆ ಮಂಗೇಶರಾಯರ 'ಮೂಡುವನು ರವಿ ಮೂಡುವನು' ಪದ್ಯವನ್ನು ಸರಾಗವಾಗಿ ಸಲೀಸಾಗಿ ಅರ್ಥವಿವರಿಸಿ ಮಕ್ಕಳಿಂದ ಓದಿಸಿ ಮುಗಿಸುವಾಗ ಗಂಟೆ ಬಾರಿಸಿತು. ಗೆದ್ದ ವೀರನ ಸಂತೋಷದಿಂದ ಕ್ಲಾಸಿನಿಂದ ಹೊರಬಿದ್ದೆ. ಈ ನಡುವೆ ಹಿಂದೀ ಭಾಷೆಯ ಮಧ್ಯಮಾ ಪರೀಕ್ಷೆಗೆ ಕೂತು ಪಾಸಾದೆ. ಕನ್ನಡ ಸಾಹಿತ್ಯ ಮತ್ತು ಹಿಂದೀ ಸಾಹಿತ್ಯಗಳನ್ನು ಗಟ್ಟಿಯಾಗಿ ಬಿಗಿಹಿಡಿದೆ.

## ಅಧ್ಯಾಯ [illegible]
## ಶಿಕ್ಷಕ ವೃತ್ತಿ

೧೯೪೨ನೇ ಜೂನ್ ತಿಂಗಳ ೧ನೇ ತಾರೀಖು ನಾನು ಕಡಿಯಾಳಿ ಪ್ರಾಥಮಿಕ ಶಾಲೆಯಲ್ಲಿ ೧೮

ರೂಪಾಯಿಯ ಸಂಬಳದ ಶಿಕ್ಷಕನಾಗಿ ಸೇರಿದೆ. ಎರಡು ವರ್ಷ ನನ್ನ ಹಳೇ ಗುರುಗಳು ಮತ್ತು ಹೊಸ ಶಿಷ್ಯರೊಡನೆ ಸಂತೋಷದಿಂದ ದಿನ ಕಳೆದೆ. ನನ್ನ ತೀರ್ಥರೂಪರ ಮಾತಿನಂತೆ ನಡೆದ ಸಂತೋಷ ಇನ್ನೊಂದು ಕಡೆ, ಅವರ ಮಹತ್ವಾಕಾಂಕ್ಷೆಯ ಪರಮಾವಧಿಯನ್ನು ನಾನು ನೆರವೇರಿಸಿದ್ದೇನಲ್ಲವೆ? ನನ್ನ ಅಧ್ಯಾಪನ ಹಾಗೂ ಸ್ವಾಧ್ಯಾಯಕ್ಕೆ ಯಾವುದೇ ಆತಂಕ ಬರಲಿಲ್ಲ....

ಶಿಕ್ಷಕ ವೃತ್ತಿ ಪ್ರಾರಂಭ ಮಾಡಿದ್ದು ಕಡಿಯಾಳಿ ಪ್ರಾಥಮಿಕ ಶಾಲೆಯಲ್ಲಾದರೂ ಈ ವೃತ್ತಿಗನುಗುಣವಾದ ಮನೋಧರ್ಮ, ವ್ಯವಸಾಯ ಬುದ್ಧಿ ಮತ್ತು ಶ್ರದ್ಧೆಯ ಬೀಜ ಮೊಳೆದು ಭದ್ರವಾಗಿ ಬೇರು ಬಿಟ್ಟದ್ದು ಕ್ರಿಶ್ಚನ್ ಹೈಸ್ಕೂಲಿನ ಸಪ್ತವರ್ಣದ, ಅನೇಕ ವರ್ಣದ ವಾತಾವರಣದಲ್ಲಿನ, ಅಲ್ಲಿನ ಅಧ್ಯಾಪಕರ ಸ್ನೇಹ ರಸಭರಿತ ಶೀತಲ ತಮಾಲ ಛಾಯೆಯಲ್ಲಿ.

ಕೂಸು

ಗಂಡು ಹೆಣ್ಣಿನ
ಪ್ರೇಮದ ಪ್ರತಾಪ
ಅನಂತರದ ಪಶ್ಚಾತ್ತಾಪ
ಸಮ್ಮಿಳನದ
ಪ್ರೀತಿ ಪ್ರತಿರೂಪ, ಪಾಪ!

• ದೊಡ್ಡ ರಂಗೇಗೌಡ

ಕೆರೆಯ ನೀರನ್ನು ಕೆರೆಗೆ ಚೆಲ್ಲಿದಂತೆ, ಕಡಿಯಾಳಿ ಶಾಲೆಯಲ್ಲಿ ಪಡೆದದ್ದನ್ನು ಮಳಲಷ್ಟು ಮರಳಿಸಿದೆನೆಂಬ ಹೆಮ್ಮೆಯಿಂದ, ನನ್ನ ಅಲ್ಲಿನ ಗುರುಗಳ ಆಶೀರ್ವಾದವನ್ನು ಹೊತ್ತು ನಾನು ಕ್ರಿಶ್ಚಿಯನ್ ಹೈಸ್ಕೂಲಿನ ಅಂಗಳಕ್ಕೆ ಕಾಲಿಟ್ಟೆ.

ಹೈಸ್ಕೂಲುಗಳಲ್ಲಿ ಎಲ್ಲಾ ಪಾಠಗಳಿಗೂ ಇಂಗ್ಲೀಷ ಮಾಧ್ಯಮ ಜಾರಿಯಲ್ಲಿದ್ದು ಕನ್ನಡ ಮಾತ್ರ ಕನ್ನಡದಲ್ಲಿ ಕಲಿಯಬೇಕಾಗಿದ್ದ ಆ ಕಾಲದಲ್ಲಿ ಕನ್ನಡದ ಸ್ಥಾನ-ಮಾನ ಎರಡೂ ಅವಮಾನದ ಅಂಚಿನಲ್ಲಿ ತೂಗಳಬೇಕಾಗಿತ್ತಷ್ಟೆ. ಅಂಥಲ್ಲೇ ಕನ್ನಡದ ಮರ್ಯಾದೆ ಕಾಪಾಡಿದವರು ಪಂಡಿತ ವೆಂಕಟರಾಮಾಚಾರ್ಯರು. ಉಡುಪಿಯ ಮಟ್ಟಿಗೆ ಅವರು ನಾಡೋಜರು. ಕ್ರಿಶ್ಚಿಯನ್ ಹೈಸ್ಕೂಲ್ ಹುಡುಗರಿಗೆ ಕನ್ನಡ ವರ್ಗಗಳಲ್ಲಿ ಉಳಿದೆಡೆಗಳಂತೆ ತಾತ್ಸಾರ ಇರಲಿಲ್ಲ, ಕಾರಣ ಪಾಠ ವೆಂಕಟರಾಮಾಚಾರ್ಯರದ್ದು. ಯಾವಾಗ ಕನ್ನಡ ತೊಡಗೀತು ಎಂಬ ಲವಲವಿಕೆ ಸರ್ವ ವಿದ್ಯಾರ್ಥಿಗಳಲ್ಲೂ. ಕ್ಲಾಸಿನ ಆಪಾಪೋಲಿ ಹುಡುಗರು ಆಚಾರ್ಯರ ಮೃದುಪದಾಘಾತವನ್ನು ಆಲಿಸಿದರೋ ಬೆಲ್ಲತಿಂದ ಕೋಡಗನಂತೆ ಬಾಲ ಮಡಚಿ ಒಂದು ಘಂಟೆ ಕಾಲ ಪ್ರಾಣಾಯಾಮ ಮಾಡಬೇಕಾಗುತ್ತಿತ್ತು.

ಕ್ರಿಶ್ಚನ್ ಹೈಸ್ಕೂಲ್ ಮುದ್ದಣ್ಣ ಕಲಿಸಿದ ಶಾಲೆ. ಅಲ್ಲಿ ಕನ್ನಡದ ಕಾಯಕವನ್ನು ಒಂದು ತಲೆಮಾರು ಪೂರ್ತಿ ನಡೆಸಿಕೊಟ್ಟವರು ಪಂಡಿತ ವೆಂಕಟರಾಮಾಚಾರ್ಯರು. ಉಡುಪಿಯ ನೂರಾರು ವಿದ್ಯಾರ್ಥಿಗಳ ಹೃದಯಸಂಪುಟದಲ್ಲಿ ಅವರ ಸುವರ್ಣ ಸ್ಮಾರಕ ನಿರ್ಮಿತವಾಗಿದೆ. ಅವರ ಕರುಣೆಯಿಂದ ನಾನು ಹೈಸ್ಕೂಲಲ್ಲಿರುವಾಗಲೇ ವಿದ್ವಾನ್ ಪರೀಕ್ಷೆ ಪಾಸಾಗಿ, ಮಾದರಿ ವಿದ್ವಾಂಸನಾಗಿ ಹೊರಬಿದ್ದೆ. ಕ್ರಿಶ್ಚನ್ ಹೈಸ್ಕೂಲಲ್ಲಿ ಕಲಿಸುತ್ತಿದ್ದಾಗ ನಾನು ನನ್ನ ಕನ್ನಡ ಜಾಣದ ಬಂಡವಾಳ ಹಿಡಿದುಕೊಂಡೇ ಸಾಹಿತ್ಯ ಪಾಠಗಳನ್ನು ಕೊಡಬೇಕಾಯಿತು. ಸಂಸ್ಕೃತ ಕಾಲೇಜಿನ ವಿದ್ಯಾರ್ಥಿಗಳು ಕನ್ನಡ ಸಾಹಿತ್ಯದಲ್ಲಿ ಆಸಕ್ತರಾಗಿ ಕಲಾವೃಂದ ಎಂಬೊಂದು ಚಿಕ್ಕ ಸಂಸ್ಥೆ ಕಟ್ಟಿಕೊಂಡಿದ್ದರು. ರಥಬೀದಿಯ ಚಂದ್ರೇಶ್ವರ ದೇಗುಲದ ಮಾಳಿಗೆಯಲ್ಲಿ ಜಾಣ ತರಗತಿಗಳನ್ನೂ ಕಾವ ತರಗತಿಗಳನ್ನೂ ನಡೆಸಿಕೊಟ್ಟದ್ದೂ ಜ್ಞಾಪಕಕ್ಕೆ ಬರುತ್ತದೆ. ಕಾವಕ್ಕೆ ಮಧ್ಯಮ ವ್ಯಾಕರಣಕ್ಕೆ ಜಾಣಕ್ಕೆ ನಂಬಿಯಣ್ಣನ ರಗಳೆ, ಹರಿಶ್ಚಂದ್ರ ಕಾವ್ಯ ಪಾಠ ಮಾಡಿದೆ. ನನ್ನ ಪಾಠ ಕೇಳಲು ಬಂದ ವಿದ್ಯಾರ್ಥಿಗಳಲ್ಲಿ ಯುಗಪುರುಷ ಸಂಪಾದಕ ಶ್ರೀ ಕೆ. ಅನಂತ ಪದ್ಮನಾಭ ಉಡುಪರು, ಸತ್ಯಕಾಮರೆಂದು ಹೆಸರು

ಮಾಡಿದ ಪದ್ಮನಾಭಾಚಾರ್ಯರು ಇದ್ದರೆಂದು ನೆನಪು.

ಮಂಗಳೂರಿಗೆ ಹೋಗುವವರೆಗೆ ಅಂದರೆ ಎಸ್.ಎಸ್.ಎಲ್.ಸಿ. ಪಾಸಾಗುವತನಕ ನಾನು ಯಾವ ದಿನ ಪತ್ರಿಕೆಯನ್ನೂ ಓದಿದವನಲ್ಲ. ಕನ್ನ ಡದ ವಾರಪತ್ರಿಕೆ ಮಾಸಪತ್ರಿಕೆಗಳನ್ನಷ್ಟೇ ಓದಿ ಆನಂದಿಸಿದವನು.

## ಅಧ್ಯಾಯ ೬

# ಗಾಂಧೀಜಿಗೆ ಹತ್ತೇ ಮಾರು

ಅಧ್ಯಾಪಕ ವೃತ್ತಿಯ ಮೂರುವರೆ ವರ್ಷಗಳಲ್ಲಿ (೧೯೪೨-೪೬) ನಾನು ಹಿಂದಿಯ ರಾಷ್ಟ್ರ ಭಾಷಾ ವಿಶಾರದ ಪರೀಕ್ಷೆ ಪಾಸುಮಾಡಿದೆ. ಸಂಸ್ಕೃತ ಮತ್ತು ಕನ್ನಡ ವಿದ್ವಾನ್ ಮುಗಿಸಿದ್ದೆ. ಅಲ್ಲದೆ ಇತಿಹಾಸ ವಿಷಯದಲ್ಲಿ ಇಂಟರ್ ಪಾಸ್ ಮಾಡಿ, ಕಾಲೇಜು ಕಟ್ಟೆ ಹತ್ತಲು ಅರ್ಹತೆಗಳಿಸಿದೆ. ವಿಶಾರದ 'ವಿದ್ವಾನ್'ಗಳಿಗೆ ಕಷ್ಟವಿರಲಿಲ್ಲ. ಬೇಕೆಂದಾಗ ಪರೀ ಕ್ಷೆಕಟ್ಟಬಹುದಾಗಿತ್ತು. ಇಂಟರ್‌ಗೆ ಕಟ್ಟಲು ೩ ವರ್ಷ ಅಧ್ಯಾಪಕನಾದ ಬಳಿಕವೇ ಅರ್ಹತೆ. ಹಾಗಾಗಿ ಜೂನ್‌ಗೆ ಮೂರು ವರ್ಷ ಕಳೆದ ತಕ್ಷಣ ಬರುವಂಥ ಸಪ್ಟೆಂಬರ್ (೧೯೪೫) ಪರೀಕ್ಷೆಗೆ ಕಟ್ಟಿದೆ. ಪ್ರಪ್ರಥಮ ವರ್ಗದಲ್ಲಿ ಮಾತ್ರವೇ ಅಲ್ಲ, ವಿಶ್ವವಿದ್ಯಾನಿಲಯಕ್ಕೆ ಎರಡನೇ ರ‍್ಯಾಂಕನ್ನು ಪಡೆದು ನನ್ನ ಪರಾಕ್ರಮವನ್ನು ಮೆರೆದೆ.... ಇನ್ನೊಮ್ಮೆ ಕಾಲೇಜಿಗೆ ಹೋಗುತ್ತೇನೆ ಎಂದು ನಾನು ಬಹಿ ರಂಗ ಘೋಷಣೆ ಮಾಡಿದಾಗ ತಂದೆ ಕೂಡಲೆ ಸಮ್ಮತಿಸಿದರು. ಚಿಕ್ಕಪ್ಪ ಎಂದಿನಂತೆ ದೇವರು ಕೊಡುವವರೆಗೆ ಎಂಬ ಶರ್ತುಹಾಕಿ ಆರ್ಥಿಕ ಬೆಂಬಲ ಭರವಸೆಕೊಟ್ಟರು. ಮದ್ರಾಸಿಗೆ ಹೋಗಿ ಕ್ರಿಶ್ಚನ್ ಕಾಲೇಜನ್ನು ನೋಡಿ ಅರ್ಜಿಸಲ್ಲಿಸುವ ಇರಾದೆಯಿಂದ ೧೯೪೬ರ ಜನವರಿಯಲ್ಲಿ ತಾಂಬ ರಮ್‌ಗೆ ಪಯಣಬೆಳೆಸಿದೆ. ಅಂದರೆ ನನ್ನ ಮಿತ್ರ ಪ್ರಭಾಕರ ಕ್ರಿಶ್ಚಿಯನ್‌ನಲ್ಲಿ ಬಿ.ಎಸ್ಸಿ. ಮಾಡುವಾಗ ಅದರ ಬಣ್ಣನೆ ಮಾಡುತ್ತಿದ್ದ. ನನಗೂ ಅದೇ ಕಾಲೇಜು ಎಂದು ಎಂದೋ ನಿರ್ಧರಿಸಿದ ಪ್ರಕಾರ, ಒಂದು ಸಲ ನೋಡಿ ಬರೋಣ ಎಂದು ಹೊರಟೆ. ಅದಕ್ಕನುಕೂಲವಾದ ಸಂದರ್ಭವೂ ಒದಗಿಬಂತು- ಗಾಂಧೀಜಿಯ ನೆಪದಲ್ಲಿ.

೧೯೪೬ ಜನವರಿಯಲ್ಲಿ ಗಾಂಧೀಜಿ ಮದರಾ ಸಿಗೆ ಬರುವವರಿದ್ದರು. ಹಿಂದೀ ಪ್ರಚಾರ ಸಭೆಯಲ್ಲಿ ಆ ವರ್ಷದ ಘಟಿಕೋತ್ಸವ ಹಾಗೂ ಭಾರತೀಯ ಭಾಷೆಗಳ ಸಮನ್ವಯ ಮುಂತಾದ ಸಭೆಗಳಲ್ಲಿ ಮಾತನಾಡುವವರಿದ್ದರು. ಹಿಂದೀ ಪ್ರಚಾರಕರಿ ಗೆಂದೇ ಒಂದು ಪ್ರತ್ಯೇಕ ಸಭಾವಕಾಶ ನೀಡಲಾ ಗಿತ್ತು. ನಾನು ಹಿಂದೀ ಪ್ರಚಾರಕನಾದೆ, ಸಭೆಯ ಮಟ್ಟಿಗೆ. ಅದರ ಕಥೆ ಹೀಗೆ. ಗಾಂಧೀಜಿಯವರ ಸಲುವಾಗಿ ಹಿಂದೀ ಪ್ರಚಾರಸಭೆ ಒಂದು ಚಿಕ್ಕ ಹಿಂದೀ ಚಳವಳಿತೊಡಗಿತು. ನಯೀ ಹಿಂದೀ ಎಂಬ ಒಂದು ೩೨ ಪುಟದ ಪಠ್ಯವನ್ನು ಹೊರ ಡಿಸಿತು. ಇದು ಆಯಾ ಭಾಷೆಯ ಲಿಪಿಯಲ್ಲೇ ಹಿಂದಿಯನ್ನು ಬರೆದು, ಪ್ರಶ್ನೋತ್ತರಗಳ ಮೂಲಕ ಹಿಂದಿ ಸಂಭಾಷಣೆ ಕಲಿಸುವ ಒಂದು ಪ್ರಯೋಗ. ಯಾರು ಈ ನಯೀ ಹಿಂದಿಗೆ ೨೦ ವಿದ್ಯಾರ್ಥಿಗ ಳನ್ನು ಸಿದ್ಧಗೊಳಿಸುತ್ತಾನೋ ಆತ ಹಿಂದೀ ಪ್ರಚಾ ರಕನಾಗಿ ಗಾಂಧೀಜಿಯನ್ನು ನೋಡಲು ಬರಬ ಹುದು ಎಂಬ ಉದ್ದೇಶ. ಸರಿ, ನಾನು ಕ್ರಿಶ್ಚನ್ ಶಾಲೆಯ ಮಕ್ಕಳನ್ನು ಕೂಡಿಸಿದೆ. ಒಂದು ತಿಂಗಳ ಕಾಲ ರಜಾ ದಿನಗಳಲ್ಲೂ ಪಾಠ ಮಾಡಿ, ಪುಸ್ತಕ ಮುಗಿಸಿ, ಶರತ್ತನ್ನು ಪಾಲಿಸಿ ಮದರಾಸಿಗೆ ಹೋಗುವ ಅರ್ಹತೆ ಪಡೆದುಕೊಂಡೆ. ಮದರಾಸಿ ನಲ್ಲಿ ಊರಿನವರೇ ಆಗಿ ಲೋಯೆಲಾ ಕಾಲೇಜಿ ನಲ್ಲಿ ಗಣಿತ ಆನರ್ಸ್ ಮಾಡುತ್ತಿದ್ದ ಅಂಬಲ್ಪಾಡಿ ಕೃಷ್ಣರಾಯರ (ಆಮೇಲೆ ಸಿಂಡಿಕೇಟ್ ಬ್ಯಾಂಕ್ ಅಧ್ಯಕ್ಷರಾದವರು) ಕೊಠಡಿಯಲ್ಲಿ ವಾಸಮಾಡಿ ೨-೩ ದಿನ ಗಾಂಧೀಜೀ ಇರುವಲ್ಲೆಲ್ಲ ಹಾಜರಿ ಹಾಕಿದೆ. ಘಟಿಕೋತ್ಸವದಲ್ಲಿ ತೀರ ಹಿಂದುಗಡೆ ಕೂತಿದ್ದೆ. ಪ್ರಚಾರ ಸಭೆಯಲ್ಲಿ ಮಾತ್ರ ಮುಂದಿನ

ಸ್ಥಾನಗಳಿಸಿಕೊಂಡೆ. ಗಾಂಧೀಜಿಗೆ ಕೇವಲ ಹತ್ತೇ ಮಾರುದೂರ.... ಇನ್ನೊಂದು ದಿನ ದಕ್ಷಿಣ ಭಾಷೆಗಳ ಗೋಷ್ಠಿಗೆ ಮಾಸ್ತಿ ವೆಂಕಟೇಶ ಅಯ್ಯಂಗಾರರು ಕನ್ನಡಪರವಾಗಿ ಮಾತಾಡಲು ಬಂದಿದ್ದರು. ಕ್ರಿಶ್ಚನ್ ಕಾಲೇಜಿಗೆ ಹೋಗುವ ಕೆಲಸವನ್ನು ಕೃಷ್ಣರಾಯರ ಜತೆಗೆ ಮಾಡಿದೆ..... ಹಂಗಾಮಿ ಪ್ರಿನ್ಸಿಪಾಲ್ ಪ್ಲಟೆನ್ ನನ್ನ ಪರೀಕ್ಷಾಂಕಗಳನ್ನು ಪರೀಕ್ಷಿಸಿ ಅಡ್ಡಿ ಇಲ್ಲ ಆಂಗ್ಲಸಾಹಿತ್ಯದ ಆನರ್ಸ್‌ನಲ್ಲಿ ಸೀಟು ಕೊಡಬಹುದು ಎಂದು ಆಶ್ವಾಸನೆಕೊಟ್ಟರು.

ನನ್ನ ಸಾಹಿತ್ಯಜೀವನಕ್ಕೆ ನೆರವು ನಿಂತ ವಿದ್ವಾನ್ ಪರೀಕ್ಷೆಯ ಬಗ್ಗೆ ಎರಡು ಮಾತು. ಇಂಥ ಪರೀಕ್ಷೆಗಳನ್ನು ಮದ್ರಾಸ್ ವಿಶ್ವವಿದ್ಯಾನಿಲಯವೇ ನಡೆಸುತ್ತಿತ್ತು. ಓರಿಯಂಟಲ್ ಟೈಟಲ್ಸ್ ಎಂದು ಕರೆದು ಅವುಗಳಿಗೆ ಒಂದು ವಿಶಿಷ್ಟಸ್ಥಾನಮಾನ ಕಲ್ಪಿಸಿಕೊಟ್ಟಿತ್ತು. ಸರಕಾರವು ಕೂಡ ವಿದ್ವಾನ್ ಉಪಾಧಿಯುಳ್ಳವರು ಹೈಸ್ಕೂಲಿನಲ್ಲಿ ಪಾಠ ಹೇಳಲು ಅರ್ಹರು ಎಂದು ನಿಯಮಿಸಿತ್ತು. ಪರೀಕ್ಷೆ ಎರಡು ಹಂತದಲ್ಲಿ ಎರಡು ವರ್ಷ ನಡೆಯುತ್ತಿತ್ತು. ವಿದ್ವಾನ್ ಅಂತಿಮ ಪರೀಕ್ಷೆಯನ್ನು ನಾನು ೧೯೪೭ರ ಏಪ್ರಿಲ್‌ನಲ್ಲಿ ಕೊಟ್ಟು ಪ್ರಥಮ ರ್‍ಯಾಂಕ್ ಪಡೆದು ಪಾಸಾಗಿ ವಾರ್ಸಿಟಿ ಸ್ವರ್ಣಪದಕಕ್ಕೆ ಅರ್ಹತೆಗಳಿಸಿಕೊಂಡೆ. ವಿದ್ವಾನ್ ಹಳೆ ಮಾದರಿಯ ಪರೀಕ್ಷೆಯಾದರೂ ಪ್ರಾಚ್ಯ ಪದ್ಧತಿಯ ಅಧ್ಯಯನ ಮಾರ್ಗವನ್ನವಲಂಬಿಸಿದ್ದರಿಂದ ಪರೀಕ್ಷೆಗಾಗಿ ಇಡಿ ಇಡಿಯಾಗಿ ಪ್ರತಿ ಕಾವ್ಯ, ನಾಟಕ, ಲಕ್ಷಣ ಮುಂತಾದ ಗ್ರಂಥಗಳನ್ನೋದಿ ಅರಗಿಸಿಕೊಂಡವನು ಪಂಡಿತನಾಗದಿರಲು ಶಕ್ಯವಿರಲಿಲ್ಲ. ಇಂತಹ ಪಂಡಿತರು ಅರೆಬೆಂದ ಪದವೀಧರರಿಗಿಂತ ಕಮ್ಮಿ ಸಂಬಳ ಪಡೆಯುತ್ತಿದ್ದ ದಿನಗಳಲ್ಲಿ ಅವರ ಕೆಲಸವನ್ನು ಅಪಮೌಲ್ಯ ಮಾಡುವ ಸಂದರ್ಭವಿತ್ತು. ನಿಜಕ್ಕೂ ಒಂದು ಭಾಷೆಯಲ್ಲಿ ಪ್ರಭುತ್ವ ಪಡೆಯಬೇಕಾದರೆ ಪ್ರಾಚೀನ ಸಾಹಿತ್ಯದ ಅಧ್ಯಯನವನ್ನು ಪರಂಪರೆಯ ಹಾದಿಯಲ್ಲಿ ಕಲಿಯುವುದು ಇಂದಿಗೂ ಶ್ರೇಯಸ್ಕರವೆಂದು ನಾನು ತಿಳಿಯುತ್ತೇನೆ. ನನ್ನ ಸ್ವಾನುಭವವನ್ನು ಇದಕ್ಕೋಸ್ಕರ ಪಣಹಚ್ಚಿ ಹೇಳಬಲ್ಲೆ.

## ಅಧ್ಯಾಯ ೭
## ಅರ್ಥಶಾಸ್ತ್ರಕ್ಕೆ ನೆಗೆದೆ

ಜೂನ್ ತಿಂಗಳಿನಲ್ಲಿ ಸಾಹಿತ್ಯ ಪಾಠಪ್ರವಚನವನ್ನು ಒಂದು ವಾರ ಮಾತ್ರ ಕೇಳಿ ಜುಲೈಗೆ ನಾನು ಅರ್ಥಶಾಸ್ತ್ರಕ್ಕೆ ವರ್ಗಾಯಿಸಿಕೊಂಡೆ. ಇದು ನನ್ನ ಸ್ವಂತ ನಿರ್ಣಯವಾಗಿರಲಿಲ್ಲ. ಬಿ.ಕೆ.ಸರ್ವೋತ್ತಮರಾಯರೆಂಬ ಹಿರಿಯ ಹಿತೈಷಿಯೊಬ್ಬರು ತಾವು ಸ್ವತಃ ಇಂಗ್ಲೀಷ್ ಪ್ರಾಧ್ಯಾಪಕರಾದರೂ ಭವಿಷ್ಯದ ಸಂಕೇತಗಳನ್ನು ಆಲಿಸಿ, 'ಮಾರಾಯ್ರೇ ಸಾಹಿತ್ಯ ಓದಿದರೆ ನನ್ನ ಹಾಗೆ ಬರೇ ಮಾಸ್ತ್ರಾಗಬೇಕು, ಇನ್ನು ನೋಡಿ ಇಕಾನಾಮಿಕ್ಸ್‌ಗೆ ಛಾನ್ಸ್ ಬರುತ್ತದೆ. ದೇಶ ಸ್ವತಂತ್ರವಾಗುತ್ತದೆ- ಕೂಡಲೇ ಅಭಿವೃದ್ಧಿಕಾರ್ಯ ಆರಂಭ, ನೂರಾರು ಅರ್ಥಶಾಸ್ತ್ರಜ್ಞರು ಸರ್ಕಾರಕ್ಕೆ ಬೇಕು. ನೀವು ಒಂದ್ಕೆಲಸ ಮಾಡಿ ಕ್ರಿಶ್ಚನ್‌ನಲ್ಲೇ ಅರ್ಥಶಾಸ್ತ್ರಕ್ಕೆ ವರ್ಗಾಯಿಸಿಕೊಳ್ಳಿ,' ಎಂದು ಸಲಹೆ ಮಾಡಿದರು. ನನ್ನ ಮಹಾತ್ವಾಕಾಂಕ್ಷೆಗೆ ಗರಿ ಮೂಡಿತು. ಕ್ರಿಶ್ಚನ್‌ನಲ್ಲಿ ಕೊಡುವುದಿಲ್ಲವಾದರೂ ಲೊಯೊಲಾಕ್ಕೆ ಹೋಗಿ ರೆ.ಫಾ. ಬಾಸ್ಸೆನಾಕ್ ಅವರನ್ನು ನೋಡಿದೆ. ಆಗಲಿಲ್ಲ. ನಿರಾಶೆಯಿಂದ ಮರಳಿ ಕ್ರಿಶ್ಚನ್‌ಗೆ ಬಂದೆ. ಸೋಮವಾರ ಸಾಹಿತ್ಯದ ವರ್ಗಕ್ಕೆ ಹೋಗಿ ಇನ್ನೇನು ಅಲ್ಲೇ ಬೇರುಬಿಡುತ್ತೇನೆ ಎಂದು ಕೊಂಡರೆ ನನ್ನ ಹಾಜರಿ ಕರೆಯಲಿಲ್ಲ. ಸಂಶಯ ಬಂದಿತು. ಗಂಟೆ ಆದಮೇಲೆ ಆಫೀಸಿಗೆ ಹೋಗಿ ವಿಚಾರಿಸಿದರೆ ನನ್ನ ವರ್ಗಾವಣೆ ಬೇಡಿಕೆಯನ್ನು ಕಾಲೇಜು ಮನ್ನಿಸಿ ನನಗೆ ಅರ್ಥಶಾಸ್ತ್ರವನ್ನು ಕೊಟ್ಟಿತ್ತು.

ಸ್ನಾತಕೋತ್ತರ ಹಂತದಲ್ಲಿ ಅರ್ಥಶಾಸ್ತ್ರ ಅಭ್ಯಾಸಮಾಡುವ ವಿದ್ಯಾರ್ಥಿಗೆ ನೀನು ಸ್ವಲ್ಪ ಸಾಹಿತ್ಯವನ್ನು ಓದಿಕೋ, ಅರ್ಥಶಾಸ್ತ್ರ ತನ್ನಷ್ಟಕ್ಕೆ ಬರುತ್ತದೆ ಎಂಬ ಉಪದೇಶವನ್ನು ಯಾರಾದರೂ ಮಾಡಿ

ಯಾರೆ? ಮಾಡಿದರೆ ಕೇಳಿಯಾರೆ? ಕೇಳಿದವನು ನಾನು. ಉಪದೇಶಿಸಿದವರು ಇತ್ತೀಚೆಗಷ್ಟೇ ನಮ್ಮನ್ನಗಲಿದ ಬಾಗಲೋಡಿ ದೇವರಾಯರು. ಡಾಸ್ಟೋವಸ್ಕಿ, ಕಾಸ್ಲರ್, ಬಾಲ್ಜಾಕ, ಅನಾತೋಲ್ ಫ್ರಾನ್ಸ್ ಕಾದಂಬರಿಗಳನ್ನು ಓದಿದ್ದರಿಂದ ನನ್ನ ಅರ್ಥಶಾಸ್ತ್ರದ ಚಿಂತನಕ್ಕೆ, ಅಭ್ಯಾಸಕ್ಕೆ ಯಾವುದೇ ಅಡೆತಡೆಆಗಲಿಲ್ಲ. ಬರವಣಿಗೆಯಂತೂ ಇನ್ನಷ್ಟು ಪುಷ್ಟವಾಯಿತು. ಎಂತಲೇ ಬಹುಶಃ ಪರೀಕ್ಷಕರು ಎಣಿಕೆಗೆ ಮೀರಿದ ಅಗ್ರಸ್ಥಾನವನ್ನು ನನಗೆ ಕಲ್ಪಿಸಿಕೊಟ್ಟರು.

ದೇವರಾಯರಿಗೂ ನನಗೂ ಮೂರು-ನಾಲ್ಕು ವರ್ಷ ಅಂತರ-ವಯಸ್ಸಿನ ಲೆಖ್ಖದಲ್ಲಿ. ಭಗವಂತ ದಯಪಾಲಿಸಿದ ಪ್ರತಿಭೆಯ ಲೆಕ್ಕದಲ್ಲಿ ಅಗಾಧ ಅಂತರವೆಂದರೆ ಅದು ಅತಿಶಯೋಕ್ತಿಯೂ ಅಲ್ಲ, ಕೀಳರಿಮೆಯೂ ಅಲ್ಲ. ಇದು ದೇವರಾಯರನ್ನು ಸಮೀಪದಿಂದ ಬಲ್ಲ ಇಷ್ಟ ಮಿತ್ರರು ನನ್ನಂಥವರು-ಬಂಧು ಬಳಗ ಇಷ್ಟೇ ಸೀಮಿತ ವಲಯದ ಜನಗಳ ಅರಿವಿನಲ್ಲಿರುತಿತ್ತು- ದೇವರಾಯರು ಅದೊಂದು ಶುಭ ಮುಹೂರ್ತದಲ್ಲಿ ಸಣ್ಣ ಕತೆಯ ಕ್ಷೇತ್ರವನ್ನು ಪ್ರವೇಶಿಸದಿದ್ದರೆ. ಭಾರತೀಯ ವಿದೇಶಾಂಗ ವ್ಯವಹಾರದಲ್ಲಿ ತನ್ನನ್ನು ತೊಡಗಿಸಿಕೊಂಡ ಕನ್ನಡದ ಈ ಒಂದು ವಿಶಿಷ್ಟ ಪ್ರತಿಭೆ ಅಂತರಂಗದ ಸಂಪುಟದಲ್ಲಿ ಕನ್ನಡ ಸಾಹಿತ್ಯ ರಚನೆಯ ಒಲವನ್ನು ಬಹುಕಾಲ ಸುಪ್ತವಾಗಿಸಿಕೊಂಡು ಇನ್ನೇನು ನಿವೃತ್ತಿಯಪರ್ವದಲ್ಲಿ ಅದಕ್ಕೆ ಪೂರ್ಣ ಅವಕಾಶ ಒದಗಿಸುವೆನೆಂದು ಪಣತೊಟ್ಟು ಕಾರ್ಯರಂಗಕ್ಕೆ ಇಳಿಯುತ್ತಿದ್ದಂತೆಯೇ ತೊಟ್ಟುಕಳಚಿಬಿದ್ದ ಹೂವಿನಂತಾದದ್ದು ಕನ್ನಡಿಗರ ದುರ್ದೈವ.

ದೇವರಾಯರ ಸಾಹಿತ್ಯೋಲ್ಲಾಸ, ಅವರ ಜೀವನ ಧರ್ಮವಾಯಿತು; ಜೀವನೋಲ್ಲಾಸವೂ ಆಯಿತು. ಕೂತು ವಿಚಾರ ಗೊಷ್ಠಿ ನಡೆಸುವುದು ಅವರಿಗೆ ಸ್ವಲ್ಪದೂರ. ಗುಡ್ಡ-ಬೆಟ್ಟಗಳನ್ನೇರುವುದು ಕಾಲೇಜು ದಿನಗಳಲ್ಲಿ ಅವರ ದೈನಂದಿನ ಕಾರ್ಯಕ್ರಮವೇ. ಇಲ್ಲೂ ದೇಹಕ್ಕೂ ಮನಸ್ಸಿಗೂ ಉಲ್ಲಾಸ ನೀಡುವ ಮಾತುಗಳ ಭರಾಟೆ, ಕುದಿಯುವ ಬಿಸಿಬಿಸಿ ಕಾಫಿಯನ್ನು ಕುಡಿದು, ನೋಡುವ ಬನ್ನಿ ಪಂಥಕ್ಕೆ ಎಂದು ಪಂಥಾಹ್ವಾನ. ತನ್ನ ನೀಲ ಉಗುರು ತೋರಿಸಿ ನಾನು ನರಸಿಂಹ ಎನ್ನುವರು. ತಾಂಬರಂನ ಎರಡು ಚಿಕ್ಕ ಗುಡ್ಡಗಳನ್ನು ವಾರಕ್ಕೆರಡು ಬಾರಿ ಏರಿ ಇಳಿಯುವಾಗ ಅಂಜನೇಯ. ಮೊತ್ತ ಮೊದಲ ನನ್ನ ತಿರುಪತಿಯಾತ್ರೆ ದೇವರಾಯರ ಜತೆಗೆ. ಬೆಟ್ಟ ಏರುವಾಗ ನಾವೆಲ್ಲ ದಾರಿಯಲ್ಲಿ ನಡೆದರೆ, ದೇವರಾಯರು ಕಣಿವೆಗೆ ಅಡ್ಡವಾಗಿ ಕಟ್ಟಿದ ಗೋಡೆಯ ಮೇಲೆ ಕೆಳಗಿನ ಪ್ರಪಾತದ ದೃಶ್ಯವನ್ನುದ್ದಕ್ಕೂ ಸವಿಯುವಂತೆ ಸರ್ಕಸ್ ಮಾಡುತ್ತ ಹೋಗುತ್ತಾರೆ. 'ಸ್ವಲ್ಪ ಇಳಿಯಿರಿ ಮಾರಾಯ್ರೇ, ಅಥವಾ ಮಾತಾದರೂ ನಿಲ್ಲಿಸಿ' ಎಂಬ ನಮ್ಮ ವಿನಂತಿಗೆ ಆಂಜನೇಯನ ಕಿವಿ ಕಿವುಡು!

ದೇವರಾಯರನ್ನು ಸಾಹಿತ್ಯ ರಚನೆಗೆ ಪ್ರಚೋದಿಸಿದ್ದು ಪೂಜ್ಯ ಮಾಸ್ತಿಯವರ ಆದೇಶ ಹಾಗೂ ಕ್ರಿಶ್ಚನ್ ಕಾಲೇಜಿನ ಕನ್ನಡಿಗ ಗೆಳೆಯರ ಗುಂಪು. ಅವರೊಳಗೂ ದೇವರಾಯರಿಗೆ ಸಮಕಾಲೀನವಾಗಿ, ನನಗೆ ಓರಗೆಯ ಸಹಪಾಠಿಗಳಾಗಿ ದೊರೆತು ಈಗ ಕಥೆಗಾರ-ಕಾದಂಬರಿಕಾರರೆಂದು ಪ್ರಸಿದ್ಧರಾದ ಸೇವ ನಮಿರಾಜಮಲ್ಲರ ಅಹರ್ನಿಶಿ ಕಥಾರಚನಾಕಾಯಕ. ದೇವರಾಯರ ಪ್ರಥಮ ಕಥೆ 'ಶುದ್ಧ ಘಟಿಂಗ' ಹುಟ್ಟುಕತೆಗಾರ ಮಾಸ್ತಿಯವರ ಮನಸೆಳೆಯಿತು. 'ಜೀವನ'ದಲ್ಲಿ ಪ್ರಕಟವೂ ಆಯಿತು. 'ಹುಚ್ಚುಮುನಸೀಫ ಮತ್ತು ಇತರ ಕತೆಗಳು' ಎಂಬ ಅವರ ಪ್ರಥಮ ಕಥಾ ಸಂಗ್ರಹದ ಪ್ರಕಟಣೆಯೂ ಮಾಸ್ತಿಯವರಿಂದಲೇ ಆಯಿತು. ತನಗೆ ಕಥೆಗಳನ್ನು ಬರೆಯುವುದರಲ್ಲಿ ಆತ್ಮವಿಶ್ವಾಸ ಮೂಡಿಸಿದವರು ಕರ್ನಾಟಕ ಸಾಹಿತ್ಯಕ್ಕೆ ತಿಲಕಪ್ರಾಯರಾದ ಪೂಜ್ಯ ಮಾಸ್ತಿಯವರು. ತಮ್ಮ ಹಿರಿತನದ ಕೃಪಾಛತ್ರದ ನೆರಳಿನಲ್ಲಿ ಕಿರಿಯರನ್ನು ಬರಮಾಡಿಸಿ ಸಾಹಿತ್ಯ ದೀಕ್ಷೆ ಕೊಡುತ್ತಿರುವುದು ಶ್ರೀನಿ

ವಾಸರ ಅನುಗ್ರಹ ಎಂದು ಅವರು ತಮ್ಮ ಎರಡನೇ ಕಥಾ ಸಂಗ್ರಹದ ಮುನ್ನುಡಿಯಲ್ಲಿ ವಿನೀತರಾಗಿ ಬರೆದಿದ್ದಾರೆ.

ಅವರ ಪ್ರಥಮ ಸಂಕಲನ ಪ್ರಕಟವಾದದ್ದು ೧೯೪೪ರಲ್ಲಿ. ಎರಡನೆಯ 'ಆರಾಧನಾ' ೧೯೫೪ರಲ್ಲಿ. ಈ ಐದು ವರ್ಷಗಳ ನಡುವೆ ದೇವರಾಯರ ಜೀವನದಲ್ಲಿ ಒಂದು ದೊಡ್ಡ ಕರಿನೆರಳು ಹಾದು ಹೋಯಿತು. ಅಖಿಲ ಭಾರತೀಯ ವಿದೇಶಾಂಗ ಸೇವಾ ಪರೀಕ್ಷೆಯಲ್ಲಿ ೮ನೇ ರ್‍ಯಾಂಕ್‌ನಲ್ಲಿ ತೇರ್ಗಡೆಹೊಂದಿ ಕೇಂಬ್ರಿಜ್‌ನಲ್ಲಿ ತರಬೇತಿ-ಶಿಕ್ಷಣ ಮುಗಿಸಿ, ಮಾಸ್ಕೋದಲ್ಲಿ ಪ್ರಥಮತಃ ಸೇವಾ ಸಚಿವನಾಗಿ ನೇಮಕಗೊಂಡ ಹೊತ್ತಿನಲ್ಲಿ ಅವರಿಗೆ ಅಸ್ಥಿ ಮೂಲದ ಒಂದು ಗಂಭೀರ ಕಾಯಿಲೆ ತಲೆದೋರಿತು. ಇದರಿಂದ ಐದು ವರ್ಷಗಳ ಕಾಲ ಬಳಲಿ ಬೆಂಡಾಗಿ, ಅಪಾರ ವೇದನೆಯನ್ನನುಭವಿಸಿದ ಬಳಿಕವೂ ಅವರು ಮರಳಿ ವಿದೇಶಾಂಗ ಸೇವೆಯ ಅರ್ಹತೆಗಳಿಸಿದ್ದು ನಿಜಕ್ಕೂ ಒಂದು ಪವಾಡ. ಈ ಕಾಯಿಲೆಯಿಂದ ತನಗೆ ಮುಕ್ತಿ ಹೇಗೆ, ತಾನು ಮರಳಿ ದೇಶಸೇವೆಗೆ ಅಣಿಯಾಗುವುದು ಹೇಗೆಂಬುದರ ಬಗ್ಗೆ ಮುಂಬಯಿಯ ಎರಡು ಮೂರು ಶುಶ್ರೂಷಾಲಯಗಳಲ್ಲಿ ಕೊನೇವರ್ಷ ಊರಿಗೆ ಮರಳಿದ ಮೇಲೂ ಕೂಡ ಚಿಂತೆ, ಚಿಂತನ, ಹೃದಯ ಮಂಥನ. ಆಸ್ಪತ್ರೆಯ ಹಾಸಿಗೆಯಲ್ಲೇ ನಾಲ್ಕು ವರ್ಷ ಪೂರ್ತಿ ಕಳೆದಾಗಲೂ ದೇವರಾಯರು ಧೃತಿಗೆಡದೆ ಅನೇಕ ಮಾನಸಿಕ ತುಮುಲಗಳಲ್ಲೂ ಸೋತು ಗೆದ್ದು, ಗೆದ್ದು ಸೋತು ಕೊನೆಗಂತೂ ವಿಮೋಚನೆ ಪಡೆದು, ಆರೋಗ್ಯವನ್ನು ಮರಳಿಸಂಪಾದಿಸಿ ಪೂರ್ವದ ಸೇವಾರಂಗವನ್ನು ಸೇರಿ, ದೇಹದ ದೌರ್ಬಲ್ಯಗಳನ್ನೂ ಗಮನಿಸದೆ ೩೦ ವರ್ಷಗಳ ವಿದೇಶ ಸೇವೆಯನ್ನು ನಾಡಿಗೆ ಒಪ್ಪಿಸಿ, ವಿಶ್ರಾಂತರಾದರು. ಅವರಿಗೇನೇ ಹಿನ್ನೋಟ ಬೀರಿದಾಗ ಅಚ್ಚರಿ ಎನಿಸೀತು. ದಾರುಣವಾದ ಕಾಯಿಲೆ ಮತ್ತು ಆರ್ಥಿಕ ತಾಪತ್ರಯಗಳು, ನಡುವೆ ಬಂಧು ಮಿತ್ರರ ಕೈಗೂಸಾಗಿ ಬದುಕುಳಿದ ತಾವು ಇನ್ನು ತನ್ನ ಶೇಷ ಜೀವನವನ್ನು ದೇಶಕ್ಕೆ ಮುಡಿಪಿಡಬೇಕೆಂಬ ಸರ್ವಾರ್ಪಣ ಬುದ್ಧಿಯಿಂದ ಕೆಲಸಮಾಡಿದರು. ಹೀಗೆ ಆಚೆ ಹೋಗಿ, ಈಚೆ ಬಂದ ತನ್ನ ಮೇಲೆ ಭಗವಂತನ ಕರುಣೆ ಇಲ್ಲದೆ ಹೋಗಿದ್ದರೆ ತನ್ನ ಉದ್ಧಾರ ಸಾಧ್ಯವೇ ಇಲ್ಲವೆಂದು ಸುಪ್ರೋತ್ಥಿತರಾದ ದೇವರಾಯರಲ್ಲಿ ಒಂದು ವಿಚಿತ್ರ ಮನಃಪರಿವರ್ತನೆ ಸಂಭವಿಸಿತು. ವಿಚಾರವಾದಿಗಳೂ ನಿರೀಶ್ವರವಾದಿಗಳೂ ಆಗಿದ್ದ ಅವರು ಕಟೀಲಿನ ದುರ್ಗಾಪರಮೇಶ್ವರಿಯ ಅಖಂಡ ಭಕ್ತರಾದರು! ಪರಮ ಭಾಗವತರಾದರು. ಆಸ್ತಿಕ್ಯವನ್ನು ಜೀವನದ ಒಂದು ಪ್ರಮುಖ ಅಂಗವಾಗಿ ಮಾಡಿಕೊಂಡರು. ಹಿಂದೆ ಬರೆದ ಕತೆಗಳಲ್ಲಿ ನಿರೀಶ್ವರವಾದದ ಛಾಯೆಕಂಡರೆ ಅದನ್ನು ತಿದ್ದಿ ಮರುಪ್ರಕಟನೆಗೆ ಅಳವಡಿಸಿದರು. 'ಆರಾಧನಾ' ಕಥಾಸಂಗ್ರಹದ ಮುನ್ನುಡಿಯಲ್ಲಿ ಅವರ ಅಂತರಂಗದ ಆತ್ಮಕಥನವಿದೆ.' ನಾನು ಹಿಂದಕ್ಕೆ ಬರೆದಾಗ ಅನಾತೋಲ್ ಫ್ರಾನ್ಸ್‌ನಂತೆಯೇ ಧರ್ಮ, ಭಕ್ತಿ ಭಾವಗಳ ಮೃದುವಾದ ಭರ್ತ್ಸನೆ ಮಾಡಿದ್ದೆ. ಆ ಕಾಲದಲ್ಲಿ ನಾನೂ ನಿರೀಶ್ವರವಾದಿ ಎಂದು ಒಣ ಜಂಭ ನಟಿಸುತ್ತಿದ್ದೆ. ಆದರೆ ಈಗ ಭಗವಂತನ ಮುನಿಸಿನ ಪೆಟ್ಟು ತಿಂದು ಹಣ್ಣಾಗಿ ದೇವರ ಭಯ ಉಂಟಾಗಿದೆ. ಜ್ಞಾನದ ಆರಂಭವೂ ಆಗಿದೆಯೋ ಏನೋ. ಆದುದರಿಂದ ಈ ಕಥೆಯ ತತ್ವವೇ ಬದಲಾಗಿದೆ ಎಂದು ಬರೆದರು. 'ಅನ್ಯಥಾ ಶರಣಂ ನಾಸ್ತಿ' ಎಂಬ ಪ್ರಾಮಾಣಿಕ ಭಾವುಕತನವನ್ನು ಬಾಳಿನ ಮಂತ್ರವಾಗಿ ಅಂಗೀಕರಿಸಿದ್ದರಿಂದ ಅವರ ಬಾಳಿಗೊಂದು ಹೊಸ ತಿರುವು ಮೂಡಿತು. ಎಲ್ಲಿಯವರೆಗೆಂದರೆ ವಾಚಕರನ್ನು ಕರೆದು ತನ್ನ ರಚನೆಯ ಆಧಾರವನ್ನು ಮನಗಾಣಲು ಒತ್ತಾಯಿಸುವತನಕವೂ. 'ಈ ಸಂಗ್ರಹದ ಕಥೆಗಳನ್ನು ಓದುಗರು ಆಳವಾದ ಭಾವದಿಂದ, ದಾರ್ಶನಿಕ ದೃಷ್ಟಿಯಿಂದ ವಿಚಾರದಿಂದ ಓದಿದರೆ ಕೃತಜ್ಞನಾಗುವೆನು. ನನ್ನ ಕಥೆಗಳೆಲ್ಲವೂ ದೇವರು, ಧರ್ಮ, ಮನುಷ್ಯ,

ಜೀವನ ಮತ್ತು ಮರಣ ಎಂಬ ಐದು ಪರಮ ತತ್ವಗಳ ಮೇಲೆನಿಂತಿರುವುವು ಎಂಬುದನ್ನು ದಯ ವಿಟ್ಟು ಓದುಗರು ಮನಗಾಣಬೇಕು' ಎಂದು ಅನುನಯ ಮಾಡುವ ನಿಲುಮೆಯ ತಳದಲ್ಲಿ ಐದು ವರ್ಷಗಳ ಕಾಲ ಸತತವಾಗಿ ತಾನುಂಡ ನೋವಿನ ಆಕ್ರಂದನ ವಿರುವುದನ್ನು ನಾವು ಗಮನಿಸಬೇಕಾಗು ತ್ತದೆ.

ಇಂಥ ಭಾವುಕಪರ್ವದಲ್ಲಿ ರಚಿತವಾದ, ತಿದ್ದು ಪಡಿಗೊಳಗಾದ ಕಥೆಗಳುಳ್ಳ 'ಆರಾಧನಾ' 'ಹುಚ್ಚು ಮುನಸೀಫ'ದಂತೆಯೇ ಕನ್ನಡ ಸಾಹಿತ್ಯದ ಒಂದು ಆಚಂದ್ರಾರ್ಕ ಕೃತಿಯೇ ಆಗಿದೆ....

ಪರೀಕ್ಷೆಗಳನ್ನು ಜೈಸುವ ಕಲೆ ಏನೋ ನನಗೆ ವಶವಾಗಿತ್ತು. ಆದರೆ ನಿಗದಿತ ಪುಸ್ತಕಗಳ ಪಠನ ಮಾತ್ರವೇ ಅದಕ್ಕೆ ಬೇಕಾದುದರಿಂದ ಓದುಗಾರಿಕೆ ಬೆಳೆಯಲಿಲ್ಲವಲ್ಲಾ ಎಂಬ ಚಿಂತೆಯನ್ನು ಕ್ರಿಶ್ಚನ್ ಕಾಲೇಜಿನ ಅವಧಿ ದೂರ ಮಾಡಿತು. ದೇವರಾ ಯರ ಉಪದೇಶದಂತೆ ಪ್ರಥಮ ವರ್ಷದಲ್ಲಿ ಅರ್ಥಶಾಸ್ತ್ರಕ್ಕಿಂತ ಹೆಚ್ಚು ಅಧ್ಯಯನ ವೇಳೆ ಕಾದಂ ಬರಿಗಳಿಗೇ ಮೀಸಲಿಟ್ಟೆ. ಮುಂದಿನೆರಡು ವರ್ಷಗ ಳಲ್ಲಿ ನಾನು ಕಲಿಯಲಾಶಿಸಿದ ಅರ್ಥಶಾಸ್ತ್ರದ ಅಧ್ಯಯನವನ್ನು ಏಕಾಗ್ರವಾಗಿ ಮಾಡಿ ಗುರಿತಲು ಪಿದೆ.

## ಅಧ್ಯಾಯ ೮
## ನನ್ನ ಸಾಹಿತ್ಯ ಜೀವನ

ಸಾಹಿತ್ಯದ ಅಭ್ಯಾಸದಿಂದಾಗಿ ಕನ್ನಡದಲ್ಲಿ ಬರೆ ಯಬೇಕೆಂಬ ಹಂಬಲ ಹುಟ್ಟಿತು. ಪ್ರಾಥಮಿಕ ಶಾಲೆಯ ಹಂತದಲ್ಲಿ ವಿದ್ಯಾರ್ಥಿಗಳು ತಯಾರಿ ಸುವ ಹಸ್ತಪತ್ರಿಕೆಗೆ ಬರೆಯುವುದರಿಂದ ಲೆಕ್ಕಣಿ ವ್ಯವಸಾಯಕ್ಕೆ ತೊಡಗಿದೆನೆಂದು ತೋರುತ್ತದೆ. ಬರವಣಿಗೆಯ ಹುಚ್ಚು ತುಂಬಿಸಿಕೊಳ್ಳಲು ಹಿಂದಿ ಯಿಂದ ಅನುವಾದ ಮಾಡುತ್ತಿದ್ದೆ. ಮೈಥಿಲೀಶ ರಣ ಗುಪ್ತರ 'ಸಾಕೇತ'ದಿಂದ ಅನುವಾದಿಸಿದ ಹತ್ತಾರು ಕವಿತೆಗಳನ್ನೂ 'ಜೀವನ' ಪತ್ರಿಕೆಯ ಮೊದಲ ಪುಟದಲ್ಲಿ ಮಾಸ್ತಿಯವರು ಪ್ರಕಟಿಸಿದಾಗ ತುಂಬ ಸಂತಸಗೊಂಡೆ. ಸೃಜನಶೀಲ ಕಥೆ-ಕವಿತೆ ಗಳ ಹಿಡಿತದಿಂದಲೂ ಅನುವಾದಗಳ ಆಕರ್ಷಣೆ ಯಿಂದಲೂ ಬಿಡಿಸಿಕೊಂಡು ನನ್ನತನವನ್ನು ನಾನು ಕಂಡುಕೊಳ್ಳಬೇಕಾದರೆ ಬಹಳ ಕಾಲ ಹಿಡಿಯಿತು.

ನನ್ನ ಪ್ರಥಮ ಪುಸ್ತಕ ಒಂದು ಅನುವಾದ- ಪ್ರೇಮಚಂದರ 'ಗಬನ್' ಕಾದಂಬರಿಗೆ 'ರಮಾ ನಾಥ್' ಎಂಬ ಹೆಸರು ಕೊಟ್ಟು ಧಾರವಾಡದ ಪ್ರತಿಭಾಗ್ರಂಥಮಾಲೆಯ ಮೂಲಕ ಪ್ರಕಟಿಸಿದ್ದು. ೧೯೪೩ರಲ್ಲಿ ಅನುವಾದಕ್ಕೆ ಅಪ್ಪಣೆಯನ್ನು ಪ್ರೇಮ ಚಂದ್ರರ ಪುತ್ರ ಶ್ರೀಪತರಾಯ್ ಅವರಿಂದ ತೆಗೆಸಿ ಕೊಟ್ಟವರು ಧಾರವಾಡದ ಗುರುನಾಥ್ ಜೋಶಿ ಯವರು. ಅಪ್ಪಣೆ ಸಿಕ್ಕಿದೆ, ಅನುವಾದವೂ ಆಗಿದೆ, ಕಾಗದದ ಅಭಾವವುಳ್ಳ ಈ ಯುದ್ಧಕಾಲದಲ್ಲಿ ಪ್ರಕಾಶಕರು ಯಾರು ಸಿಗುತ್ತಾರೆಂದು ಪರದಾಡು ತ್ತಿದ್ದಾಗ ಘಾಣೇಕರ ಅವರು ಧಾರವಾಡದಲ್ಲಿ ಇದಿರಾದರು-ಓದಿ ಬರೆಯುತ್ತೇನೆ ಎಂದವರು ಕೆಲವೇ ದಿನಗಳಲ್ಲಿ ನನಗೆ ೨೫ ರೂಪಾಯಿ ಮತ್ತು ೨೫ ಪ್ರತಿಗಳನ್ನು ಕೊಡುವ ವಾಗ್ದಾನದ ಮೇಲೆ ಪ್ರಕಟಿಸುವ ಹೊಣೆ ಹೊತ್ತರು. ನನ್ನ ಚೊಚ್ಚಲ ಕೃತಿಯಾದ್ದರಿಂದ ಅದು ಪ್ರಕಟವಾಗುವ ದಿನವನ್ನು ಇದಿರುನೋಡುತ್ತಿದ್ದೆ. ಮುಂಗಾಣ್ಕೆಯ ಒಂದು ಪ್ರತಿ ಬಂದಾಗ ಅದರಲ್ಲಿ ಸ್ವ-ನಾಮದ ಮುಂದು ಗಡೆ ಜಾಣ, ವಿಶಾರದ ಉಪಾಧಿಗಳನ್ನು ಸೇರಿಸಿ ಕೊಂಡುಬಿಟ್ಟಿದ್ದೆ. ಇದರಿಂದ ಪೂರ್ತಿ ಸಮಾಧಾ ನವಾಗಲಿಲ್ಲ. ನನ್ನ ಸಾಹಿತ್ಯ ಕೃಷಿಗೆ ಸ್ಫೂರ್ತಿ ದೊರೆತದ್ದು ಯಾತರಿಂದ ಎಂಬುದನ್ನು ನಿವೇದಿ ಸಿದರೆ ಈಗ ನನಗೇ ನಗು ಬರುತ್ತದೆ. ಕುವೆಂಪು ಅವರ 'ಸ್ವಾಮಿ ವಿವೇಕಾನಂದ' ಗ್ರಂಥದಲ್ಲಿ ಅವರು ಕೆ.ವಿ. ಪುಟ್ಟಪ್ಪ, ಎಂ. ಎ. ಅಂತ ಹೆಸರು ಹಾಕಿದ್ದರು ತಾನೇ- ಅಂಥ ಒಂದು ಎಂ.ಎ. ಎಂದಾದರೂ ನನ್ನ ಹೆಸರಿಗೆ ಜೋಡಿಸಿಕೊಳ್ಳಬೇಕು ಎಂಬುದೊಂದು ಬಾಲಿಶ ಆಸೆ. ಜತೆಗೇ ಅಂಥ

ಒಳ್ಳೆಯ ಗದ್ಯವನ್ನು ಬರೆಯಬೇಕು ಎಂಬುದೂ ಇತ್ತೆನ್ನಿ, ಅದಕ್ಕೋಸ್ಕರ ಹೆಣಗಲು ಸಿದ್ಧನಾಗಿದ್ದೆ. ಅನುವಾದ ಕಾರ್ಯ ಸುಲಭ. ಗುರುನಾಥ ಜೋಶಿಯವರು ಅದೆಷ್ಟೋ ಹಿಂದೀ ಬಂಗಾಲೀ ಕೃತಿಗಳನ್ನು ಅನುವಾದಿಸಿದ್ದರು. ಆದ್ದರಿಂದ ಅವರು ಹಾಕಿದ ಸುಲಭ ದಾರಿ ಹಿಡಿದೆ. 'ರಮಾನಾಥ'ವೇ 'ಚಂದ್ರಹಾರ' ಎಂಬ ಹೆಸರಲ್ಲಿ ಎರಡನೇ ಮುದ್ರಣವನ್ನೂ ಕಂಡಿತು. ಆದರೆ ಪ್ರಕಾಶಕರು ನನಗೆ ತಿಳಿಸಲೂ ಇಲ್ಲ, ಆ ಬಗ್ಗೆ ನನಗೇನನ್ನಾದರೂ ಸಲ್ಲಿಸುವುದು ಧರ್ಮವೆಂದು ಬಗೆಯಲೂ ಇಲ್ಲ. ನಾನೇ ಧಾರವಾಡದಲ್ಲಿ ಅವರ ಅಂಗಡಿಗೆ ಹೋದಾಗ 'ಏನು ಸ್ವಾಮಿ, ನನ್ನ ಕಾದಂಬರಿಗೆ ಬೇರೆ ಹೆಸರಿಟ್ಟಿದ್ದೀರಿ? ನನಗೊಂದು ಪ್ರತಿ ನೋಡಲಿಕ್ಕಾದರೂ ಕೊಡುತ್ತೀರಾ?' ಎಂದು ಕೇಳಿದೆ. ಪಿಟ್ಟೆನ್ನದೆ ದೇಶಾವರಿ ನಗೆ ನಕ್ಕೇ ಒಂದು ಪ್ರತಿ ದಯಪಾಲಿಸಿದರು.

'ಜೀವನ'ದಲ್ಲಿ ಮಾಸ್ತಿಯವರೇ ನನ್ನ ಕವಿತೆ (ಅನುವಾದ) ಪ್ರಕಟಿಸಿದರೆಂದ ಮೇಲೆ ಧೈರ್ಯ ಹೆಚ್ಚಿತು. ಧಾರವಾಡದಲ್ಲಿ ಪ್ರಕಟವಾಗುತ್ತಿದ್ದ 'ಜಯಂತಿ' ಮಾಸಪತ್ರಿಕೆಗೂ ಒಂದೆರಡು ಲೇಖನ ಕಳುಹಿಸಿದೆ. ಸಂಪಾದಕರು ವಾಪಸು ಮಾಡಿದರು. ಬರಿದೇ ವಾಪಸು ಮಾಡಲಿಲ್ಲ, ಒಂದು ಸಂಚಿಕೆಯಲ್ಲಿ ಈ ಕಥೆಯನ್ನು ಯಾಕೆ ವಾಪಸು ಮಾಡಿದೆ ಎಂದು ಕಿವಿಮಾತು ಅಂಕಣದಲ್ಲಿ ಬರೆದೇಬಿಟ್ಟರು. ಸಿಟ್ಟಾದೆ. ಅದೇ ಕಥೆಗೆ ಆಮೇಲೆ ಉಡುಪಿಯಲ್ಲಿ ಬಹುಮಾನ ಬಂದದ್ದು. ಹೀಚಿನಲ್ಲಿರುವ ಬರಹಗಾರರು ನಿರಾಶರಾಗಬಾರದು ತಾನೆ? ಯಾರೋ ಕೊಳ್ಳುತ್ತಾರೆ, ಯಾರೋ ಬಿಡುತ್ತಾರೆ, ಹೀಗೆ ಸ್ಥಿತಪ್ರಜ್ಞರಾಗಬೇಕು. ಜಿಲ್ಲೆಯಲ್ಲಿ ಬೇಕಾದಷ್ಟು ಪತ್ರಿಕೆಗಳಿದ್ದವು. ಅವುಗಳಲ್ಲಿ ಧಾರಾಳವಾಗಿ ಬರೆದೆ. ನನ್ನ ಅನೇಕ ಕಥೆ, ಕವಿತೆಗಳು ಪುಸ್ತಕ ರೂಪದಲ್ಲಿ ಹೊರಬಂದುವು. ವರ್ತಮಾನಕಾಲದ ನಾಲ್ವರು ಮಹಾನುಭಾವರು (ಜೀವನ ಚರಿತ್ರೆ,) ಯುಗವಾಣಿ', ಕಾಲವೇ ಬದಲಾಗಿದೆ (ಕಥೆ) ಘಂಟಮಾರ (ಕಾದಂಬರಿ ಅನುವಾದ) 'ಅಂತರಂಗ'ದ ಹೊನ್ನಯ್ಯ ಶೆಟ್ಟಿ ಅವರಿಂದ ಪ್ರಕಟವಾಯಿತು. ಅರ್ಥಶಾಸ್ತ್ರದ ಕುರಿತು ಒಂದು ಪಠ್ಯಪುಸ್ತಕ ಬರೆದು ಮದ್ರಾಸ್ ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿದಾಗ ಅದಕ್ಕೆ ಐನೂರು ರೂಪಾಯಿಗಳ ಬಹುಮಾನ ದೊರೆಯಿತು. ಸುಮಾರು ೨೫೦ ಪುಟಗಳ ಗ್ರಂಥವನ್ನು ಮೊದಲು ಮುದ್ರಿಸಲು ಯಾರೂ ಸಿಗಲಿಲ್ಲ. ನಂತರ 'ಕಾವ್ಯಾಲಯ'ದ ಚಿದಂಬರಂ ಪ್ರಕಟಿಸಿದರು. ಹೀಗಾಗಿ ನನ್ನ ಮೊದಲ ಗ್ರಂಥ ಧಾರವಾಡದಲ್ಲಿ, ಎರಡನೆಯದು ಹುಬ್ಬಳ್ಳಿಯಿಂದ, ಮೂರನೆಯ ಅರ್ಥಶಾಸ್ತ್ರ ಮೈಸೂರಿನಿಂದ ಪ್ರಕಟವಾದವು. ಉಡುಪಿಯಿಂದ ಪ್ರಕಟವಾಗುವುದರ ಜೊತೆಗೆ ನನ್ನ ಬರವಣಿಗೆಗಳಿಗೆ ಕರ್ನಾಟಕದ ಮುಖ್ಯ ಕೇಂದ್ರಗಳಲ್ಲೂ ಪ್ರಕಾಶಕರು ದೊರೆತದ್ದರಿಂದ ನನ್ನ ಬರವಣಿಗೆ ಬೇಗನೇ ದ.ಕ. ಜಿಲ್ಲೆಯ ಗಡಿದಾಟಲು ಅನುಕೂಲವಾಯಿತು. ಕನ್ನಡ ನವೋದಯ ಕಾಲದಲ್ಲಿ ನಮ್ಮ ಜಿಲ್ಲೆಯಲ್ಲಿ ಹಲವಾರು ಉತ್ತಮ ಲೇಖಕರು ಉದಯಿಸಿದರೂ ಅಖಿಲ ಕರ್ನಾಟಕ ಮಟ್ಟದಲ್ಲಿ ಪ್ರಚಾರ ಸರಿಯಾಗಿ ಸಿಗದಂತಾಗಿತ್ತು. ಶಿವರಾಮ ಕಾರಂತ, ಕಡೆಂಗೋಡ್ಲು ಮತ್ತು ಮುಳಿಯತಿಮ್ಮಪ್ಪಯ್ಯ ಇದಕ್ಕೆ ಹೊರತಾಗಿದ್ದರು.

'ಪ್ರಜಾತಂತ್ರದ ಹೆದ್ದಾರಿ' ಮತ್ತು 'ಏಶಿಯಾದ ಸಂಪತ್ತು' ಎಂಬ ನನ್ನ ಎರಡು ಶಾಸ್ತ್ರಗ್ರಂಥ ಪ್ರಕಟವಾಯಿತು. ಇದನ್ನು ಹೊನ್ನಯ್ಯ ಶೆಟ್ಟಿ ಮುದ್ದಾಗಿ ಮುದ್ರಿಸಿಕೊಟ್ಟಿದ್ದರು. 'ಏಶಿಯದ ಸಂಪತ್ತು' ಗ್ರಂಥಕ್ಕೆ ೧೨೦ ರೂಪಾಯಿಗಳ ನಗದು ಬಹುಮಾನ ಸಿಕ್ಕಿತು. ಅದನ್ನು ಆಗತಾನೇ ಹುಟ್ಟಿ ಬೆಳೆಯುತ್ತಿದ್ದ ನನ್ನ ಮಗು 'ಸುಜಾತ'ಳಿಗೆ ಒಂದು ಹವಳದ ಹಾರಕ್ಕೆ ವೆಚ್ಚ ಮಾಡಿದೆ. ನನ್ನ ಸ್ವಂತದ ಸಂಪಾದನೆಯಿಂದ ಮಾಡಿದ ಚಿನ್ನವೆಂದು ಅದಕ್ಕೆ ಸುವಾಸನೆಕೂಡಿಸಿದ ಹಾಗಾಯಿತು. ಇತ್ತೀಚಿಗೆ ಬಹುಮಾನ ಹಿಡಿದು ಹಿಡಿದು ಕೈ ಜಡ್ಡಾಗಿದ್ದರೂ ಅವತ್ತಿನ ಆ ೧೨೦ ರೂಪಾಯಿ ಮತ್ತು ಅದರ

ಸುಯೋಗ್ಯ ಬಳಿಕ ಮರೆಯಲಾಗದ ಅನುಭವವೇ ಸರಿ!

ಎಂ.ಜಿ.ಎಂ. ಕಾಲೇಜಿನಲ್ಲಿ ಉದ್ಯೋಗಕ್ಕೆ ಸೇರಿದ ಬಳಿಕ ನನ್ನ ಸಾಹಿತ್ಯ ಕಾಯಕ ಇನ್ನಷ್ಟು ಪುಟಗೊಂಡಿತು. ಸ್ವಂತ ರಚನೆಗಿಂತ ಹೆಚ್ಚು ಸಾಹಿತ್ಯ ಸಂಘಟನೆಗೆ ಮನ ಒಲಿಯಿತು.

'ಉದಯವಾಣಿ' ದಿನಪತ್ರಿಕೆ ೧೯೭೦ರಲ್ಲಿ ಪ್ರಕಟವಾಗದಿರುತ್ತಿದ್ದರೆ ನನ್ನ ಲೇಖನಿ ಮರುಹುಟ್ಟು ಪಡೆಯುತ್ತಿರಲಿಲ್ಲ. ಅದರ 'ಲೋಕಾಭಿರಾಮ' ಅಂಕಣವನ್ನು ಅಂದಿನಿಂದ ಇಂದಿನವರೆಗೂ ನಡೆಸಿಕೊಂಡು ಬಂದಿದ್ದೇನೆ. ಇದರಲ್ಲಿರುವುದು ನನ್ನದೇ ಸ್ವಗತ ಶೈಲಿ. ರಾಜಕೀಯವಾಗಿ ತಟಸ್ಥನೀತಿ ನನ್ನದು. ಈ ಅಂಕಣದ ಮಟ್ಟಿಗೆ ರಾಜಕೀಯದ ಸಂಗತಿಗಳನ್ನು ಕಡಿಮೆಮಾಡಿದ್ದೇನೆ. ಈ ದೇಶದಲ್ಲಿ ರಾಜಕೀಯ ಇದೇ ರೀತಿ ಮುಂದುವರಿದರೆ ಭಾರತದೇಶವೆಂಬುದು ಉಳಿಯುವುದಿಲ್ಲ. ಇದನ್ನು ಉದ್ಧರಿಸಲು ಹತ್ತನೆ ಅವತಾರದಿಂದಲೂ ಅಸಾಧ್ಯ ಎಂಬುದು ನನ್ನ ನಂಬಿಕೆ. ಆದ್ದರಿಂದ ಜೀವನದ ಚಿಲ್ಲರೆ ಆದರೂ ಸ್ವಾರಸ್ಯಕರ ವಿಷಯಗಳನ್ನೇ ಎತ್ತಿಕೊಂಡು ಬರೆಯುತ್ತೇನೆ.

ನನ್ನ ಮೊತ್ತ ಮೊದಲ ಪ್ರವಾಸಕಥನ 'ಇತಾಲಿಯ- ನಾನು ಕಂಡಂತೆ' ಉದಯವಾಣಿಗಿಂತಲೂ ಪೂರ್ವಕಾಲದ ಪ್ರಕಟನೆ. ಮಣಿಪಾಲ ಪವರ್ ಪ್ರೆಸ್ಸಿನಲ್ಲಿ ಸುಂದರವಾಗಿ ಮುದ್ರಣಗೊಂಡಿತು. ವಿಶ್ವಕನ್ನಡ ಸಮ್ಮೇಳನದಲ್ಲಿ ಐದು ಸಾವಿರ ಪ್ರತಿಗಳ ಮಾರಾಟಕ್ಕೆ ಅರ್ಹವೆಂದು ಪರಿಗಣಿತವಾಯಿತು.

ಮುಂದಿನ ಮೂರು ಪ್ರವಾಸ ಕಥನಗಳಿಗೆ 'ಉದಯವಾಣಿ'ಯೇ ಕಾರಣ. ಯಕ್ಷಗಾನ ಸಹಿತವಾದ ನನ್ನ ಎರಡು ವಿದೇಶ ಸಂಚಾರ 'ಜಗದಗಲ' ಮತ್ತು 'ಒಮ್ಮೆ ರಶಿಯಾ, ಇನ್ನೊಮ್ಮೆ ಇತಾಲಿಯಾ' ಎಂಬ ಹೆಸರಿನಲ್ಲಿ ಪ್ರಕಟವಾದದ್ದನ್ನು ಕನ್ನಡ ವಿಮರ್ಶಕರು ಗಮನಿಸಿದ್ದಾರೆ. ಆಮೇಲೆ ಪ್ರಕಟವಾದದ್ದು ಯಕ್ಷಗಾನವಿಲ್ಲದ ನನ್ನ ಸ್ವಂತ ಯಾತ್ರೆ. 'ಜಗದಗಲ'

ಮರೀಚಿಕೆ

ಹರೆಯುವ
ಹಿಂಬಾಲಿಸಿ
ಹೋಗದಿರು
ಹೃದಯವೇ....

ನಿನಗೆ
ನೋವಲ್ಲದೆ
ಮತ್ತೇನೂ
ಸಿಗಲಾರದು !

● ಶಿವಾನಂದ ಕೂಡಗಿ

ಕರ್ನಾಟಕದ ಮೂರು ವಿಶ್ವವಿದ್ಯಾಲಯಗಳಲ್ಲೂ ಕೇರಳ ವಿಶ್ವವಿದ್ಯಾಲಯದಲ್ಲೂ ವಿದ್ಯಾರ್ಥಿಗಳಿಗೆ ಕಡ್ಡಾಯವಾದ್ದರಿಂದ ಗ್ರಂಥವರಮಾನವು ನನಗೊಂದಿಷ್ಟು ಬರುವಂತಾಯಿತು. ನನ್ನ ಪ್ರವಾಸ ಕಥನಗಳಲ್ಲಿ ನಾಲ್ಕನೆಯದೆನಿಸುವ 'ರಂಗಾಯನ' ಇತಾಲಿಯಾದ ಮೂರನೇ ಯಾತ್ರೆಯನ್ನೂ ಫಿನ್ಲೆಂಡ್ ಹಾಲೆಂಡ್‌ಗಳ ಪ್ರಥಮ ಸಂದರ್ಶನವನ್ನೂ ಒಳಗೊಂಡಿದೆ.

ನನ್ನ ಸಾಹಿತ್ಯಾಸಕ್ತಿ ಪುಸ್ತಕದ ಗೀಳಿಗೆ ಮಾತ್ರವೇ ಸೀಮಿತವಾದುದಲ್ಲ. ರಚಕರಾದ ಸಾಹಿತಿಗಳು ನನ್ನ ಒಂದು ಮುಖ್ಯ ಆಕರ್ಷಣೆ. ಶಿವರಾಮಕಾರಂತರು, ಬೇಂದ್ರೆ, ಅನಕೃ, ದ.ಬಾ., ಮೂರ್ತಿರಾವು, ಕಡೆಂಗೋಡ್ಲು, ನೆಗಳೂರು, ಗೋಕಾಕ, ವಿ.ಸೀ., ಗೊರೂರು, ಪುತಿನ, ಜೋಶಿ, ಶಂ.ಬಾ., ಕಾರ್ನಾಡ್, ಬಿ.ವಿ.ಕಾರಂತ್ ಇವರುಗಳಿಗೆಲ್ಲ ನಮ್ಮ ಮನೆ ಎಂದರೆ ಉಡುಪಿಯ ಸ್ವಾಗತದ ಹೆಬ್ಬಾಗಿಲಾಯಿತು.

ಬೇಂದ್ರೆಯವರ ಕಾವ್ಯಗಳನ್ನು ಮನಸಾರೆ, ಶಿರಸಾ ಒಪ್ಪಿಕೊಂಡ ಹಲವಾರು ಭಾವುಕರಲ್ಲಿ ಉಡುಪಿಯ ಬನ್ನಂಜೆ, ನಿಡಂಬೂರು, ಶ್ರೀಶ ಮತ್ತು ನಾನೆಂಬುದು ಬೇಂದ್ರೆಯವರಿಗೆ ಹೃದ್ಗತವಾಗಿತ್ತು. ೧೯೭೦ರಲ್ಲಿ ಅವರಿಗೆ ದಕ್ಷಿಣಕನ್ನಡದ ಹತ್ತುಕಡೆ ಉಪನ್ಯಾಸಕ್ಕೆ ಕರೆದು ಯಾವುದೇ 'ಕಟಿಪಿಟಿ' ಇಲ್ಲದಂಥ ಒಂದು 'ಜ್ಞಾನಸತ್ರ' ಏರ್ಪಡಿಸಿದಾಗ ಅವರು ನಮ್ಮ ಮನೆಯಲ್ಲಿ ಬೆಳದಿಂಗಳೂಟದ ನಡುವೆ ಆಡಿದ ಮಾತುಗಳನ್ನು 'ಮಾತೆಲ್ಲ ಜ್ಯೋತಿ' ಎಂಬ ಹೆಸರಿನಲ್ಲಿ ನಾನೇ ಪ್ರಕಟಿಸಿದ ಅವರ ಗ್ರಂಥದಿಂದ ಉದ್ಧರಿಸುತ್ತೇನೆ:

"ಹರಿದಾಸಭಟ್ಟರನ್ನು ಇದಕ್ಕೂ ಬಹಳ ತರುಣ ಇದ್ದಾಗ ನಾನು ನೋಡಿದೆ. ಅಂದಿನಿಂದ ವಯಸ್ಸಾಗಿದೆ, ಆದರೆ ಹುಮ್ಮಸ್ಸು ಕಡಿಮೆ ಆಗಲಿಲ್ಲ. ಅವರಿಗೆ ಹೆಚ್ಚುತ್ತಲೇ ಇದೆ....

"ಹರಿದಾಸಭಟ್ಟರು ಕಳೆದ ಹತ್ತು ದಿವಸಗಳಲ್ಲಿ ನನ್ನನ್ನು ಈ ಪ್ರದೇಶದ ಯಾವುದೋ ಊರಿಗೆ ಅಡ್ಡಾಡಿಸಿದರು. ಹೀಗೆ ೧೯೩೦ರಲ್ಲಿ ಮಾಸ್ತಿ ವೆಂಕಟೇಶ ಅಯ್ಯಂಗಾರರ ಜತೆಗೆ ನಾನು ಅಡ್ಡಾಡಿದ್ದುಂಟು..... ಹಾಗೆ ಹರಿದಾಸಭಟ್ಟರೂ ಇಲ್ಲಿ ನನ್ನನ್ನು ಅಡ್ಡಾಡಿಸಿದರು..."

೧೯೭೮ರಲ್ಲಿ ಡಾ. ಮಾಧವ ಪೈ ಅವರ ೮೦ನೇ ಹುಟ್ಟುಹಬ್ಬ. ಅಂದು ಬೇಂದ್ರೆ ಅವರನ್ನು ಉತ್ಸವದಲ್ಲಿ ಸೇರಿಸಿ, ಪೈ ಕೈ ಯಿಂದ 'ಕರ್ನಾಟಕದ ಸೃಷ್ಟಿ ಶಕ್ತಿಯ ಪ್ರತಿನಿಧಿ' ಎಂದು ಒಂದು ಸುವರ್ಣ ಪದಕ ಕೊಡಿಸಿದೆ. ಡಾ. ಪೈ ತಾವೂ ಕವಿವಂದನೆ ಮಾಡಿ ಧನ್ಯರಾದರು. ಅದು ಬೇಂದ್ರೆಯವರ ಉಡುಪಿಯ ಕೊನೆಯ ಭೆಟ್ಟಿಯಾಗಿತ್ತು. ಅಂದಿನ ಅವರ ಉಪನ್ಯಾಸಕ್ಕೆ ಶ್ರುತಿ ಕೂಡಲಿಲ್ಲ. ಸಭಾನಂತರ ಊಟದ ಹೊತ್ತಿನಲ್ಲಂತೂ ಕರ್ನಾಟಕ ವಿ.ವಿ. ನಿಲಯದ ಡಾ. ದಾ. ಚಿಂ.ಪಾವಟೆಯವರ ಮೇಲೆ ಹೆಬ್ಬುಲಿಯಂತೆ ಎರಗಿಬಿಟ್ಟರು. ಪಾಪ ಪಾವಟೆ ಅವರು "ಏನು ಮಹಾಕವಿಗಳೇ" ಎಂದು ವಿನಯದಿಂದ ಸಂಬೋಧನೆ ಮಾಡಿದ್ದೇ ತಡ, "ಏನ್ರಿ, ನಾನು ಮಹಾಕವಿ ಅಂತ ತಿಳೀಬೇಕಾದರೆ ಇಷ್ಟು ದೂರ ನೀವು ಬರಬೇಕಾಗಿತ್ತಾ? ಧಾರವಾಡದಲ್ಲಿ ಇದು ತೀಳೀಲಿಲ್ಲವೇ?" ಎಂದು ಕೆಂಡ ಕಾರಿದರು. ಅವರಿಬ್ಬರನ್ನೂ ಬೇರ್ಪಡಿಸುವುದೇ ಒಂದು ಪ್ರಯಾಸವಾಯಿತು. ಇಂಥ ವಿಕ್ಷಿಪ್ತ ಪ್ರಸಂಗಗಳನ್ನು ಸಹಿಸಿಕೊಳ್ಳದೆ ಬೇಂದ್ರೆ ಪ್ರವಾಸ ಪೂರ್ಣವಾಗದೆಂದು ನನಗೆ ಮೊದಲೇ ತಿಳಿದಿತ್ತು.

ಮರುದಿನ ಧಾರವಾಡಕ್ಕೆ ಮರುಪ್ರಯಾಣದ ವೇಳೆ ಸನ್ನಿಹಿತವಾಗಿದೆ. 'ಕಾರು ಸಿದ್ಧವಾಗಿದೆ' ಎಂದು ಕರೆದು ಹೇಳಿದೆ. ಮಂಚದ ಮೇಲೆ ಸುಖಾಸೀನರಾಗಿದ್ದ ಬೇಂದ್ರೆ, 'ಇಲ್ಲಿ ಬನ್ನಿ. ನಿಮಗೊಂದು ಮಾತು ಹೇಳಲಿಕ್ಕಿದೆ,' ಎಂದರು. ಸಮೀಪ ಹೋಗಿ ನಿಂತೆ. "ನಾನು ಈ ಸಾರಿ ನಿಮಗೆ ತುಂಬ ತೊಂದರೆ ಕೊಟ್ಟೆ ಅಲ್ಲವೇ? ನೋಡಿ, ಈಗ ನಾನಿರೋದೇ ಹೀಗೆ" ಎಂದು ಪಶ್ಚಾತ್ತಾಪಪಡುವ ದನಿಯಲ್ಲಿ ಹೇಳಿದಾಗ ನನಗೆ ಅಳುವಂತಾಯಿತು.

ವರ್ಷಕ್ಕೊಂದು ಸಲವಾದರೂ ನಾನು ನೋಡಿಯೇ ನೋಡುತ್ತಿದ್ದ ಸಾಹಿತಿಗಳೆಂದರೆ ವಿ.ಸೀ. ಮತ್ತು ಡಿ.ವಿ.ಜಿ.. ಅವರಂತೂ ನಮ್ಮ ಬಳಗದಂತೆ ಆಗಿದ್ದರು.....

ಧಾರವಾಡದ ಶಂ.ಬಾ. ಜೋಶಿ ಡಿ.ವಿ.ಜಿ.ಯವರಂತೆ ನನಗೆ ಆರಾಧ್ಯರು. ಅವರನ್ನು ಕುರಿತು 'ಕನ್ನಡವನ್ನು ಕಟ್ಟಿದವರು' ಗ್ರಂಥದಲ್ಲಿ ಪ್ರಸ್ತಾಪಿಸಿದ್ದೇನೆ.

ಎಳವೆಯಿಂದಲೂ ನಾನೇ ನಾನಾಗಿ ಅಥವಾ ಪರವೂರಿನಿಂದ ಬಂದ ಮಿತ್ರರೊಡಗೂಡಿ ತಪ್ಪದೆ ಹೋಗುತ್ತಿದ್ದ ಒಂದು ಸ್ಥಳ, ಮಂಜೇಶ್ವರವೆಂಬ ಗೋವಿಂದ ಪೈ ತೀರ್ಥಕ್ಷೇತ್ರ... ಗೋವಿಂದ ಪೈ ನಿಧನಾನಂತರ ಅವರ ಸಮೃದ್ಧ ಗ್ರಂಥಾಲಯಕ್ಕೆ ಎಂ.ಜಿ.ಎಂ. ಕಾಲೇಜು ಉತ್ತರಾಧಿಕಾರಿಯಾಯಿತು. ಗೋವಿಂದ ಪೈ ಸಂಶೋಧನ ಕೇಂದ್ರ ಉಡುಪಿಯಲ್ಲಿ ಅವರ ಸ್ಮಾರಕವಾಗಿ ಎದ್ದು ನಿಂತಿದೆ. ಮಂಜೇಶ್ವರದ ಕವಿಗೃಹ ಸಂರಕ್ಷಣೆಯ ಸಮಿತಿಯಲ್ಲಿಯೂ ನಾನು ಕೆಲಸ ಮಾಡುವ ಪ್ರಸಂಗ ಬಂದಿದೆ.

ಶಿವರಾಮ ಕಾರಂತರ ವ್ಯಕ್ತಿತ್ವ ಪರಿಚಯ ಅಗುವುದಕ್ಕೆ ಮೊದಲೇ, ನಿಕಟತೆಗೆ ಮೊದಲೇ ಸಾಹಿತ್ಯದ ಮೂಲಕ ಅವರ ಅಪ್ರತಿಮ ಪ್ರತಿಭೆಗೆ ಮಾರುಹೋದ ನಾನು, ಆಮೇಲೆ ಅವರ ನಿಕಟ ವರ್ತಿಯೂ ಆದೆ....

ಕಾರಂತ ಸಾಹಿತ್ಯದ ಅಭ್ಯಾಸದ ಜತೆಗೆ ಅವರ ಪರಿಚಯ ಮತ್ತು ಬಾಂಧವ್ಯಗಳು ಈ ಮೂವತ್ತು ವರ್ಷದಿಂದ ಬೆಳೆದು ಬಂದುವು. ಕರಾವಳಿಯ ಯಕ್ಷಗಾನವನ್ನು ಗಡಿದಾಟಿಸಿ (೧೯೭೫-೭೮ ಈ ಮೂರು ವರ್ಷಗಳಲ್ಲಿ) ಅಖಿಲ ಭಾರತಕ್ಕೂ ವಿಶ್ವಕ್ಕೂ (೧೯೭೯-೮೨) ಪರಿಚಯಿಸಿಕೊಡುವಲ್ಲಿ ನಾನು ಮಾಡಿದ ಸಂಘಟನಾ ಕಾರ್ಯಗಳನ್ನು ನನ್ನ ಪ್ರವಾಸ ಕಥನದಲ್ಲಿ ವಿಶದೀಕರಿಸಿದ್ದೇನೆ. ಕಾರಂತರಿಗೆ ಜ್ಞಾನಪೀಠ ಪ್ರಶಸ್ತಿ ಬಂದಾಗ ವೀಕ್ಲಿಗೆ ಅವರನ್ನು ಸಂದರ್ಶಿಸಿ ಬರೆಯಬೇಕಾಯಿತು. ಅವರ ಜ್ಞಾನಪೀಠ ಉಪರಾಂತ ಭಾಷಣಗಳು ಕರ್ನಾಟಕದ ಒಳಗೂ ಮುಂಬಯಿ-ಸೌರಾಷ್ಟ್ರಗಳಲ್ಲೂ ನಡೆದಾಗ ನಾನೋ ನನ್ನ ಸಿಬ್ಬಂದಿಯೋ ಅವರ ಜೊತೆ ಹೋಗಿ ಸುಮಾರು ೨೫ ಭಾಷಣಗಳನ್ನು ಧ್ವನಿ ಸುರುಳಿಯಲ್ಲಿ ಸಂಗ್ರಹಿಸಿಕೊಂಡಿದ್ದೇವೆ. ಈ ಭಾಷಣಗಳಲ್ಲಿ ಹಲವನ್ನು ಇನ್ನೂ ಲಿಪೀಕರಿಸಲು ನಮ್ಮಿಂದ ಆಗಿಲ್ಲ. ಪೂರ್ತಿ ಆದರೆ ಒಂದು ಒಳ್ಳೆಯ ಉಪನ್ಯಾಸ ಮಾಲಿಕೆ ಕನ್ನಡಕ್ಕೆ ದೊರೆತೀತು.

ಮಾಸ್ತಿಯವರನ್ನು ಅವರು ಪರಿಷತ್ತಿನ ಅಧ್ಯಕ್ಷರಾದಲಾಗಾಯಿತು ಬಲ್ಲೆನಾದರೂ ಅವರ ಸಾಮೀಪ್ಯ ಕಡಿಮೆ....

ಎ.ಎನ್. ಮೂರ್ತಿರಾಯರ ವ್ಯಕ್ತಿತ್ವ ನನಗೆ ಬಲು ಇಷ್ಟ..... ಕಡೆಂಗೋಡ್ಲು ಶಂಕರಭಟ್ಟರು ನನ್ನ ಪ್ರಿಯ ಲೇಖಕರು. 'ರಾಷ್ಟ್ರಬಂಧು'ವಿನ ಸಂಪಾದಕ, ಕೆಲಕಾಲ ಕಳೆದು 'ರಾಷ್ಟ್ರಮತ'ದ ಸಂಪಾದಕರಾದರು. ನಾನು ಉಡುಪಿಯಲ್ಲಿ ಕಾಲೇಜು ಸೇರಿದ ಬಳಿಕ ಒಂದು ಬಾರಿ 'ರಾಷ್ಟ್ರಮತ'ದ ವಾರ್ಷಿಕ ವಿಶೇಷಾಂಕಕ್ಕೆ ನನ್ನನ್ನು ಅತಿಥಿ ಸಂಪಾದಕನಾಗಲು ಕರೆಕೊಟ್ಟರು. ನಾನು ಅವರಿಗಾಗಿ ಒಂದು ಸಂಚಿಕೆ ಹೊರತಂದೆ. ಕಡೆಂಗೋಡ್ಲು ಜತೆಗೇ ನೆನಪಿಗೆ ಬರುವ ವ್ಯಕ್ತಿ ಇನ್ನೂ ಭಾಗ್ಯವಶಾತ್ ನಮ್ಮೊಂದಿಗಿರುವ ಸೇಡಿಯಾಪು ಕೃಷ್ಣಭಟ್ಟರು.

ಗಮುಗಿಗೂ ನನಗೂ ನನ್ನ ಆಯುಷ್ಯದ ಮೊದಲ ವರ್ಷದಿಂದಲೇ ಸಂಬಂಧ ಕಲ್ಪಿತವಾದ್ದರಿಂದ ಧಾರವಾಡ ನನಗೆ ತೀರ ಸಮೀಪದ ಊರಾಯಿತು. ಕರ್ನಾಟಕದ ಸಾಹಿತ್ಯ ಇತಿಹಾಸದಲ್ಲಿ ಮಹತ್ವದ ಪಾತ್ರವಹಿಸಿದ ಮೂರು ವಲಯಗಳಲ್ಲ ಧಾರವಾಡವೂ ಒಂದಷ್ಟೇ? (ಮೈಸೂರು ಮತ್ತು ಮಂಗಳೂರು ಉಳಿದೆರಡು) ಸ್ವಾತಂತ್ರ್ಯ ಚಳವಳಿಯ ಕಾಲದಿಂದ ಧಾರವಾಡ ಹೋರಾಟಕ್ಕೆ ಹೆಸರು ಪಡೆದಿತ್ತು. ಆಲೂರು ವೆಂಕಟರಾಯರು, ಮುದವೀಡು ಕೃಷ್ಣರಾಯರಂಥ ಸಾಹಿತಿಗಳನ್ನ ವಾಗ್ಮಿಗಳನ್ನೂ ಕನ್ನಡಕ್ಕೆ ಅರ್ಪಿಸಿತು. ಅದೇ ಕಾಲಕ್ಕೆ ಶಂಬಾ, ಬೇಂದ್ರೆ ಧಾರವಾಡವನ್ನು ಕರ್ನಾಟಕದ ಸಾಹಿತ್ಯ ನಕ್ಷೆಯಲ್ಲಿ ಢಾಳಾಗಿ ನಿಲ್ಲಿಸಿದರು. ಶ್ರೀರಂಗ, ವಿ.ಕೃ.ಗೋಕಾಕರು, ವಿ.ಎಂ.ಇನಾಂದಾರರು ಪರಿಚಯಕ್ಕೆ ಬಂದರು. ನನ್ನ ವಯಸ್ಸಿನವರೇ ಆದ 'ಎನ್ಕೆ' ಮತ್ತು ದ.ಬಾ. ಕುಲಕರ್ಣಿ ಅವರ ಸ್ನೇಹ ಲಭಿಸಿತು.

ನನ್ನ ಧಾರವಾಡದ ಗೆಳೆಯರಲ್ಲಿ ಹೆಚ್ಚಾಗಿ

ನಪಿಗೆ ಬರುವವವರೆಂದರೆ ನನ್ನ ಓರಗೆಯ .ಬಾ. ಕುಲಕರ್ಣಿ.... ಮುದ್ದಣನಂತೆ 'ದ.ಬಾ.' ಡ ಸಂಪತ್ತಿನ ಶತ್ರುವಾಗಿಯೇ ದಿನ ಕಳೆದರು. ಧಿವಶವಾದ ಅವರ ಭಗ್ನ ಸ್ನೇಹದ ವೇದನೆ ಗಲೂ ನನ್ನನ್ನು ಬಾಧಿಸುತ್ತಿದೆ. ಮನೋಹರಗ್ರಂಥಮಾಲೆಯ ಜಿ.ಬಿ. ಜೋಶಿ ಅವರ ಸಂಪರ್ಕ ಕೂಡ ಹೆಚ್ಚು ನಿಕಟವಾಗಿತ್ತು.

ಧಾರವಾಡದ ವಿದ್ಯಾವರ್ಧಕ ಸಂಘದ ಉಚ್ಛ್ರಾಯಸ್ಥಿತಿಯನ್ನು ಕಂಡವನಲ್ಲವಾದರೂ ಅದೊಂದು ಘಟ್ಟದಲ್ಲಿ (೧೯೫೩) ಅಲ್ಲಿ ಶ್ರೀರಂಗ, ನೆಗಳೂರು, ವರದರಾಜ ಹುಯಿಲಗೋಳ, ಎನ್ಕೆ ಮೊದಲಾದವರು ಹಮ್ಮಿಕೊಂಡ ಒಂದು 'ಚಿಂತನ ವೇದಿಕೆ'ಯಲ್ಲಿ ನಾನು ಭಾಗವಹಿಸಿದ್ದು ನೆನಪಾಗುತ್ತದೆ. ನನ್ನನ್ನು ಉಡುಪಿಯ ಒಬ್ಬ ಕಿರಿಯ ಸಾಹಿತಿ ಎಂದು ದ.ಬಾ. ಪರಿಚಯಿಸಿದರು. ಶ್ರೀರಂಗರ ಪರಿಚಯ ಆನಂತರ ಬೇರೆ ಬೇರೆ ಕಡೆಗಳಲ್ಲಿ ಆಗುತ್ತಲೇ ಇತ್ತು.

'ಪ್ರಪಂಚ'ದ ಪಾಪು ನನ್ನ ಸಾಹಿತ್ಯ ಜೀವನದಲ್ಲಿ ಧಾರವಾಡದ ಒಂದು ಸ್ನೇಹಸೇತುವೆ ಆಗಿದ್ದರು. ಅವರ 'ಪ್ರಪಂಚ'ದ ಬರವಣಿಗೆಗಳಿಗೆ ಮಾರುಹೋಗಿದ್ದೆ.

ಧಾರವಾಡದ ಸೀಮೆಯಿಂದ ಉಡುಪಿಗೆ ಬಂದು- ಹಾಗೆ ಬಂದ ಮೇಲೆ ನನಗೆ ಆತ್ಮೀಯರಾದ ಸ್ನೇಹಿತರೆಂದರೆ ಪ್ರೊ. ವಿ.ಎಂ. ಇನಾಂದಾರರು. ಅವರನ್ನು ನನ್ನ ಇಷ್ಟಮಿತ್ರ, ಬಂಧು ಬಾಂಧವರಲ್ಲೊಬ್ಬರನ್ನಾಗಿಸಿ ನನ್ನ ಅನಿಸಿಕೆಗಳನ್ನು ಇನ್ನೊಂದೆಡೆ ನಿವೇದಿಸಿಕೊಂಡಿದ್ದೇನೆ.

## ಅಧ್ಯಾಯ ೯

## ಸಾಹಿತ್ಯದ ಸುಗ್ಗಿ

ಉಡುಪಿ ಕರ್ನಾಟಕದ ಒಂದು ಪುಣ್ಯಸ್ಥಳ. ಸರ್ವ ಋತು ಬಂದರು..... ಈಗ ೫೦ ವರ್ಷಗಳಿಗೆ ಹಿಂದಿನ ಫಲಿಮಾರು ಶ್ರೀಗಳು ಫ, ಬಿ.ಎಂ.ಶ್ರೀ, ಮುದವೀಡು ಮೊದಲಾದವರನ್ನು ಕರೆಸಿ ಅವರ ವಾಗ್ಮಿತೆಯನ್ನು ಚೌಕಿ ಮೃಷ್ಟಾನ್ನದ ಪ್ರಸಾದದ ಜತೆಗೇ ಊರಿನ ಜನರಿಗೆ ಮನತಣಿಯುವಂತೆ ಉಣಬಡಿಸಿದರೆಂದು ಕೇಳಿದ್ದೆ. ಆಗ ಉಡುಪಿಯಲ್ಲಿ ಕೊರಡ್ಕಲ್ ಶ್ರೀನಿವಾಸರಾಯರು, ಸಾಂತ್ಯಾರ್ ವೆಂಕಟರಾಜರು, ತುಳುನಾಡ ಹುದ್ದರಿ ಶ್ರೀನಿವಾಸ ಪಣಿಯಾಡಿ, 'ಅಂತರಂಗ'ದ ಹೈದರ್, ಎಂ.ವಿ. ಹೆಗ್ಡೆ, ಪಾ.ವೆಂ. ಆಚಾರ್ಯ, ಎನ್.ಎಸ್. ಕಾರಂತ ಮೊದಲಾದವರು ಸೃಷ್ಟಿಶೀಲ ಲೇಖಕರು....

ಈ ನನ್ನ ಉಡುಪಿಯಲ್ಲಿ ಎಂದಿಗಿಂತಲೂ ಒಂದು ಲವಲವಿಕೆ, ಹುರುಪು, ಏನಾದರೂ ಮಾಡಬೇಕೆಂಬ ಹುಮ್ಮಸ್ಸು ಇದ್ದೇ ಇರುತ್ತಿತ್ತು.

ಉಡುಪಿಯ ಕರ್ನಾಟಕ ಸಂಘದಲ್ಲಿ ನಾನು ಹತ್ತು ವರ್ಷಗಳಲ್ಲಿ ಪಡೆದ ಅನುಭವವನ್ನು ಒರೆಗೆ ಹಚ್ಚುವ ಒಂದು ಉತ್ತಮ ಸನ್ನಿವೇಶ ೧೯೬೦ನೆಯ ದಶಂಬರದಲ್ಲಿ ಒದಗಿತು. ಅದೇ ೪೨ನೆಯ ಕನ್ನಡ ಸಾಹಿತ್ಯ ಸಮ್ಮೇಳನ.....

ಪರಿಷತ್ತಿನ ಅಧ್ಯಕ್ಷರಿಗೊಂದು ಪ್ರತ್ಯೇಕ (ಮಠದ ಸ್ವಾಮಿಗಳನ್ನು ಇರಿಸಿದಂತೆ) ಬಿಡಾರ, ಸಮ್ಮೇಳನದ ಅಧ್ಯಕ್ಷರಿಗೆ ಏರ್ ಕಂಡೀಶನ್ಡ್ ಕೊಠಡಿಯುಳ್ಳ ಬಂಗಲೆ, ಬೆಂಗಳೂರಿನಿಂದ ಬರಲು ಬಾಡಿಗೆ ವ್ಯಾನು, ಅತಿಥಿ ಅಭ್ಯಾಗತರಿಗೆ ಪ್ರಥಮ ದರ್ಜೆ ಹಾಸ್ಟೇಲು ಕೊಠಡಿಗಳ ಸೌಕರ್ಯ, ಭಾಷಣಕಾರರ ಆಯ್ಕೆಯಲ್ಲಿನ ವಿವೇಚನೆ, ಸಮ್ಮೇಳನ ಅಧ್ಯಕ್ಷರ ಅಭೂತಪೂರ್ವ ಪುರಪ್ರವೇಶದ ಮೆರವಣಿಗೆ. ಉಡುಪಿಯ ಪರ್ಯಾಯೋತ್ಸವವನ್ನೂ ಮೀರಿಸಿದ ಈ ಸಮ್ಮೇಳನಕ್ಕೆ ಮೂರು ತಿಂಗಳ ಮೊದಲೂ ಆನಂತರವೂ ದೊರೆತ ಪತ್ರಿಕಾ ಪ್ರಚಾರ, ವಾದ-ವಿವಾದ, ಅಪವಾದ ಹೀಗೆ ಈ ೪೨ನೇ ಸಾಹಿತ್ಯ ಸಮ್ಮೇಳನ ನಿರೀಕ್ಷಕರ ಅಭಿಪ್ರಾಯದಂತೆ ಇನ್ನಿಲ್ಲ-ಮುನ್ನಿಲ್ಲ ಎಂಬಂತಾಯಿತು.

ಆದರೆ ಉಡುಪಿಯ ಮಹತ್ವಕ್ಕೆ ಹೇಗೆ ಶ್ರೀಕೃಷ್ಣ ಕಾರಣನೋ ಹಾಗೆ ಮಣಿಪಾಲ ಸಮ್ಮೇಳನದ

ಯಶಸ್ಸಿಗೆ ಸಮ್ಮೇಳನಾಧ್ಯಕ್ಷ ಅ.ನ.ಕೃಷ್ಣರಾಯರು ಮೂಲಕಾರಣ ಎಂದು ನಾನು ತಿಳಿದಿದ್ದೇನೆ. ನಿಮ್ಮ ಉಡುಪಿಯ ಸಮ್ಮೇಳನಕ್ಕೆ ಕೃಷ್ಣರಾಯರಿಗೊಂದು ಅವಕಾಶ ಮಾಡಿಕೊಡಿ, ಎಂದು ಮೊತ್ತ ಮೊದಲು ಅಂದವರು ಶಿವರಾಮ ಕಾರಂತರು. ನೋಡಿ, ಅವರ ಹೆಸರೆತ್ತಿದರೆ ಬೇರೆ ಕಡೆ ವಿರೋಧಮಾಡುವವರೇ ಹೆಚ್ಚು. ನಿಮ್ಮಲ್ಲಿ ಮಾತ್ರ ಅವರು ಅಧ್ಯಕ್ಷರಾಗುವುದು ಸಾಧ್ಯ' ಎಂದು ಕಾರಂತರು ತಿಳಿಸಿದ ಮೇಲೆ ಎಂದೋ ಆಗಬೇಕಾಗಿದ್ದ ಒಂದು ನ್ಯಾಯ ನಮ್ಮಲ್ಲಿ ನಡೆಯಲಿ ಎಂದು ನಾನೂ ನನ್ನ ಕೆಲವು ಸಾಹಿತಿ ಮಿತ್ರರೂ ಒಮ್ಮತದಿಂದ ನಿರ್ಣಯಿಸಿ ಸ್ಥಾನೀಯ ಕಾರ್ಯಸಮಿತಿಗೆ ಸೂಚನೆ ಮಾಡಿದೆವು. ಸಮ್ಮೇಳನದ ಅಧ್ವರ್ಯು ಮತ್ತು ಸ್ವಾಗತ ಸಮಿತಿ ಅಧ್ಯಕ್ಷರಾದ ಡಾ. ಪೈ ಅವರೂ ಇದಕ್ಕೆ ಹೃದಯದಿಂದ ಒಪ್ಪಿಗೆ ಕೊಟ್ಟರು. ಆದರೆ ಈ ತನ್ಮಧ್ಯೆ ಪತ್ರಿಕೆಗಳಲ್ಲಿ ಕೋಲಾಹಲ ತೊಡಗಿತು. ಅನಕೃ ಆಯ್ಕೆಯನ್ನು ಪರಿಷತ್ತಿನ ಅಧ್ಯಕ್ಷರು ವಿರೋಧಿಸುತ್ತಿದ್ದಾರೆ. ಸ್ವಾಗತ ಸಮಿತಿಯವರೂ ಶಾಸ್ತ್ರಿಗಳ ಪಕ್ಷದಲ್ಲಿ ನಿಲ್ಲುತ್ತಾರೆ ಎಂಬರ್ಥದ ವದಂತಿ ಹಬ್ಬಿತು. ಅದನ್ನು ಸಮರ್ಥಿಸುವಂತೆ ಯಾರಿಂದಲೋ ಡಾ. ಪೈಯವರಿಗೆ ಒಂದು ಪತ್ರವೂ ಬಂದಿತು, 'ಎಸ್.ವಿ. ಕೃಷ್ಣಮೂರ್ತಿರಾಯರನ್ನು ನೀವು ಅಧ್ಯಕ್ಷರಾಗಿ ಮಾಡಿದರೆ ಯಾವ ಚರ್ಚೆಯೂ ಇರುವುದಿಲ್ಲ' ಎಂದು. ಡಾ. ಪೈ ಅವರಿಗೆ ಕೂಡ ಭಾರತೀಯ ರಾಜ್ಯಸಭೆಯ ಉಪಾಧ್ಯಕ್ಷರಂಥ ಅಧಿಕಾರಸ್ಥ ಜನದ ಕಡೆಗೆ ಒಲವು ಹೆಚ್ಚು. ಕಾರ್ಯಸಮಿತಿ ಸಭೆಯಲ್ಲಿ ಅವರು ಎಸ್.ವಿ.ಕೃ. ಅವರ ಪರವಾಗಿ ಮಾತಾಡುವುದು ಖಂಡಿತ. ಹಾಗಾಗಿ ನಾನು ಒಂದು ಜೇಬಿನಲ್ಲಿ ನನ್ನ ಕಾರ್ಯದರ್ಶಿ ಸ್ಥಾನದ ರಾಜೀನಾಮೆ ಪತ್ರವನ್ನು ಬರೆದಿಟ್ಟುಕೊಂಡಿದ್ದೆ. ಒಂದು ಪಕ್ಷ ಎಸ್.ವಿ.ಕೃಷ್ಣಮೂರ್ತಿರಾಯರು ಅಧ್ಯಕ್ಷರಾಗುವುದಕ್ಕೆ ಸಮಿತಿಯ ಬಹುಮತ ಸಮ್ಮತಿಸಿದರೆ ಸಾಹಿತ್ಯ ಪಕ್ಷಪಾತಿಯಾದ ನನ್ನಂಥವನಿಂದ ಸಾರಥ್ಯ ಸಾಧ್ಯ




ವಿಲ್ಲ ಎಂಬುದನ್ನು ಸಾರಬೇಕೆಂಬುದು ನನ್ನ ಆಕಾಂಕ್ಷೆ. ಆದರೆ ಡಾ. ಪೈ ಅವರ ಔದಾರ್ಯ, ಅ.ನ.ಕೃ. ಅವರ ಅದೃಷ್ಟ- ನಾವ ಸ್ನೇಹಿತರೆಲ್ಲ ಅನಕೃಗೂ ಎಸ್.ವಿ.ಕೃಗೂ ಇರತಕ್ಕ ವ್ಯತ್ಯಾಸವನ್ನು ತಿಳಿಯಪಡಿಸಿದ ಮೇಲೆ ಡಾ. ಪೈ ಅವರು ತಮಗೆ ಬಂದ ಪತ್ರವನ್ನು ಓದಿ ಹೇಳಿದರೇ ವಿನಾ ಛಲ ಹಿಡಿಯಲಿಲ್ಲ. ನನ್ನ ಜೇಬಿನ ಪತ್ರ ನನ್ನ ಕೈಯಲ್ಲೇ ಉಳಿಯಿತು. ಅ.ನ.ಕೃ. ಹೆಸರು ಬೆಂಗಳೂರಿಗೂ ಹೋಯಿತು. ನಮ್ಮ ಇಚ್ಛೆಗೆ ವಿರೋಧವಾಗಿ ಪರಿಷತ್ತಿನ ಅಧ್ಯಕ್ಷರು ನಡೆದುಕೊಳ್ಳಲಿಲ್ಲ. ಆದರೆ ಪತ್ರಿಕೆಗಳಲ್ಲಿ ಸಮ್ಮೇಳನ ಪೂರ್ವದ ಮೂರು

ತಿಂಗಳ ಕಾಲ ಚರ್ವಿತ ಚರ್ಚೆಯಿಂದಾಗಿ ನಮ್ಮ ಸಮ್ಮೇಳನಕ್ಕೆ ಪುಕ್ಕಟೆ ಜಾಹೀರಾತು ಒದಗಿಸಿದ ಪರಿಣಾಮವಾಗಿ ಪ್ರತಿನಿಧಿಗಳ ಸಂಖ್ಯೆ ಏರುತ್ತಲೇ ಹೋಗಿ ೭೧೧ಕ್ಕೆ ಮುಟ್ಟಿತು. ನನಗೆ ಮಾತ್ರ ಏಳೂ ಹನ್ನೊಂದು ಆಯಿತು.

ಅ.ನ.ಕೃ. ಅವರನ್ನು ನಾನು ಮೂರು ಸಾರಿ ಭೆಟ್ಟಿಯಾಗಿ ಅವರಿಗೂ ಶಾಸ್ತ್ರಿಗಳಿಗೂ ಎಂಥ ಭಿನ್ನಾಭಿಪ್ರಾಯಗಳಿದ್ದರೂ ಮಣಿಪಾಲ ಸಮ್ಮೇಳನ ಶಾಂತವಾಗಿ ನಡೆಯಬೇಕೆಂದು ನಮ್ಮ ಅಪೇಕ್ಷೆ, ಡಾ. ಪೈಯವರ ಅಭಿಮತ ಎಂದು ಬಿನ್ನವಿಸಿದೆ. ಅಂಥದ್ದೇನೂ ಆಗದೆಂದು ಅವರು ಭರವಸೆ ಕೊಟ್ಟಮೇಲೆ ಸಮ್ಮೇಳನದ ದಿನದವರೆಗೂ ನಾನು ನಿಶ್ಚಿಂತನಾಗಿಯೇ ಇದ್ದೆ. ಸಮ್ಮೇಳನಕ್ಕೆ ಮೂರು ದಿನ ಮೊದಲು ಅ.ನ.ಕೃ. ಪರಿವಾರ ಪತ್ನಿ, ಮಗ, ಮಗಳು, ಅಳಿಯ, ಸೊಸೆಯರನ್ನು ಕೂಡಿಕೊಂಡು ಶಿವಮೊಗ್ಗ-ತೀರ್ಥಹಳ್ಳಿ ದಾರಿಯಾಗಿ ಉಡುಪಿಗೆ ಬಿಜಯಮಾಡಿಸಿದರು....

ನಾನು ಮಹಾಧಿವೇಶನದ ಸಂಯೋಜನೆಯಲ್ಲಿ ಬಿದ್ದಿರುತ್ತಾ ಡಾ.ಪೈ ಅವರ ಮನೆಯಲ್ಲಿ ಇನ್ನೊಂದು ಪ್ರಕರಣ ನಡೆದಿತ್ತು. ಸಮ್ಮೇಳನದ ಅಧ್ಯಕ್ಷರ ಭಾಷಣ ತರಿಸಿನೋಡಿದರೆ ಅದರಲ್ಲಿ ಮೂರು ಪುಟ ಪರಿಷತ್ತಿನ ಅಧ್ಯಕ್ಷರ ಧೋರಣೆಯ ಕಟುಸತ್ಯವಾದ ಟೀಕೆ- 'ಅನಕೃ' ಅವರ ನಿಶ್ಚಿತ ಶೈಲಿಯಲ್ಲಿ ವಜ್ರಕ್ಕೆ ಕುಂದಣದ ಕಟ್ಟು ಹಾಕಿದಂತೆ ನಿಶ್ಚಲವಾಗಿ, ನಿರ್ಭಯವಾಗಿ ಮೂಡಿ ಬಂದಿತ್ತು. ಡಾ. ಪೈ ಸಾಹಿತ್ಯ ಪ್ರಪಂಚದ ಟೀಕೆಗೂ ಇತರ ಬಗೆಯ ಟೀಕೆಗಳಿಗೂ ತಾರತಮ್ಯವನ್ನು ಅರಿಯಲಾರದ ಮನೋಭೂಮಿಕೆಯುಳ್ಳವರಾಗಿ ಅದರಿಂದ ಹೌಹಾರಿದರು. ಉದ್ಘಾಟಕ ಎಸ್.ವಿ. ಕೃಷ್ಣಮೂರ್ತಿರಾಯರ ಹತ್ತಿರ ಸಮ್ಮೇಳನವನ್ನು ಇಲ್ಲಿಗೆ. ಬರ್ಖಾಸ್ತು ಮಾಡಲೇ? ಎಂದು ಕೇಳಿದರಂತೆ. ಸಾಹಿತ್ಯಜ್ಞರಾದ ಅಥವಾ ಸಾಹಿತಿಗಳ ಹಣೇಬರಹವನ್ನು ಸ್ವಲ್ಪವಾದರೂ ಅರಿತಿದ್ದ ಎಸ್.ವಿ.ಕೃ. ಪೈ ಅವರು ಎತ್ತಿದ ಕೈಯನ್ನು ತಡೆದು ನಿಲ್ಲಿಸಿದರಂತೆ. ಪರಿಷತ್ತು, ಸಮ್ಮೇಳನ ಎಂದರೆ ದೂರ ಸರಿದು ನಿಂತಿದ್ದ ಕಾರಂತರು ನಮ್ಮ ಸಲುವಾಗಿ ಅನಕೃ ಪ್ರೀತಿಯಿಂದ ಈ ಸಮ್ಮೇಳನಕ್ಕೆ ಬಂದಿದ್ದರು. ಮಾಸ್ತಿ ಆದಿಯಾಗಿ ಹಿರಿಯ, ಕಿರಿಯ ಸಾಹಿತಿಗಳು ಆಗಮಿಸಿ ಮೂರು ದಿನ ಇದ್ದು ಸಂತೋಷಕೊಟ್ಟರು. ಪಟ್ಟರು, ಸ್ವಾಗತಸಮಿತಿಯನ್ನು ಬಹುವಾಗಿ ಟೀಕಿಸುತ್ತಿದ್ದ ಬೀಚಿ, ಕಟ್ಟೀಮನಿಯವರೂ ಅನಕೃ ಅಭಿಮಾನದಿಂದ ಬಂದು ನೆರೆದಿದ್ದರು. ಅನಕೃ ನಮ್ಮ ಸಮ್ಮೇಳನದ ಅಧಿದೈವತ, ಆಕರ್ಷಣೆ. ಆ ಮೂರು ದಿನ ಅನಕೃ ದಂಪತಿ ಸಮೇತ ವೇದಿಕೆಯ ಮೇಲೆ ಶೋಭಿಸಿದರು. ಜನ ನೋಡಿ ನೋಡಿ ತಣಿದರು- ಈ ಸಾಹಿತ್ಯ ಸಾರ್ವಭೌಮನನ್ನು. ಶಿಸ್ತಿನ ಸೈನಿಕನಂತೆ ಕಾರ್ಯದರ್ಶಿಯಾದ ನಾನು ಹೇಳಿದಷ್ಟು ಹೊತ್ತಿಗೆ ಅನಕೃ ಎಲ್ಲೆಂದರಲ್ಲಿ ಹಾಜರು. ಮುಂಜಾನೆಯಿಂದ ರಾತ್ರಿ ಹನ್ನೆರಡರ ತನಕ ಅವರ ಬೆನ್ನುಹಿಡಿದು, ಮಾತಾಡಿಸಿ, ಸಮಯದ ಕೃಪ್ತತೆಕಾಯಲು ನಾನು ಸಾಹಿತಿಗಳ ನಕ್ಷತ್ರಕನೊಬ್ಬರನ್ನು- ನನ್ನ ಸ್ನೇಹಿತ ಬೈಕಾಡಿಯನ್ನು- ನೇಮಿಸಿಬಿಟ್ಟಿದ್ದೆ. ಅಂತೂ ಅನಕೃ ಕನ್ನಡಿಗರಿಗೆ ಎಷ್ಟು ಪ್ರಿಯರು, ಕನ್ನಡಿಗರು ಅವರಿಗೆಷ್ಟು ಪ್ರಿಯರೆಂಬುದು ನಮ್ಮ ಸಮ್ಮೇಳನದಲ್ಲಿ ಸ್ಪಷ್ಟವಾಗಿ ವ್ಯಕ್ತವಾಯಿತು. ಮುಂಜಾನೆ ಏಳರ ಸೂರ್ಯನನ್ನು ಅನಕೃ ನೋಡದೆ ಎಷ್ಟು ವರ್ಷವಾಗಿತ್ತೋ. ಆದರೆ ಮಣಿಪಾಲದಲ್ಲಿ ಮಾತ್ರ ಕೋಳಿಕೂಗುವ ಮೊದಲೇ ಅವರು ಎದ್ದು ಸಿದ್ಧರು....

ಬಹಿರಂಗವಾಗಿ ಪರಿಷತ್ ಅಧ್ಯಕ್ಷರ ಅವಮಾನ ಮಾಡುವುದು ಯಾರ ಉದ್ದೇಶವೂ ಆಗಿರಲಿಲ್ಲವಾದರೂ ಅಂದಿನ ಪರಿಷತ್ತಿನ ಧೋರಣೆಗೆ ಅನಕೃ ಅಧ್ಯಕ್ಷರಾಗಿರುವ ಸಮ್ಮೇಳನದಲ್ಲಿ ಟೀಕೆ ಖಂಡನೆ ದೊರೆಯದಿರಲು ಸಾಧ್ಯವೇ? ಖಂಡನೆಯನ್ನು ಸುತರಾಂ ಒಲ್ಲದ ಡಾ. ಪೈಯವರು ಶಿವಮೂರ್ತಿಶಾಸ್ತ್ರಿಗಳ ಹತ್ತಿರ ಅತ್ತು ಕ್ಷಮೆ ಬೇಡಿದರು. ಸಮ್ಮೇಳನ ಮುಗಿದಮೇಲೆ ನನ್ನನ್ನು ತರಾಟೆಗೆ ತೆಗೆದುಕೊಂಡರು. 'ನಿನಗೆ ಗೊತ್ತಿದ್ದೂ ಹೀಗೆ

ಮಾಡಿದೆಯಲ್ಲಾ?' ಎಂದು ಚೆನ್ನಾಗಿ ಥಳಿಸಿದರು. ಸಿಕ್ಕವರಿಗೆ ಅಂದರು. ಇಂಥ ಸಮ್ಮೇಳನ ನನಗೆ ಬೇಡವಿತ್ತು ಎಂದು ಕೊರಗಿದರು. ನಾನೂ ಅತ್ತೆ. ಕಾರಂತರೇ ಸಮಾಧಾನ ಮಾಡಿದರು. ಆಮೇಲೆ ಮಾನಸಿಕ ಸಮತೋಲನವನ್ನು ಕಾಪಾಡಿಕೊಳ್ಳಲು ೧೫ ದಿನ ಮದ್ರಾಸಿನಲ್ಲಿ ಅಜ್ಞಾತವಾಸ ಮಾಡಿ ಮರಳಿದೆ. ಸಮ್ಮೇಳನ ಮುಗಿದರೂ ಪ್ರತಿಕ್ರಿಯೆ ನಿಲ್ಲಲಿಲ್ಲ. ಕಟ್ಟೀಮನಿ ರೊಚ್ಚಿನಿಂದ ಟೀಕೆಮಾಡಿದರು. ಬೀಚಿಯವರು ಲೇವಡಿ ಮಾಡಿ ನನ್ನನ್ನು ಕುರಿದಾಸ ಎಂದು ಕರೆದರು. ನನಗೆ ಈ ಟೀಕೆಗಳು ಅಮೃತಪ್ರಾಯವಾದವು. ಮುಂದಿನ ಕೆಲವು ವರ್ಷಗಳಲ್ಲಿ ನಾನು ಭಾಗವಹಿಸಿ ನಡೆಸಿದ ಶತಮಾನೋತ್ಸವ ಸಮಾರಂಭಗಳ ಪ್ರಮಾಣ, ಗುಣ-ಎರಡೂ ಹೆಚ್ಚುವುದಕ್ಕೂ ೪೨ನೇ ಸಾಹಿತ್ಯ ಸಮ್ಮೇಳನದ ಕಷಾಯ ಕಾರಣವಾಯಿತು.

೧೯೬೨ನೆಯ ಅಕ್ಟೋಬರ್ ೧೦ನೇ ತಾರೀಖಿಗೆ ಶಿವರಾಮ ಕಾರಂತರಿಗೆ ೬೦ ತುಂಬುವ ದಿನ..... ಕಾರಂತರ ಸಮಕಾಲೀನರೂ ಓರಗೆಯವರೂ ಪರಿಚಯಸ್ಥರೂ ಆದ ಸುಮಾರು ೨೦-೩೦ ಜನ ಸಾಹಿತಿಗಳಿಂದ ನಾನು ತರಿಸಿಕೊಂಡ ಪ್ರಶಂಸೆಯ ಸರಮಾಲೆ 'ಕಾರಂತರ ಅರವತ್ತು' ಮಣಿಪಾಲದಲ್ಲಿ ಬಹಳ ಸುಂದರವಾಗಿ ಮುದ್ರಿಸಿ ಸಮಾರಂಭ ನಡೆಸಿದೆ. ಕಾರಂತರಿಗೂ ಇದರಿಂದ ಸಮಾಧಾನವಾಯಿತು. ಅವರ 'ಆತ್ಮಕಥನ' ಎರಡನೆಯ ಆವೃತ್ತಿಯಲ್ಲಿ ಅವರು ಈ ವಿಷಯವನ್ನು ಪ್ರಸ್ತಾಪಿಸಿದ್ದಾರೆ.

೧೯೬೬ರಲ್ಲಿ ನವ್ಯ ಕವಿ ಗೋಪಾಲಕೃಷ್ಣ ಅಡಿಗರು ನಮ್ಮೂರಿಗೆ ಪ್ರಿನ್ಸಿಪಾಲರಾಗಿ ಬಂದರು. ಅವರಿಗೆ ಐವತ್ತು ತುಂಬಿದಾಗ ಅದ್ದೂರಿಯ ಸಮಾರಂಭ ನಡೆಸಿದೆವು.

ಕನಕದಾಸ ಶತಮಾನೋತ್ಸವ ಭವ್ಯ ರೀತಿಯಿಂದ ನಡೆಯಿತು.

ಇಷ್ಟಾದರೂ ಕಾರಂತರಿಗೆ ಸರಿಯಾದ ಒಂದು ಅಭಿನಂದನ ಗ್ರಂಥವನ್ನೂ ತರಲಿಲ್ಲವಲ್ಲಾ ಎಂಬ ಕೊರೆ ನನ್ನಲ್ಲಿ ಉಳಿಯಿತು. ೬೦ರ ಸಂಭಾವನ ಗ್ರಂಥವನ್ನು ಕಂಡು ಮುಂಬಯಿಯ ಕಾರಂತ ಅಭಿಮಾನಿಗಳು ನಿಮ್ಮಿಂದ ಇಷ್ಟೇ ಸಾಧ್ಯವಾಯಿತೆ? ಒಂದು ಕೊರಗಿ ಬರೆದರು. ನನಗೂ ಹಾಗೆಯೇ ಅನಿಸಿತ್ತು. ಆದರೆ ಕಾರಂತರ ಅರವತ್ತರ ಉತ್ಸವದ ಪುಣ್ಯ ಫಲವೇನೋ ಎಂಬಹಾಗೆ ಉತ್ಸವ ಕಳೆದ ಒಂದು ತಿಂಗಳಿನಲ್ಲಿ ನಾನು ಇಟಲಿಗೆ ಯಾತ್ರೆ ಹೊರಟೆ. ಎಂಟು ತಿಂಗಳು ಕಳೆದು ಮರಳಿದಾಗ ಕಾಲೇಜಿನಲ್ಲಿ ನನ್ನ ಹೊಣೆ ಪ್ರಿನ್ಸಿಪಾಲಗಿರಿಯ ಕಿರಿಕಿರಿ ತೊಡಗಿತು. ಸರಿಯಾದ ಅಭಿನಂದನ ಗ್ರಂಥ ಯಾವಾಗ ಹೊರಡಿಸೋಣ ಎಂಬ ಯೋಚನೆ ಪ್ರತಿವರ್ಷವೂ ಹುಟ್ಟಿ ಹಿಂದೆ ಸರಿಯುತ್ತಿತ್ತು. ಅದೇಕೋ ೧೯೭೯ನೇ ಇಸವಿಯಲ್ಲಿ ಕಾರಂತರು 'ನಾನು ನಿಮ್ಮಲ್ಲಿ ಒಂದು ಯಕ್ಷಗಾನ ಸೆಮಿನಾರ್ ಮಾಡುತ್ತೇನೆ, ಅಕ್ಟೋಬರ್ ಕೊನೆಯ ವಾರ,' ಎಂದಾಗ ಅಭಿನಂದನಾ ಗ್ರಂಥದ ಆಸೆ ಮತ್ತೆ ಚಿಗುರಿತು. 'ಕಾರಂತ ಪ್ರಪಂಚ' ಎಂದು ಹೆಸರಿಟ್ಟ ಈ ಅಭಿನಂದನ ಗ್ರಂಥ ನನ್ನ ಮಸ್ತಿಷ್ಕದೊಳಗಿನ ಭ್ರೂಣ ರೂಪು ತಾಳಿತು. ಅಭಿನಂದನ ಗ್ರಂಥ ಒಂದು ನೆಪವಾದರೆ- ಕಾರಂತರು ಇನ್ನೊಂದು ನೆಪ- ನನಗಾಗ ಬೇಕಾಗಿತ್ತು ಸಾಹಿತಿಗಳ ಒಂದು ಪ್ರಸನ್ನ ಸಮ್ಮೇಳನ. ಮಣಿಪಾಲದ ಸಾಹಿತ್ಯ ಸಮ್ಮೇಳನದ ಕಹಿನೆನಪಿನ ಅಭಿಶಾಪವನ್ನು ಹುರಿಗೊಳಿಸಲು, ಹುಸಿಗೊಳಿಸಲು ಒಂದು ಭವ್ಯ ಸಂತೋಷ ಸಮಾರಂಭ. ಇದಕ್ಕೆ ಕಾರಂತರಂಥ ಬಂಡವಾಳ ಬೇರೆಲ್ಲಿದ್ದೀತು ಎಂದು ಅವರ ಹೆಸರು ಬಳಸಿದೆ. ಅವರ ಮಿತ್ರ ಸಂಪತ್ತಿನ ಲಾಭ ದೋಚುವ ಹಂಚಿಕೆ ಹೂಡಿದ್ದೆ. ಅವರದೇ ಕಾರ್ಯಕಲಾಪಗಳ ನಡುವೆ ಅವರ ಕ್ರಿಯಾತತ್ಪರತೆ ಉಚ್ಛ್ರಾಯದಲ್ಲಿರುವಂಥ ಸಂದರ್ಭ ಹುಡುಕಿದ್ದೆ. ಕನಿಷ್ಠ ನೂರು ಮಂದಿ ನಮ್ಮ ಜಿಲ್ಲೆ ಮತ್ತು ಅಖಿಲ ಕರ್ನಾಟಕ ಖ್ಯಾತಿಯ ಸಾಹಿತಿಗಳಿಗೆ ಆ ಮಂತ್ರ ಇತ್ತಿದ್ದೆ..... ಇದು ಸಾಹಿತ್ಯ ಸಮಾರಂಭಗಳಲ್ಲಿ ಒಂದು ಇತಿಹಾಸವಾ

ಯಿತು. ಶೇಖರ ಇಡ್ಯಾ ಏಕಾಕಿಯಾಗಿ ಕಾರಂತ ಗ್ರಂಥಗಳು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಸಾಹಿತ್ಯದ ಪ್ರದರ್ಶನ ಕೂಡಿಸಲು ಒಂದು ತಿಂಗಳ ಕಾಲ ಸದ್ದಿಲ್ಲದೆ ಊರೆಲ್ಲ ಅಲೆದು ಸಂಗ್ರಹಕಾರ್ಯಕ್ಕಾಗಿ ದಣಿದರು. ಹೆಚ್ಚು ಖರ್ಚುವೆಚ್ಚವಿಲ್ಲದೇ ಬರಿಯ ಶ್ರದ್ಧೆಯ ಬಂಡವಾಳದಿಂದಲೇ ಅವರು ನಡೆಸಿದ ಪ್ರದರ್ಶನ ಕಾರ್ಯವನ್ನು ಅಖಿಲ ಕರ್ನಾಟಕಸ್ಥರೆಲ್ಲ ಮನಸಾರೆ ಮೆಚ್ಚಿದರು.

## ಅಧ್ಯಾಯ ೧೦

## ಉಡುಪಿಯ ಭಾಗ್ಯದ ಬಾಗಿಲು

ಉನ್ನತ ಶಿಕ್ಷಣ ರಂಗದಲ್ಲಿ ಎಂ.ಜಿ.ಎಂ. ಕಾಲೇಜು ನಿರ್ವಹಿಸಿದ ಚಾರಿತ್ರಿಕ ಪಾತ್ರವನ್ನು ಸಿಂಹಾವಲೋಕಿಸುವಾಗ ಈ ಸಂಸ್ಥೆಯಲ್ಲಿ ದುಡಿಯುತ್ತಿರುವ ಒಬ್ಬನಿಗೆ ಕೆಲ ಮಿತಿಗಳೂ ಕೆಲ ಅತಿಗಳೂ ಬಾಧಿಸಬಹುದೆಂಬ ತಿಳಿವು ನನಗಿದೆ.

ಎಂ.ಜಿ.ಎಂ. ಡಾ. ಮಾಧವ ಪೈ ಅವರ ಬೋಧಿವೃಕ್ಷ. ಇದರ ನೆರಳಿನಿಲ್ಲಿ ಅವರಿಗೆ ದೊರೆತ 'ಬೋಧಿ' ಯಿಂದಲೇ ಮಣಿಪಾಲದ ಮುಂದಿನ ಶಿಕ್ಷಣ ಸಂಸ್ಥೆಗಳು ರೂಪುಗೊಂಡವು. ಪೈ ಅವರ ಶಿಕ್ಷಣ ಸಂಸ್ಥೆಗಳ ಸ್ಫೂರ್ತಿ ಮಿಶನರಿಗಳ ಪರೋಕ್ಷ ಬುದ್ಧಿಯಿಂದಲೇ ಉಗಮಿಸಿದರೂ ಅವರ ಸಂಘಟನಾ ಚಾತುರ್ಯ ವಿದೇಶೀಯರ ಕುಶಾಗ್ರ ಮತಿಗೂ ನಿಲುಕದಂಥದ್ದು. ವಿದೇಶೀಯ ಜನರು ಬಿಚ್ಚಲಾರದ ಒಗಟುಗಳಿಗೆ ಡಾ. ಪೈ ಅವರ ಮಿದುಳಿನಲ್ಲಿ ಹದಿನಾರಾಣೆ ಸ್ವದೇಶಿ ಉತ್ತರಗಳಿವೆ. ಚಿಂತನೆ ಮತ್ತು ವ್ಯವಹಾರಜ್ಞಾನ ಎರಡನ್ನೂ ಏಕೀಕೃತಗೊಳಿಸಿದ ಪೈ ಪ್ರತಿಭೆಗೆ ಸಾಟಿಯಾದದ್ದು ಕರ್ನಾಟಕದಲ್ಲಿ ಬೇರೆ ಇಲ್ಲ. ಟೀಕೆಗಳಿಗೆ ಎದೆಯೊಡ್ಡಿ ನಿಲ್ಲುವ ಎಂಟೆದೆ ಅವರದು. ಆ ಟೀಕೆಗಳ ಮೊನಚು ಮತ್ತು ವಿಷವೆಲ್ಲ ಇಂಗಿ ಅವು ಗೊಬ್ಬರವಾಗಿ ಅವರ ಸಂಸ್ಥೆಗಳಿಗೆ ಸಾರಜನಕ ಒದಗಿಸುವಷ್ಟು ದೀರ್ಘಕಾಲ ಅವರಿಗೆ ಭಗವಂತನು ಆಯುಷ್ಯ ಕೊಟ್ಟದ್ದರಿಂದ ಅವರಂಥ ಕೃತಾರ್ಥ ಜೀವಿಗಳು ಬೇರೆ ನನ್ನ ಸಮೀಪದಲ್ಲಿ ನನಗೆ ಕಂಡಿಲ್ಲ. ಸ್ವಂತ ಕಾಲ ಮೇಲೆ ತಲೆ ಎತ್ತಿ ತಾನು ನಿಂತಂತೆ ತನ್ನ ಜನರೂ ನಿಲ್ಲಬೇಕೆಂದು ಪೈ ಮಾಡಿದ ವಿಭಿನ್ನ ಕ್ಷೇತ್ರಗಳ ಕಾಯಕದಲ್ಲಿ ಅತ್ಯಂತ ಪ್ರಸಿದ್ಧವಾದುದು, ಕ್ರಾಂತಿಕಾರಕವಾದದ್ದು ಮೋಡಗಳನ್ನು ಬೇಧಿಸಿ ಬರುವ ಕೋಲ್ಮಿಂಚಿನಂತೆ ಸಂಕಟ ಪರಂಪರೆಗಳನ್ನು ಹರಿದು ಮೆರೆದದ್ದು ಅವರ ಮೆಡಿಕಲ್ ಕಾಲೇಜಿನ ಸಹಕಾರಿ ಯೋಜನೆ. ಅದಕ್ಕೆ ಬೀಜ ಒದಗಿಸಿದ್ದು ಎಂ.ಜಿ.ಎಂ.ನ ನಿರ್ಮಾಣದ ಅನುಭವ. ಭಿಕ್ಷೆಗೆ ಬಂದವರಂತೆ ತಮ್ಮನ್ನು ನಿರಾಕರಿಸಿದ ಮಹನೀಯರ ವಾಗ್ಬಾಣಗಳಿಂದ ನೊಂದ ಮನಸ್ಸು ಹೊಸಯೋಜನೆಯ ಹಾದಿ ಹಿಡಿಯಿತು. ಮನುಷ್ಯರ ಹೃದಯದಲ್ಲಿರುವ ಕಲ್ಬಂಡೆಯನ್ನು ಕರಗಿಸಲಾಗದಿದ್ದರೆ, ಅದನ್ನು ಸುತ್ತು ಬಳಸುವ, ಮನುಷ್ಯಮಾತ್ರನ ಹೃದಯಸ್ಥಿತವಾದ ಸ್ವಾರ್ಥಾಭಿಲಾಷೆಯನ್ನೇ ತನ್ನ ಯೋಜನೆಗೆ ಹೂಡುವ ಒಂದು ಉಪಾಯದಿಂದ ಮಣಿಪಾಲದ ಬೃಹತ್ ಸಂಸ್ಥೆಗಳನ್ನು ಪೈ ನಿರ್ಮಾಣ ಮಾಡಿದರು. ನಿಂದಕರಿರಬೇಕು ಎಂದು ದಾಸರು ಹೇಳಿದ್ದು ಇದಕ್ಕೇ. ಇಂಥ ನಿಂದಕರು ಇಲ್ಲದೆ ಹೋಗಿದ್ದರೆ ಡಾ. ಪೈ ಮುಂದಿನ ವಿಕ್ರಮ ಹೆಜ್ಜೆ ಇಡುತ್ತಿರಲಿಲ್ಲ ಎಂತಲೇ ಎಂ.ಜಿ.ಎಂ. ಇತಿಹಾಸ ಮಣಿಪಾಲದ. ಸಂಸ್ಥೆಗಳ ಗರ್ಭದಲ್ಲಿ ಸುಖಾಸೀನವಾಯಿತು.

೧೯೪೭ರಲ್ಲಿ ಡಾ. ಪೈ ಉಡುಪಿಗೊಂದು ಕಾಲೇಜಿನ ಬಗ್ಗೆ ಕೆಲಸಕ್ಕೆ ತೊಡಗಿದರು. ಮಣಿಪಾಲದ ಅಕಾಡೆಮಿಗೆ ಉಡುಪಿಯ ಹೊರಗೆ ಯಾವ ಪ್ರಸಿದ್ಧಿಯೂ ಇಲ್ಲದಂಥ ಕಾಲ ಅದು. ಪೈ ಅವರು ಕಾಲೇಜಿನ ಬಗ್ಗೆ ತಾವೇ ದುಡುಕಲಿಲ್ಲ. ಪರಿಸರದಲ್ಲೇ ಉತ್ತಮ ಸೇವೆ ಸಲ್ಲಿಸುತ್ತಿದ್ದ ಕ್ರಿಶ್ಚನ್ ಹೈಸ್ಕೂಲಿನ ಆಡಳಿತ ಮಂಡಳಿಯ ಮುಂದೆ ತಮ್ಮ ಬೇಡಿಕೆಯನ್ನಿಟ್ಟರು. ಬಾಸೆಲ್ ಇವ್ಯೇಂಜಲಿಕಲ್ ಮಿಶನ್ನಿನ ಕರಾವಳಿಯ ವರಿಷ್ಠರಾದ ರೆವರೆಂಡ್

ಬ್ರುಕ್ಕಾರ್ಟ್ ಅವರಿಗೆ ತಮ್ಮ ವಿಮಾ ಕಂಪನಿಯ ಭವನದಲ್ಲಿ ಔತಣಕೊಟ್ಟು ಉಡುಪಿಗೊಂದು ಕಾಲೇಜು ನೀಡುವುದಾದರೆ, ತಾವು ಕಟ್ಟಡ ಕಟ್ಟಿಸಿ ಕೊಡುವುದಾಗಿ ಭರವಸೆಯನ್ನೂ ಪ್ರಾರ್ಥನೆಯನ್ನೂ ಏಕಕಾಲಕ್ಕೆ ಸಲ್ಲಿಸಿದರು. ಬ್ರುಕ್ಕಾರ್ಟ್ ಅವರು ಬರೇ ಕಟ್ಟಡವಲ್ಲ, ಸಂಸ್ಥೆಯ ನಿರ್ಮಾಣ ವೆಚ್ಚಕ್ಕೂ ಬಂಡವಾಳ ಕೂಡಿಸಿದರೆ ನಮ್ಮ ಸಂಸ್ಥೆ ಆ ಬಗ್ಗೆ ಚಿಂತಿಸಬಹುದೆಂದು. ತೇಲು ಮಾತನ್ನಾಡಿದರು. ಪೈ ಅವರಿಗೆ ಇದು ವ್ಯವಹಾರವಲ್ಲ ಎನಿಸಿತು. ಯಾವ ಹೊಣೆಯನ್ನೂ ಹೊರಲೊಲ್ಲದ ಸಂಸ್ಥೆಗಾಗಿ ದುಡಿಯುವ ಬದಲು ತಾವೇ ಉಜ್ಜುಗಿಸಿದರೇನಂತೆ ಎಂದು ಎಕಾಡೆಮಿಯೇ ಕಾಲೇಜು ಸ್ಥಾಪನೆ ಮಾಡಿಬಿಡಬೇಕೆಂದು ನಿರ್ಧಾರಕೈಗೊಂಡರು. ಉಡುಪಿಗೆ ಕಾಲೇಜೇ? ಮಾಧವ ಪೈಗೆ ಹುಚ್ಚು ಎಂದರು. ಊರಿನಲ್ಲಿ ಒಂದು ವರ್ಷ ಯಾವ ಸಹಕಾರವೂ ಸಿಗದೆ ಪೈ ಅವರು ನಿರಾಶೆಗೊಂಡು ಜಮೆಯಾದ ದುಡ್ಡನ್ನು ದಾನಿಗಳಿಗೆ ಹಿಂತಿರುಗಿಸಿದರು. ಈ ದುಡ್ಡಿನ ಬಡ್ಡಿ ಎಲ್ಲಿದೆ? ಎಂದು ನಯಾಪೈಸೆಯನ್ನೂ ನೀಡದ ಮಹಾನಿಯರೊಬ್ಬರು ಕೇಳಿ ತಮ್ಮ ತುರಿಕೆ ತೀರಿಸಿಕೊಂಡರು. ೧೯೪೮ರಲ್ಲಿ ಗಾಂಧೀಜಿ ಮರಣದ ನಂತರ ಮತ್ತೆ ಡಾ.ಪೈ ಕಾಲೇಜು ರಚನೆಗಾಗಿ ಜನಕೂಡಿಸಿದರು. ದಾನಕ್ಕಾಗಿ ಅಲೆದರು. ಗಾಂಧೀಜಿ ಹೆಸರು ಹೇಳಿದರೆ ಜನರು ಔದಾರ್ಯ ತೋರಿಸಬಹುದೆಂಬ ಮನೀಷೆಯಿಂದ ಹೊಸತಾಗಿ ಪ್ರಯತ್ನ ನಡೆಸಿದರು. ಉಡುಪಿ ಬರೇ ಚಿಕ್ಕ ಪಟ್ಟಣ. ಇಲ್ಲಿನ ವ್ಯಾಪಾರ-ವ್ಯವಹಾರ ಎಲ್ಲ ಸಾವಿರದ ಲೆಕ್ಕದಲ್ಲಿ ನಡೆದದ್ದು. ಲಕ್ಷ-ಲಕ್ಷಗಳ ಹಣ ಕೂಡಿಸುವ ಕಾಲೇಜು ನಮಗೆ ಅಸಾಧ್ಯವೆಂಬುದು ಆಗಿನ ಸಾರ್ವಜನಿಕ ಅಭಿಪ್ರಾಯ. ಇದನ್ನು ಪೈ ಗೆಲ್ಲಬೇಕಾಗಿತ್ತು. ದೇಣಿಗೆ ಸಂಗ್ರಹಕ್ಕಾಗಿ ಊರು-ಊರು ಸಂಚರಿಸಿದರು. ಈ ಸಂದರ್ಭದಲ್ಲಿ ಡಾ. ಶಿವರಾಮ ಕಾರಂತರೂ ಅವರೊಡನೆ ಭಿಕ್ಷಾಟನೆಗೆ ಹೋಗಿದ್ದರಂತೆ.

ಉತ್ತರ ಕರ್ನಾಟಕ ಸಂಚಾರ ಕಾಲದಲ್ಲಿ ಒಂದು ಸ್ವಾರಸ್ಯ ನಡೆಯಿತು. ನಮ್ಮೂರಿನದೇ ಒಂದು ಹೋಟೇಲು. ಕಾರಿನಿಂದಿಳಿದ ಕೂಡಲೇ ಗಲ್ಲಾದ ಮೇಲಿದ್ದ ಮಾಲಿಕರು ಎಲ್ಲರಿಗೂ ಕಾಫಿಗೆ ಆರ್ಡರು ಮಾಡಿದರಂತೆ. ಅವರು ಬಂದ ಕೆಲಸದ ಅರಿವಾದ ಕೂಡಲೇ ಕಾಫಿಯನ್ನು ಅರ್ಧ ಕಾಫಿಗೆ ಇಳಿಸಿದರಂತೆ. ದೇಣಿಗೆ ಹರಹರ ಎಂದು ಅರ್ಧ ಕಾಫಿಯಷ್ಟೇ ಕಪ್ಪದಲ್ಲಿ ಇಳಿದದ್ದು ನೋಡಿ ಕಾರಂತರು ಹೊರಗೆ ಬಂದಮೇಲೆ ಸಂಗಡಿಗರಿಗೆ ಅಂದರಂತೆ: ಹೆಸರು ನೋಡಿದಿರಾ ಮಾನಹಾರ ಭವನ (ಮನೋಹರದ ವ್ಯಂಗ್ಯ)ದಲ್ಲಿ ನಮಗೆ ನ್ಯಾಯೋಚಿತವಲ್ಲವೆ? ಊರಿಗೆ ದೊಡ್ಡವರಾದರೇನಂತೆ? ನಾನಕ್ಕಾಗಿ ಹಸ್ತಚಾಚಿರೋ ದಾನಿ ಮಹಾರಾಯನಿಗೆ ಜಿಪುಣ ಸ್ವಾತಂತ್ರ್ಯ ಒದಗುತ್ತದೆ. ಇಲ್ಲ ಎಂದು ಹೇಳಿದರೆ ಕಡಿಮೆ ಆದೀತೆಂದು ನಾಲ್ಕು ವೇದಾಂತದ ಮಾತು ಸೇರಿಸುವುದು ರೂಢಿಯಷ್ಟೇ.... ಇಂತಹ ಮಾನಹರಪ್ರಸಂಗಗಳನ್ನೆಲ್ಲ ಕಾಲೇಜು ಸಮಿತಿ ಗಣನೆಗೆ ತರಲಿಲ್ಲ, ಭಾರೀ ತಪಾಸಣೆಯ ಬಳಿಕ ಅಂದಿನ ಮದ್ರಾಸ್ ವಿಶ್ವವಿದ್ಯಾನಿಲಯ ಉಡುಪಿಗೆ ಸೆಕೆಂಡ್‌ಗ್ರೇಡ್ (ಅಂದರೆ ಇಂಟರ್ ಮೀಡಿಯಟ್) ಕಾಲೇಜನ್ನು ಮಂಜೂರು ಮಾಡಿದಾಗ, ಪೈ ಅವರು ಉಲ್ಲಸಿತರಾದರು. ನಂತರದ ಕತೆ ಇತಿಹಾಸ! ಪೈ ಬಂಧುಗಳಿಗೆ ನಾನು ಚಿರಋಣಿ. ನಾನು ಎಂ.ಎ. ಮಾಡಿದ ವರ್ಷವೇ ಅವರು ನನಗೆ ಕರೆದು ಕೆಲಸ ಕೊಟ್ಟಿದ್ದಾರೆ. ನಾನು ಪ್ರಾಧ್ಯಾಪಕನಾಗಿ ಮಾಡಿದ ಕೆಲಸವನ್ನು ಮೆಚ್ಚಿ ಸಂಸ್ಥೆಯನ್ನೇ ೧೯೬೪ರಲ್ಲಿ ನನ್ನ ವಶಕ್ಕೆ ಕೊಟ್ಟಿದ್ದಾರೆ. ಸಂಸ್ಥೆಯ ಅಭಿವೃದ್ಧಿಗಾಗಿ ನನ್ನನ್ನು ಹುರಿದುಂಬಿಸಿ ಸದಾ ಬೆಂಬಲಕ್ಕೆ ನಿಂತಿದ್ದಾರೆ.

## ಅಧ್ಯಾಯ ೧೧

## ನನ್ನ ವಿಶ್ವವಿದ್ಯಾನಿಲಯಗಳು

ಮದ್ರಾಸ್ ವಿಶ್ವವಿದ್ಯಾನಿಲಯದ ಸ್ನಾತಕನೂ ಅಲ್ಲದೆ ಎಂ.ಜಿ.ಎಂ. ಕಾಲೇಜು ಆರಂಭದ

ದೆಸೆಯಲ್ಲಿ ಮದ್ರಾಸಿಗೆ ಜೋಡಣೆಯಾಗಿದ್ದುದರಿಂದ ಅಲ್ಲಿನ ಅಧ್ಯಯನ ಮಂಡಲದ ಸದಸ್ಯನೂ ಆಗಿದ್ದುದರಿಂದ ೧೯೪೬ ರಿಂದ ೧೯೫೬ರ ವರೆಗೆ ಮದ್ರಾಸಿಗೂ ನನಗೂ ನಿಕಟಸಂಬಂಧವೇ ಇತ್ತು. ರಾಜ್ಯ ಪುನರ್ವಿಂಗಡನೆ ಆದ ತಕ್ಷಣ ಕಾಲೇಜನ್ನು ಕರ್ನಾಟಕ ವಿಶ್ವವಿದ್ಯಾನಿಲಯದ ಕಕ್ಷೆಗೆ ಸೇರಿಸಿದ್ದರಿಂದ ಒಂದು ವರ್ಷ ಅದರ ರುಚಿಯನ್ನೂ ಕಂಡಂತಾಯಿತು. ೧೯೫೭ ರಿಂದ ೧೯೭೯ರ ತನಕ ೨೨ ವರ್ಷಗಳ ಕಾಲ ನನ್ನ ಕಾಲೇಜು ಮೈಸೂರು ವಿಶ್ವವಿದ್ಯಾನಿಲಯದ ಅಂಗ ಸಂಸ್ಥೆಯಾಗಿದ್ದರಿಂದ ಅದರ ಸಂಬಂಧವೂ ಕುದುರಿತು. ಮೈಸೂರು ಸಂಬಂಧದ ಕೊನೆಯ ಘಟ್ಟದಲ್ಲಿ ಮಂಗಳೂರಿನಲ್ಲಿ ಹುಟ್ಟಿದ ಸ್ನಾತಕೋತ್ತರ ಕೇಂದ್ರವನ್ನು ಪೂರ್ಣ ವಿಶ್ವವಿದ್ಯಾನಿಲಯವನ್ನಾಗಿ ರೂಪಿಸುವ ಸಂದರ್ಭದಲ್ಲಿ ವರದಿ ಒಪ್ಪಿಸುವ ಸಮಿತಿಯಲ್ಲಿ ನಾನಿದ್ದುದರಿಂದ ಈ ಹೊಸ ವಿಶ್ವವಿದ್ಯಾನಿಲಯದ ಜನನಕ್ಕೂ ನಾನು ಸಾಕ್ಷೀಭೂತನಾದೆ. ಅದಲ್ಲದೆ ಎಂ.ಜಿ.ಎಂ. ಕಾಲೇಜಿನ ಸ್ನಾತಕೋತ್ತರ ಸಂಶೋಧನಾ ಕೇಂದ್ರದಲ್ಲಿ ನಿರ್ದೇಶಕನೆಂದೂ 'ಡಾ. ಟಿ.ಎಂ.ಪೈ. ಪ್ರಾಧ್ಯಾಪಕ'ನೆಂದೂ ಕೆಲಸ ನಿರ್ವಹಿಸುತ್ತಿರುವುದರಿಂದ ಮಂಗಳೂರಿನ ಸಂಬಂಧವೂ ಒದಗಿಬಂದಿದೆ.

ಮೈಸೂರು ವಿಶ್ವವಿದ್ಯಾನಿಲಯದ ಗರಡಿಯಲ್ಲಿ ನನ್ನನ್ನು ನಿಯೋಜಿಸಿ, ತರಬೇತಿ ನೀಡಿ, ನನ್ನಲ್ಲಿ ಜ್ಞಾನದಾಹ ಹಸಿರಾಗಿರುವಂತೆ ನೋಡಿಕೊಂಡ ಒಬ್ಬರು ಮಿತ್ರರನ್ನು ಇಲ್ಲಿ ನೆನೆಯುತ್ತೇನೆ. ಅವರು ತೀರ ಆತ್ಮೀಯರಾದ್ದರಿಂದ ಅವರ ಕುರಿತು ಎಲ್ಲ ಮಾತುಗಳನ್ನು ಆಡಲು ಸಾಧ್ಯವಾಗದೆಂದು ತೋರುತ್ತದೆ. ವಿ.ವಿ.ನಿಲಯದ ಆಗುಹೋಗುಗಳಲ್ಲಿ ನನಗೊಂದು ಪಾತ್ರ ಕೊಟ್ಟವರೇ ಅವರು. ಇಲ್ಲವಾದರೆ ನಾನು ಉಳಿದನೇಕ ಪ್ರಿನ್ಸಿಪಾಲರುಗಳಂತೆ ಮೂಲೆಯ ಕುರ್ಚಿಯಲ್ಲಿ ಹಾಯಾಗಿ ವಿರಮಿಸಿಕೊಂಡುಬಿಡುತ್ತಿದ್ದೆ. ಹಿಡಿದೆಳೆದು, ಮುಂದೆತಂದು ನಿಲ್ಲಿಸಿ, ಕಾಲಾನಂತರ ಅವರೇ ಕುಲಪತಿಯಾದಾಗ ನನ್ನ ಟೀಕೆಗಳನ್ನೂ ಸಹಿಸಿಕೊಂಡ ಪರಮೋದಾರಿ ಅವರು. ಮೈಸೂರಿನ ನನ್ನ ಮಿತ್ರ ಬಳಗದ ಹಿರಿಯ ಸದಸ್ಯರಾದ ದೇಜಗೌ ಅವರದು ಜನ್ಮಾಂತದ ಸುಹೃತವೆಂದು ನನಗನಿಸಿದೆ. ನಾವಿಬ್ಬರೂ ಗದ್ಯ ಪಕ್ಷಪಾತಿಗಳು ತಾನೇ?... ಆದರೆ ಅವರದ್ದು ಸಮೃದ್ಧ ಬೆಳೆ, ನನ್ನದು ಆಟಿಗೊಮ್ಮೆ ಸೋಣೆಗೊಮ್ಮೆ ಎಂಬಹಾಗೆ. ಇದನ್ನು ಅವರು ಮೆಚ್ಚಿಕೊಂಡಿದ್ದಾರೆ. ಹತ್ತು ದಿಕ್ಕಿಗೆ ಹರಿಯುವ ನನ್ನ ಚಂಚಲ ಮನಸ್ಸನ್ನು ಯಾವ ಒಂದು ಸೃಷ್ಟಿಮಾರ್ಗಕ್ಕೂ ಅಧೀನವಾಗದೇ ಪಾತರಗಿತ್ತಿತನವನ್ನು ತೋರಿಸುತ್ತಿರುವಾಗ ಅದನ್ನೇ ಸಾಹಿತ್ಯ ವ್ಯವಸಾಯವೆಂದು ಬಗೆದವರು ನನಗೆ ರಾಜ್ಯದ ಸಾಹಿತ್ಯ ಪ್ರಶಸ್ತಿಯನ್ನೂ ಕೊಟ್ಟುಬಿಟ್ಟರು. ಅದಕ್ಕಿಂತ ಹೆಚ್ಚು ನನಗೆ ನನ್ನ ಬರಹಗಳನ್ನು ಮೆಚ್ಚಿಕೊಂಡ ದೇಜಗೌ, ಡಾ. ಹಾ.ಮಾ.ನಾ. ಅಂಥ ವಿಮರ್ಶಕ ಮಾತಿನಿಂದ ಹೆಮ್ಮೆ ಎನಿಸಿದೆ.

## ಅಧ್ಯಾಯ ೧೨

## ಇಷ್ಟಮಿತ್ರ, ಬಂಧುಬಾಂಧವರು

ಜೀವನ ವೃತ್ತಾಂತದಲ್ಲಿ ನಮಗೆ ಸಮೀಪಸ್ಥರಾದವರ ಕುರಿತು ಬರೆಯುವುದು ಬಲು ಕಷ್ಟ. ಬರೆದರೂ ಇಂಥ ಸಾಮೀಪ್ಯಗಳು ನಮ್ಮಲ್ಲಿ ಒಡಮೂಡಿಸಿದ ಮಾಧುರ್ಯವನ್ನು ಶಬ್ದಗಳಲ್ಲಿ ಸೆರೆಹಿಡಿಯುವುದು ಕಷ್ಟ. ಬದುಕಿನ ವರದಿ ಸಂಪೂರ್ಣವಾಗುವ ದೃಷ್ಟಿಯಿಂದ ಬರೆಯಬೇಕು. ಸಾಂದರ್ಭಿಕವಾಗಿ ಹೆಸರು ಹೇಳದೇ ಬರೆಯಲು ಸಾಧ್ಯ ಎಂಬಂಥ ಪ್ರಸಂಗಗಳನ್ನು ಬಿಟ್ಟರೆ ನಾನು ಮುಂದಕ್ಕೆ ನಮೂದಿಸುವ ಮಹನೀಯರು ನನಗೆ ಮಾಡಿದ ಉಪಕಾರಸ್ಮರಿಸುವ ದೃಷ್ಟಿಯಿಂದ ನಾಲ್ಕು ಮಾತು ಬರೆಯುತ್ತೇನೆ. ಎಲ್ಲವನ್ನೂ ಹೇಳುವುದು ಅಗತ್ಯವೂ ಅಲ್ಲ; ಅದರಿಂದ ಉಪಯೋಗವೂ ಇಲ್ಲ. ಹಿರಿಯರು ಮಿತ್ರರು ಎಂದು ನಾನಂದುಕೊಂಡಿರುವ ಪ್ರೊ. ವಿ.ಎಂ. ಇನಾಂದಾರ್ ಅವರ

ಸ್ನೇಹಿತವರ್ಗದ ತೀರಾ ತೀರಾ ಒಳಸುತ್ತಿನಲ್ಲಿ ಅವರು ನನಗೊಂದು ಸ್ಥಾನಕೊಟ್ಟಿರುವುದನ್ನು ನಾನು ಜೀವನದ ಒಂದು ಸೌಭಾಗ್ಯವೆಂದು ತಿಳಿದಿದ್ದೇನೆ ಇನಾಂದಾರರು ನನಗಿಂತ ೧೦-೧೧ ವರ್ಷಕ್ಕೆ ಹಿರಿಯರು. ನನಗಿಂತ ಎಷ್ಟೋ ಮೊದಲು ಕನ್ನಡ ಸಾಹಿತ್ಯ ಸರೋವರದಲ್ಲಿ ಈಸಬೇಕು, ಇದ್ದು ಜೈಸಬೇಕು ಎಂದು ಜಯಗಳಿಸಿದವರು. ಅವರೊಬ್ಬ ಮಹಾಶಿಸ್ತಿನ ಬರಹಗಾರು. ಅವರಿಂದ ಕಲಿಯತಕ್ಕ ಪಾಠಗಳು ಬಹಳ.

ಮಿತ್ರ ಇನಾಂದಾರರನ್ನು ನಂಬಿ ನಾನು ಕೆಟ್ಟದ್ದು ಒಂದೇ ಒಂದು ಸಲ. ಅವರು ಕಾರಿಟ್ಟಿದ್ದಾರೆಂದು ಪೈಪೋಟಿಯಿಂದ ನಾನೂ ಎರಡು ವರ್ಷ ಕಾರು ಇಡಲು ಹೋಗಿ ನನ್ನ ಸಂಬಳಕ್ಕೆ ತಿಂಗಳು ೨೦೦ ರೂಪಾಯಿ ಖೋತಾ ಮಾಡಿಕೊಂಡೆ. ಅವರು ಹಳೇ ಆಸ್ಟಿನ್ ಕೊಂಡರೆಂದು ನಾನೂ ಹುಡುಕಾಡಿ ಅದನ್ನೇ ತಂದೆ. ನನ್ನ ಆಸ್ಟಿನ್ ಇಂಗ್ಲಂಡಿನಲ್ಲಿ ಹುಟ್ಟಿತ್ತಾದರೂ ಇಲ್ಲಿ ಬಾಲ್ಯ ಕೌಮಾರ್ಯಗಳನ್ನು ಕಳೆದು ಅದಕ್ಕೆ ಯೌವನಾವಸ್ಥೆ ಪ್ರಾಪ್ತಿಯಾಗಿತ್ತು. ಅಂದರೆ ಅದಕ್ಕೆ ೨೫ ವರ್ಷ ಕಳೆದಿತ್ತು. ಆದರೇನು? ಇನಾಂದಾರರದ್ದೂ ಅಷ್ಟೇ ವಯಸ್ಸಿನದು. ದಾರಿ ನಡೆಯುತ್ತದೆಂದು ನಾನೂ ಕೊಂಡೆ. ಡ್ರೈವಿಂಗ್ ಕಲಿತೆ. ಆದರ ಒಂದೊಂದೇ ಬಿಡಿಭಾಗಗಳು ಉದುರಿ, ಕದಲಿ ಕಣ್ಣೆದುರೇ ಅದು ನಶಿಸುವುದನ್ನು ನೋಡಿ ಭಾರೀ ಪ್ರಯಾಸದಿಂದ ಅದನ್ನು ಮಾರಿ ನಿವಾಳಿಸಿದೆ. ಆಸ್ಟಿನ್ ಇಂಜಿನ್ ಛಲೋ ಅನ್ನುವ ಭಾವನೆಯನ್ನು ಇನಾಂದಾರರು ನನ್ನ ಮೆದುಳಿನಲ್ಲಿ ತುರುಕಿದ್ದರು. ಅದಿನ್ನೂ ಮಾಸಿಲ್ಲ. ಟೊಯೊಟದಲ್ಲಿ ಜಪಾನಿನಲ್ಲಿ ಪ್ರಯಾಣಿಸುವಾಗಲೂ ನನ್ನ ಮನಸ್ಸಿನ ಮಾನದಂಡ ಆಸ್ಟನ್ ಎಂಜಿನ್ನೇ. ಆದರಲ್ಲೂ ನನ್ನದಲ್ಲ, ಇನಾಂದಾರರ ಆಸ್ಟಿನ್!

ಇನಾಂದಾರರ ಸ್ನೇಹ ಸುಲಭಸಾಧ್ಯವಲ್ಲ ಎನ್ನುವವರಿದ್ದಾರೆ. ಅದಕ್ಕೆ ಕಾರಣ ನಾನು ಮೊದಲೇ ಹೇಳಿದಂತೆ ಅವರ ಚುನಾಯಿಸಿಕೆ. ಹೊರನೋಟಕ್ಕೆ ಇನಾಂದಾರ್ ಕಠಿನತೆಯ ಸೋಗು ಹಾಕಿದರೂ ಅಂತರಾಳದಲ್ಲಿ ತೀರ ಸ್ನೇಹಪರ ಮನುಷ್ಯ. ನನ್ನ ಮಗಳ ವಿವಾಹಕ್ಕೆ ಆಮಂತ್ರಣ ಕೊಡಲು ಬೆಂಗಳೂರಿಗೆ ನಾನು ಪತ್ನಿ ಸಮೇತ ಹೋದೆ. ಇನಾಂದಾರ ದಂಪತಿಗಳು ನಮಗೇ ಮದುವೆಯೋ ಎಂಬಹಾಗೆ ಉಪಚಾರ ಮಾಡಿ ಉಡುಗೊರೆ ಕೊಟ್ಟರು. ಹೊರಡುವ ವೇಳೆ ಇನಾಂದಾರ್ ನನ್ನನ್ನು ಪಕ್ಕಕ್ಕೆ ಕರೆದು, ಮದುವೆ ಅಂದಮೇಲೆ ಖರ್ಚು ಏನಾದರೂ ಬೇಕೆ? ಎಂದು ಗುಟ್ಟಾಗಿ ಕೇಳಿದರು. ನಾನು ಖರ್ಚಿನ ಮನುಷ್ಯ ಎಂಬುದನ್ನು ಅರಿತ ಅವರು ನನಗೆ ಆಪತ್ಕಾಲದ ನೆರವು ನೀಡಲು ಮಾನಸಿಕ ಹಾಗೂ ಆರ್ಥಿಕ ಸಿದ್ಧತೆ ಮಾಡಿಕೊಂಡಿದ್ದನ್ನು ನೋಡಿ ನಾನು ಸ್ತಂಭೀಭೂತನಾಗಿಬಿಟ್ಟೆ. ಅವರ ಸ್ನೇಹದ ಪರಿ ಇಂಥದ್ದು. ಇದರ ಸವಿಯನ್ನುಂಡದ್ದು ನಾನೆಷ್ಟೋ ಸಲ. ಅದು ನನ್ನ ಭಾಗ್ಯ ಎಂದುಕೊಂಡಿದ್ದೇನೆ. ಕೆ. ಕೆ. ಪೈ., ಅವರ ತಮ್ಮ ಪ್ರಭಾಕರ ಪೈ, ಟಿ.ಎ.ಪೈ., ಅವರ ತಮ್ಮ ಟಿ.ರಮೇಶ ಪೈ ಅವರೆಲ್ಲರ ಉಪಕಾರವನ್ನು ಮರೆಯುವಂತಿಲ್ಲ. ರಮೇಶ್ ಪೈ ಅವರದ್ದು ಒಂದು ಅಪೂರ್ವ ವ್ಯಕ್ತಿತ್ವ. ಸದಾ ವಿಶ್ವ ಸಂಚಾರಿಯಾದ ಅವರ ಅನುಭವದ ಹರವು ಬಹುದೊಡ್ಡದು. ಅಕಾಡೆಮಿಯ ಭಾಗ್ಯ ನಿರ್ಮಾಣದಲ್ಲಿ ರಮೇಶ್ ಪೈ ಮಹತ್ವದ ಪಾತ್ರ ವಹಿಸಿದ್ದಾರೆ. ಡಾ. ಮಾಧವ ಪೈಗಳಿಗೆ ಬಲಗೈ ಬಂಟನಾಗಿ ದುಡಿದು ಶಿಕ್ಷಣ ಕ್ಷೇತ್ರದಲ್ಲಿ ಹೆಸರು ಮಾಡಿದ್ದಾರೆ. ಇವರೊಡನೆ ೫ ನಿಮಿಷ ಮಾತನಾಡಿದರೂ ಸಾಕು, ಒಂದು ಸಲಕ್ಕೆ ಹೊಸ ಗಾಳಿ ಬೀಸಿದಂತಾಗುತ್ತದೆ. ಅವರು ಮಾಡುವ ಮೂರು ಕೆಲಸದ ಬಗ್ಗೆ ಹೇಳಬೇಕು: ೧) ನನ್ನ ಜನ್ಮ ದಿನವನ್ನು ನೆನಪಿಟ್ಟು ನಾನು ಮರೆತ ದಿನವನ್ನು ಪ್ರತಿ ವರ್ಷ ತಪ್ಪದೆ ಜ್ಞಾಪಿಸುವುದು. ೨)ಶಿಕ್ಷಣಕ್ಕೆ, ಕಲೆಗೆ ಸಂಬಂಧಪಟ್ಟ ಯಾವುದೇ ಲೇಖನದ ಪ್ರತಿಯನ್ನು ನನಗೆ ಕಳುಹಿಸಿಕೊಡುವದು. ಹತ್ತಾರು ಕಂಪನಿಗಳ ಕೆಲಸಗಳ ಗಡಿಬಿಡಿಯ ನಡುವೆಯೂ ಇದನ್ನು ಮರೆಯುವ

ವರಲ್ಲ. ೩) ಮಣಿಪಾಲಕ್ಕೆ ಬರುವ ಸ್ವದೇಶ-ವಿದೇಶಗಳ ಅತಿಥಿಗಳಿಗೆ ಮಾರ್ಗದರ್ಶಕರಾಗಿ ದಣಿವರಿಯದೆ ಮಲ್ಪೆಯಿಂದ ಮಣಿಪಾಲದವರೆಗೆ ಸಂಚರಿಸುವುದು. ಸಂಸ್ಥೆಯಲ್ಲಿ ಅವರು ಪಡೆದ ತಾದಾತ್ಮ್ಯವನ್ನು, ಅವರು ಅದಕ್ಕೆ ಕೊಡುವ ಸಮಯ ಮತ್ತು ಪರಿಶ್ರಮವನ್ನು ಕಂಡು ನಾನು ನಿಜಕ್ಕೂ ಬೆರಗಾಗಿದ್ದೇನೆ.

ನಾನೂ ಒಬ್ಬ ಸಂಸಾರಿ. ನನ್ನ ಬಂಧು ಬಾಂಧವರ ಬಗ್ಗೆ ನಾಲ್ಕು ಮಾತು ಬರೆದು ಈ ಕಥಾನಕಕ್ಕೆ ವಿರಾಮಕೊಡುತ್ತೇನೆ. ಮೊದಲನೆಯವಳು ನನ್ನ ಸತೀ ಸಹಧರ್ಮಿಣಿ ಸುಮತಿ. ಮಹಾಮಹೋಪಾಧ್ಯಾಯ ಕೆ.ಎಲ್. ವ್ಯಾಸರಾಯ ಶಾಸ್ತ್ರಿಯವರ ಒಬ್ಬಳೇ ಒಬ್ಬಳು ಮಗಳು. ೧೯೪೦-೫೦ರ ಸಂದಿನಲ್ಲಿ ಅವರ ಸಂಬಳ ೧೦೦ ರೂಪಾಯಿ ಇದ್ದಿರಬಹುದು. ಐದು ಮಕ್ಕಳನ್ನು-ನಾಲ್ವರು ಗಂಡು ಒಬ್ಬ ಹೆಣ್ಣು-ಸಾಕಿ ಸಲಹಿ ವಿದ್ಯಾಬುದ್ಧಿಗಳನ್ನೂ ದಯಪಾಲಿಸಿದರು. ನನ್ನ ಹಿರಿಭಾವ ಪ್ರೊ. ಲಕ್ಷ್ಮೀಧರ್, ಕಾನ್ಪುರದ ಐ.ಐ.ಟಿ.ಯಲ್ಲಿ ಪ್ರೊಫೆಸರ್. ಎರಡನೆಯವನು ಅಪ್ರತಿಮ ಬುದ್ಧಿಶಾಲಿ ಕೆ.ವಿ.ರಾಜಗೋಪಾಲ, ಅಮೆರಿಕದ ಡ್ಯೂರಾಯ್ ವಿಶ್ವವಿದ್ಯಾನಿಲಯದ ಜೀವ ರಸಾಯನಶಾಸ್ತ್ರದ ಡೀನ್. ಮೂರನೆಯವನು ಇಂಡಿಯಾ ಸರ್ಕಾರದ ಶಿಲಾಲೇಖ ಶಾಸ್ತ್ರ ವಿಭಾಗದಲ್ಲಿ ನಿರ್ದೇಶಕ. ಈತ ತೀರ್ಥರೂಪರಂತೆ ಸಂಸ್ಕೃತವನ್ನು ಕಲಿತು ಊಟಿಯಲ್ಲಿದ್ದ ಎಪಿಗ್ರಾಫಿ, ಇಲಾಖೆ ಸೇರಿ, ಹಂತ-ಹಂತವಾಗಿ ಮೇಲಕ್ಕೇರಿ, ಈಗ ನಿರ್ದೇಶಕರ ಹುದ್ದೆಯಲ್ಲಿ ಕೆಲಸ ಮಾಡುತ್ತಾನೆ. ಈತ ತಂದೆಯಂತೆ ಒಳ್ಳೆಯ ಬರಹಗಾರ, ವಾಗ್ಮಿ ಬಹುಭಾಷಾ ವಿಶಾರದ. ತುಳುನಾಡಿನ ಇತಿಹಾಸವನ್ನು ಶಾಸನಗಳ ಮೂಲಕ ಉಲ್ಲೇಖಿಸುವ ಈತನ ಮಹಾಪ್ರಬಂಧಕ್ಕೆ ಕರ್ನಾಟಕ ವಿಶ್ವವಿದ್ಯಾನಿಲಯ ಡಾಕ್ಟರೇಟ್ ಕೊಟ್ಟಿದೆ. ನಾಲ್ಕನೆಯವನು ಮದ್ರಾಸಿನಲ್ಲಿ ವಕೀಲ ವೃತ್ತಿಯಲ್ಲಿದ್ದಾನೆ. ಒಳ್ಳೆಯ ಮಾತುಗಾರ. ಡಾ. ಶಿವರಾಮ ಕಾರಂತರ ಮಗಳು ಕ್ಷಮಾ ಈತನ ಮಡದಿ. ಈ ನಾಲ್ವರ ನಟ್ಟನಡುವಿನಾಕೆ ನನ್ನ ಮಡದಿ. ಗಂಡನ ಅಲೆಮಾರಿ ವಿಚಾರ, ಸಂಚಾರ, ಓಡಾಟ, ಕಾಟಗಳನ್ನೆಲ್ಲ ಸಹಿಸಿಕೊಂಡು ಜವಾಬ್ದಾರಿಯಿಂದ ಸಂಸಾರ ನಿರ್ವಹಣೆ ಮಾಡಿದವಳು. ಜತೆಗೆ ಐದು ಮಕ್ಕಳನ್ನು ಕೊಟ್ಟವಳು-ಮೂವರು ಗಂಡು, ಇಬ್ಬರು ಹೆಣ್ಣು. ಪಿತ್ರಾರ್ಜಿತವಾದ ನಮ್ಮ ಹೋಟೇಲು ಉದ್ಯಮ ಗದುಗಿನಲ್ಲಿ ಈಗ ನಡೆಸುತ್ತಿರುವವನು ನನ್ನ ಹಿರೇಮಗ ಜಯದೇವ. ಎರಡನೆಯವನು ಅನಂತಮೋಹನ, ಸಿಂಡಿಕೇಟ್ ಬ್ಯಾಂಕಿನಲ್ಲಿದ್ದಾನೆ. ಮೂರನೇಯ ಹರ್ಷವರ್ಧನ ಜಾನಪದ ಕೇಂದ್ರದಲ್ಲಿ ವೀಡಿಯೋಗ್ರಾಫರ್ ಆಗಿದ್ದಾನೆ. ಹೆಣ್ಣುಮಕ್ಕಳಲ್ಲಿ ಹಿರಿಯವಳು ಸುಜಾತ. ಮುಂಬಯಿಯ ಇಂಜಿನಿಯರ್ ಪತಿ ಹಾಗೂ ಮೂರು ಮಕ್ಕಳೊಡನೆ ಸುಖವಾಗಿದ್ದಾಳೆ. ನನ್ನ ಹಿರೇಮಗನಿಗೊಬ್ಬ ಮಗನಿದ್ದಾನೆ. ಎರಡನೆಯವನಿಗೆ ಮಗಳಿದ್ದಾಳೆ. ಮೊಮ್ಮಕ್ಕಳ ಮೋಹ ಇದೀಗ ನನ್ನನ್ನು ಬಲವತ್ತರವಾಗಿ ಕಾಡುತ್ತಿದೆ. ಮನುಷ್ಯನಿಗೆ ಚಿರಂಜೀವಿಯಾಗಬೇಕೆಂಬ ಆಸೆ ಯಾತಕ್ಕಾಗಿ ಹುಟ್ಟುತ್ತದೆ ಎಂಬ ಪ್ರಶ್ನೆಗೆ ಸದ್ಯ 'ಐದು ಉತ್ತರ' ಸಿಕ್ಕಿದೆ. ನನ್ನ ಐದು ಮೊಮ್ಮಕ್ಕಳೇ ಆ ಉತ್ತರ.... ಕಾಲಾಯತಸ್ಮೈನಮಃ ಅಲ್ಲವೆ?

●

---

ಕಾಲೇಜಿನ ಒಂದು ನೋಟೀಸ್ ಬೋರ್ಡಿನ ಮೇಲೆ: "ಹೊಸದಾಗಿ ಕಾಣುವ ಹಳೆ ಪುಸ್ತಕಗಳು ಮಾರಾಟಕ್ಕಿವೆ. ಕೊಳ್ಳಲು ಆಸಕ್ತಿಯಿರುವವರು ಹಾಸ್ಟೆಲಿನ ಹತ್ತನೆಯ ನಂಬರಿನ ರೂಮಿನವರನ್ನು ಕೂಡಲೆ ಸಂಪರ್ಕಿಸುವಂತೆ ಕೋರಲಾಗಿದೆ." (ಪುಸ್ತಗಳನ್ನು ಬಹಳ ಉಪಯೋಗಿಸಿಲ್ಲ ಎನ್ನುವುದನ್ನು ಸಮರ್ಥಿಸಲಿಕ್ಕೆ ಮಾರ್ಕ್ಸ್‌ಕಾರ್ಡ್ ಕೂಡ ಇದೆ, ಎಂಬ ವಿನಂತಿಯಿತ್ತು.)

'ರೀಡರ್ಸ್ ಡೈಜೆಸ್ಟ್'ನಿಂದ



# ಪುಟಾಣಿಗಳ ಪೀಡಿಸುವ ಪೋಲಿಯೋ


- ಡಾ. ಕರವೀರಪ್ರಭು ಕ್ಯಾಲಕೊಂಡ
ಶಸ್ತ್ರಕ್ರಿಯಾ ವಿಭಾಗ,
ಕರ್ನಾಟಕ ವೈದ್ಯಕೀಯ ಮಹಾವಿದ್ಯಾಲಯ,
ಹುಬ್ಬಳ್ಳಿ-೫೮೦೦೨೨

ಪೋಲಿಯೊ 'ಎಂಟೆರೊವೈರಸ್'ದಿಂದ ಬರುವ ತೀವ್ರ ಸ್ವರೂಪದ ಸಾಂಕ್ರಾಮಿಕ ಕಾಯಿಲೆ. ಇಂದು ಪ್ರಪಂಚದ ಅನೇಕ ರಾಷ್ಟ್ರಗಳಲ್ಲಿ ಈ ಸಾಂಕ್ರಾಮಿಕ ರೋಗ ಹೇಳ ಹೆಸರಿಲ್ಲದಂತೆ ಮಾಯವಾಗಿದೆ. ಆದರೆ ನಮ್ಮ ದೇಶದಲ್ಲಿ ಅದರ ತಾಂಡವನೃತ್ಯ ಮುಂದುವರೆದೇ ಇದೆ. ಇದಕ್ಕೆ ಮುಖ್ಯ ಕಾರಣ ನಮ್ಮ ಜನರಿಗೆ ಈ ರೋಗದ ಬಗ್ಗೆ ಅರಿವು ಇಲ್ಲದಿರುವುದು. ಪೂರಕವಾಗಿ ನಮ್ಮಲ್ಲಿ ಮಡುವುಗಟ್ಟಿ ನಿಂತಿರುವ ಮೂಢನಂಬಿಕೆಗಳು, ದೇವರ ಕಾಟ, ದೆವ್ವಗಳ ಆಟ, ಮಾಟ-ಮಂತ್ರಗಳ ಇಕ್ಕಟ್ಟಾದ ಚೌಕಟ್ಟಿನಲ್ಲಿ ಬದುಕಿನ ಜಂಜಾಟ ಹೀಗಾಗಿ ಪೋಲಿಯೊ ಪೀಡೆ ಪುಟಾಣಿಗಳನ್ನು ಪೀಡಿಸುತ್ತಲೇ ಇದೆ.

ಪೋಲಿಯೋ ಬಗ್ಗೆ ನಮ್ಮ ಪೂರ್ವಜರಿಗೂ ಗೊತ್ತಿತ್ತು. ಆಗ ಅವರು ಈ ರೋಗವನ್ನು ಪೋಲಿಯೋ ಎಂದು ಕರೆದಿರಲಿಕ್ಕಿಲ್ಲ. ಇದಕ್ಕೆ ಇಜಿಪ್ತದ ಒಂದು ಪಿರಾಮಿಡ್‌ದಲ್ಲಿ ಚಿತ್ರಿಸಲ್ಪಟ್ಟಿರುವ ಒಂದು ವ್ಯಕ್ತಿಯ ಚಿತ್ರ ಆಧಾರವಾಗಿದೆ. ಅಲ್ಲಿಯ ಗೋಡೆಯ ಮೇಲೆ ಬರೆದ ಕುಂಟ ಕಾಲಿನ ವ್ಯಕ್ತಿಯೊಬ್ಬ ಬಡಿಗೆ ಹಿಡಿದು ನಿಂತ ಚಿತ್ರವು ಪೋಲಿಯೋ ರೋಗಕ್ಕೆ ತುತ್ತಾದವನದೆಂದು ಊಹಿಸಬಹುದಾಗಿದೆ. ಇಲ್ಲಿನ ವಾಸ್ತುಶಿಲ್ಪದಲ್ಲೂ ಅಂಥ ಚಿತ್ರಗಳು ಸಿಗುತ್ತವೆ. ಪಟ್ಟದಕಲ್ಲಿನ ದೇವಾಲಯದಲ್ಲಿಯ ಜನಜೀವನ ಬಿಂಬಿಸುವ ಪಟ್ಟಿಕೆಗಳಲ್ಲಿ ಇಂಥ ಕೋಲು ಹಿಡಿದ ಕುಂಟ ಕಾಲಿನ ವ್ಯಕ್ತಿಗಳ ಚಿತ್ರಗಳನ್ನು ಕಾಣಬಹುದಾಗಿದೆ. ಪೋಲಿಯೋ ಹಾವಳಿ ನಮ್ಮ ನಾಡಿನಲ್ಲೂ ಮೊದಲಿನಿಂದಲೂ ಇತ್ತು ಎಂಬುದು ಇದರಿಂದ ಸ್ಪಷ್ಟ.

ವೈದ್ಯ ವಿಜ್ಞಾನದ ಇತಿಹಾಸ ಪುಟಗಳನ್ನು ತಿರುವಿ ಹಾಕಿದಾಗ, ಪೋಲಿಯೋ ರೋಗದ ಹೆಸರು ಮೊಟ್ಟ ಮೊದಲು ಕಂಡುಬಂದದ್ದು ೧೭೮೯ರಲ್ಲಿ ಎಂಬುದು ಗೊತ್ತಾಗುತ್ತದೆ. ಮುಂದೆ ಒಂದು ಶತಮಾನದವರೆಗೂ ಈ ರೋಗದ ಬಗ್ಗೆ ಹೆಚ್ಚಿಗೆ ಯಾವ ಸಂಗತಿಯೂ ತಿಳಿದು ಬರಲಿಲ್ಲ. ಹೀಗಾಗಿ ಇದೊಂದು ವಿರಳ ಕಾಯಿಲೆ ಎಂದು ವೈದ್ಯರು ಭಾವಿಸಿದ್ದರು. ಕಾಲ ಉರುಳಿದಂತೆ ಪೋಲಿಯೋ ವೈದ್ಯರ ಗಮನ ಸೆಳೆಯದೇ ಬಿಡಲಿಲ್ಲ. ಹೈನೆ (Heine) ಎಂಬ ಜರ್ಮನಿಯ ವೈದ್ಯರು ೧೮೪೦ರಲ್ಲಿ ಈ ರೋಗದ ಲಕ್ಷಣಗಳನ್ನು ವಿವರಿಸಿದರು. ಇದರಿಂದ ತಲೆದೋರುವ ಸ್ನಾಯು ದುರ್ಬಲತೆ ಹಾಗೂ ವಕ್ರತೆಯನ್ನು ವರ್ಣಿಸಿದರು. ಮಕ್ಕಳನ್ನು ಪಿಡುಗಿನ ರೂಪದಲ್ಲಿ ಕಾಡಿ ಹೆಡಮುರಿಗೆ ಹಾಕುವುದೆಂದು ಹೇಳಿದರು. ಇದರ ನಂತರದ ಕಾಲದಲ್ಲಿ ಪೋಲಿಯೋ ಪಿಡುಗುಗಳು ಗುರುತಿಸಲ್ಪಡಹತ್ತಿದವು.

ಮೇಡಿನ್ (Medin) ಎಂಬವರು ೧೮೯೦ರಲ್ಲಿ ಯುರೋಪದಲ್ಲಿ ಪೋಲಿಯೋ ಪಿಡುಗನ್ನು ಪತ್ತೆ ಹಚ್ಚಿದರು. ೧೮೯೪ರಲ್ಲಿ ಇದು ಅಮೇರಿಕದಲ್ಲಿ ಸಾಂಕ್ರಾಮಿಕ ಸ್ವರೂಪ ತಲುಪಿತ್ತು. ಇದರಿಂದ ಸಾವಿರಾರು ರೋಗಿಗಳ ಅಧ್ಯಯನ ಮಾಡುವ ಅವಕಾಶ ವೈದ್ಯರಿಗೆ ದೊರೆಯಿತು. ರೋಗಾಣುಗಳು ರೋಗಿಯ ಮಿದುಳಿನ ಮತ್ತು ಬೆನ್ನುಹುರಿಯ ನರಕೋಶಗಳ ಮೇಲೆ ದಾಳಿ ನಡೆಸುವುವೆಂಬುದು ದೃಢಪಟ್ಟಿತು. ಲ್ಯಾಂಡ್‌ಸ್ಟೀನರ್ (Land Steiner) ಎಂಬ ವೈದ್ಯರು ೧೯೦೯ರಲ್ಲಿ ಈ ರೋಗಕ್ಕೆ ಕಾರಣ ಒಂದು ವೈರಸ್ ಎಂಬುದನ್ನು ಗುರುತಿಸಿದರು. ಅವರು ಈ ರೋಗದಿಂದ ಮೃತರಾದ ಮಕ್ಕಳ ಮರಣೋತ್ತರ ಪರೀಕ್ಷೆ ಮಾಡಿ, ಮಿದುಳು ಮತ್ತು ಬೆನ್ನುಹುರಿಯ ಸಾರವನ್ನು ಪಡೆದು, ಪ್ರಯೋಗಶಾಲೆಯ ಮಂಗಗಳಿಗೆ ಚುಚ್ಚಿ ಅವುಗಳಲ್ಲಿ ರೋಗವನ್ನುಂಟುಮಾಡಿದರು. ಪ್ರಯೋಗಕ್ಕೆ ಒಳಪಟ್ಟ ಮಂಗಗಳು ರೋಗದಿಂದ ತತ್ತರಿಸಿದವು. ಲ್ಯಾಂಡ್‌ಸ್ಟೀನರ್ ಪ್ರಯೋಗದಿಂದ ರೋಗಾಣುಗಳ ಹಾವಳಿ ಮುಖ್ಯವಾಗಿ ಕೇಂದ್ರ ನರಮಂಡಲದ ಮೇಲೆ

ಎಂಬುದು ಖಚಿತವಾಯಿತು. ಇದೊಂದು ಸಾಂಕ್ರಾಮಿಕ ರೋಗವೆಂಬುದೂ ಸ್ಪಷ್ಟವಾಯಿತು.

ಪೋಲಿಯೋ ರೋಗವನ್ನುಂಟುಮಾಡುವ ರೋಗಾಣುಗಳು ಬ್ಯಾಕ್ಟೀರಿಯಾಗಳೋ, ಅಥವಾ ವೈರಸ್‌ಗಳೋ ಎಂಬುದು ದೃಢಪಟ್ಟಿರಲಿಲ್ಲವಾದರೂ ವೈದ್ಯವಿಜ್ಞಾನಿಗಳ ಒಲವು ವೈರಸ್‌ದತ್ತ ವಾಲಿತ್ತು. ೧೯೪೯ರಲ್ಲಿ ಎಂಡರ್ಸ್ (Enders) ವ್ಯಾಲ್ಲರ್ ಮತ್ತು ರೊಬ್ಬಿನ್ (Robbin) ಎಂಬ ಸೂಕ್ಷ್ಮಾಣು ತಜ್ಞರು ಒಂದು ಹೆಜ್ಜೆ ಮುಂದೆ ಹೋಗಿ ಈ ರೋಗಾಣುಗಳನ್ನು ಸಜೀವ ಸಾಕಣಿ ಮಾಧ್ಯಮದಲ್ಲಿ ಬೆಳೆಸಿದರು. ಇದಕ್ಕಾಗಿ ನೋಬೆಲ್ ಪಾರಿತೋಷಕ ಪಡೆದರು. ರೋಗಾಣುಗಳ ಗುಣವಿಶೇಷಗಳ ಅಧ್ಯಯನ ಮಾಡಿದರು. ರೋಗನಿದಾನಕ್ಕೊಂದು ಖಚಿತ ಪುರಾವೆ ಒದಗಿಸಿದರು. ರೋಗಕಾರಕವು ವೈರಸ್ ಎಂಬುದನ್ನು ಜಗಜ್ಜಾಹಿರುಗೊಳಿಸಿದರು.

ಚಿಕಿತ್ಸೆಯಿಂದ ರೋಗಿಗಳು ಬದುಕಿದರೂ ಊನತೆಗಳ ಬಳುವಳಿ ಅಳಿಯುತ್ತಿರಲಿಲ್ಲ. ಹೀಗಾಗಿ ವೈದ್ಯವಿಜ್ಞಾನಿಗಳು ರೋಗ ಬರದಂತೆ ತಡೆಗಟ್ಟಲು ಲಸಿಕೆ ತಯಾರಿಸುವತ್ತ ಗಮನ ಹರಿಸಿದರು. ೧೯೫೫ರಲ್ಲಿ ಸಾಲ್ಕ್ ಮತ್ತು ೧೯೫೭ರಲ್ಲಿ ಸೆಬಿನ್ ಎಂಬ ಸೂಕ್ಷ್ಮಾಣುತಜ್ಞರು ಈ ನಿಟ್ಟಿನಲ್ಲಿ ಯಶಸ್ಸು ಸಂಪಾದಿಸಿದರು. ೧೯೬೧ರಲ್ಲಿ ಸೆಬಿನ್ ಲಸಿಕೆಯ ಕ್ಷೇತ್ರ ಪರೀಕ್ಷೆಯನ್ನು ನಮ್ಮ ದೇಶದ ಆಂಧ್ರಪ್ರದೇಶದಲ್ಲಿ ಮಾಡಲಾಯಿತು. ಇಷ್ಟೆಲ್ಲಾ ಸಂಶೋಧನೆಗಳು ನಡೆದರೂ ಪೋಲಿಯೋ ರೋಗದ ಬಗ್ಗೆ ಅನೇಕ ಸಂಗತಿಗಳು ಇನ್ನೂ ಬೆಳಕಿಗೆ ಬಂದಿಲ್ಲ; ಇದಕ್ಕಾಗಿ ಸಂಶೋಧನೆಗಳನ್ನು ವೈದ್ಯವಿಜ್ಞಾನಿಗಳು ಮುಂದುವರಿಸಿದ್ದಾರೆ!!

## ಪಿಡುಗುಶಾಸ್ತ್ರ

ಕಳೆದ ಶತಮಾನದ ಅವಧಿಯಲ್ಲಿ ಪೋಲಿಯೋ ಪಿಡುಗಿನ ಸ್ವರೂಪದಲ್ಲಿ ಸಾಕಷ್ಟು ಬದಲಾವಣೆಗಳು ಕಂಡುಬಂದಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ-

೧) ಮೂಲಭೂತವಾಗಿ ಇದು ಸ್ಥಳಜನ್ಯವಾಗಿ ಗೋಚರಿಸುತ್ತಿತ್ತು. ಆದರೆ ಇಂದು ಸಾಂಕ್ರಾಮಿಕ ಸ್ವರೂಪ ತಾಳಿದೆ. ಭೀಕರತೆಯಲ್ಲಿ ಸಾಕಷ್ಟು ಮೆಟ್ಟಿಲುಗಳಿರುವುದನ್ನು ಸ್ಪಷ್ಟಪಡಿಸಿದೆ.

೨) ಇದು ಬಹುತರವಾಗಿ ಪುಟಾಣಿಗಳನ್ನು ಪೀಡಿಸುವ ಪೀಡೆಯೆಂದೇ ಹೆಸರುವಾಸಿಯಾಗಿತ್ತು. ಭಾರತದಲ್ಲಿ ಮೂರುವರ್ಷದೊಳಗಿನ ಮಕ್ಕಳಿಗೆ ಮುತ್ತಿಗೆ ಹಾಕುವ ಪ್ರಮಾಣ ಶೇಕಡಾ ೮೦. ಐದು ವರ್ಷದೊಳಗಿನವರನ್ನು ಕಾಡುವ ಪ್ರಮಾಣ ಶೇಕಡಾ ೯೫ರಷ್ಟು. ಆರು ತಿಂಗಳಿಂದ ಮೂರು ವರ್ಷದೊಳಗಿನ ಮಕ್ಕಳನ್ನು ಕಂಡರೆ ಇದು ಹಿರಿಹಿರಿ ಹಿಗ್ಗುವುದು. ಆದರೆ ಇತ್ತೀಚೆಗೆ ವಯಸ್ಕರತ್ತಲೂ ಒಲವು ತೋರಿಸುತ್ತಿದೆ. ಪೋಲಿಯೋ ಶಾಲಾಪೂರ್ವ ಮಕ್ಕಳಲ್ಲಿ ಸರ್ವಸಾಮಾನ್ಯವಾಗಿ ಕಾಣಿಸಿಕೊಳ್ಳುತ್ತಿತ್ತು. ಆದರೆ ಇತ್ತಿತ್ತಲಾಗಿ ಹಿರಿಯ ಮಕ್ಕಳಲ್ಲೂ ಈ ಕಾಯಿಲೆ ಕಂಡುಬರುತ್ತಿದೆ. ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ಇತ್ತೀಚೆಗೆ ಕಾಣಿಸಿಕೊಂಡ ಸಾಂಕ್ರಾಮಿಕ ಹಾವಳಿಯಲ್ಲಿ ಶೇಕಡಾ ೨೫ ರಿಂದ ೩೦ ಭಾಗದ ರೋಗಿಗಳು ೧೫ ವರ್ಷಗಳಿಗೂ ಹೆಚ್ಚಿನವರಾಗಿದ್ದರು. ಈ ಸಾಂಕ್ರಾಮಿಕದ ಸಮೀಕ್ಷೆಯಿಂದ ಪೋಲಿಯೋ ತನ್ನ ದಾಳಿಯ ಹಂತದಲ್ಲಿ ಮಾರ್ಪಾಡು ಹೊಂದುತ್ತಿರುವುದು ಸ್ಫಟಿಕದಷ್ಟೇ ಸ್ಪಷ್ಟ.

೩) ಮೊದಮೊದಲು ಸಮಶೀತೋಷ್ಣ ವಲಯದ ಪ್ರದೇಶಗಳಿಗೆ ಮಾತ್ರ ಇದರ

ಸೋಂಕು ಸೀಮಿತಗೊಂಡಿತ್ತು. ರೋಗಾಣು ಕೆಲವೊಂದು ಗುಣಗಳಲ್ಲಿ ಬದಲಾವಣೆ ಮಾಡಿಕೊಂಡಿದ್ದರಿಂದ ಅದರ ಸೀಮೋಲ್ಲಂಘನವಾಗಿ ಇಂದು ಉಷ್ಣವಲಯದ ಪ್ರದೇಶಗಳಲ್ಲೂ ಹುಮ್ಮಸ್ಸಿನಿಂದ ಹೆಜ್ಜೆ ಹಾಕುತ್ತಿದೆ. ಅಲ್ಲಿ ಹಾವಳಿಯೂ ಹೆಚ್ಚುತ್ತಿದೆ. ಹೀಗಾಗಿ ಉಷ್ಣವಲಯದ ಜನರಲ್ಲಿ ಭಯ-ಭೀತಿಯನ್ನು ಹುಟ್ಟಿಸಿದೆ.

ವ್ಯಕ್ತಿಗಳಲ್ಲಿ ಪೋಲಿಯೋ ರೋಗ ಬರಬೇಕಾದರೆ ಪೋಲಿಯೋ ರೋಗಾಣು ಇದ್ದರೆ ಸಾಲದು. ಅದು ಹಲವಾರು ಅಂಶಗಳನ್ನು ಅವಲಂಬಿಸಿದೆ. ಅವುಗಳಲ್ಲಿ ರೋಗಾಣುವಿನ ಪ್ರಮಾಣ, ಉಗ್ರತೆ, ವ್ಯಕ್ತಿಯ ಅನುವಂಶಿಕತೆಯ ಅಂಶ, ರೋಗ ನಿರೋಧಕ ಶಕ್ತಿ, ಗಂಟಲು ಬೇನೆ, ಅತಿಸಾರ, ಅತೀಶ್ರಮ, ಗಾಯಗಳು (ಯಾವುದೇ ಶಸ್ತ್ರಚಿಕಿತ್ಸೆ-ಟಾನ್ಸಿಲೆಕ್ಟಮಿ, ಚುಚ್ಚುಮದ್ದು, ಮೂಳೆಮುರಿತ, ಪೆಟ್ಟು ಮುಂತಾದವುಗಳು) ಹಾಗೂ ಗರ್ಭಧಾರಣೆ ಮುಖ್ಯವಾದವುಗಳಾಗಿವೆ. ಪರಿಸರದ ಕೆಲವು ಅಂಶಗಳು ಪೋಲಿಯೋ ಸೋಂಕು ತಗಲಲು ಮತ್ತು ರೋಗ ಬೆಳೆಯಲು ಸಹಾಯ ಮಾಡುತ್ತವೆ. ಅನಾರೋಗ್ಯಕರ ವಾತಾವರಣವಿರುವ ಪ್ರದೇಶಗಳಲ್ಲಿನ ವ್ಯಕ್ತಿಗಳು ಅವರು ಮಕ್ಕಳಿರುವಾಗಲೇ ಈ ಕಾಯಿಲೆಯ ವೈರಸ್‌ಗಳನ್ನು ನಿಷ್ಕ್ರಿಯಗೊಳಿಸಬಲ್ಲ ಪ್ರತಿ ವಿಷ ವಸ್ತುಗಳನ್ನು ಹೊಂದಿರುತ್ತಾರೆ. ಅನಾರೋಗ್ಯಕರ ವಾತಾವರಣವಿರುವ ಪ್ರದೇಶಗಳಲ್ಲಿ ವಾಸಿಸುವ ವ್ಯಕ್ತಿಗಳಲ್ಲಿ ೧೫ ವರ್ಷ ಅಥವಾ ಅದಕ್ಕಿಂತ ಹೆಚ್ಚಿನ ವಯಸ್ಸಿನವರಿಗೆ ರೋಗರಕ್ಷಣೆ ತನ್ನ ಅತ್ಯುನ್ನತ ಮಟ್ಟವನ್ನು ಮುಟ್ಟಿರುವುದಿಲ್ಲ. ಹಳ್ಳಿಗಳಲ್ಲಿ ವಾಸಿಸುವವರಿಗಿಂತ ಮುಂಚಿತವಾಗಿ ಪಟ್ಟಣವಾಸಿಗಳು ರೋಗರಕ್ಷಣೆಯನ್ನು ಪಡೆದಿರುತ್ತಾರೆ. ಅಧಿಕ ಆದಾಯವಿರುವವರಿಗಿಂತ ಕಡಿಮೆ ಆದಾಯವಿರುವವರಲ್ಲಿ ಎಳೆಯ ವಯಸ್ಸಿನಲ್ಲಿಯೇ ಈ ವೈರಸ್‌ಗಳೊಡನೆ ಸಂಪರ್ಕವುಂಟಾಗುತ್ತದೆ. ಇದು ಜನಸಾಂದ್ರತೆ ಮತ್ತು ಪರಿಸರದ ನೈರ್ಮಲ್ಯವನ್ನು ಆಧರಿಸಿದೆ. ಗಂಡುಮಕ್ಕಳನ್ನು ಇದು ಹೆಚ್ಚಾಗಿ ಕಾಡುವುದು. ರೋಗದ ಹಾವಳಿಯ ಪ್ರಮಾಣ ಗಂಡು ಮತ್ತು ಹೆಣ್ಣು ಮಕ್ಕಳಲ್ಲಿ ೩:೧ರ ಅನುಪಾತದಲ್ಲಿ ಇರುತ್ತದೆ.

ಚಳಿಗಾಲದಲ್ಲಿ ಅಲ್ಲೊಬ್ಬರನ್ನು ಇಲ್ಲೊಬ್ಬರನ್ನು ಮುತ್ತುವ ಪೋಲಿಯೋ ಬರಬರುತ್ತ ತನ್ನ ಹಾವಳಿಯ ಹರವನ್ನು ಹೆಚ್ಚಿಸುವುದು. 'ಪೋಲೀಯೋ ಋತು' ಮನ್ಸೂನ್ ಮಳೆಯೊಡನೆ ಪ್ರಾರಂಭವಾಗಿ ನವೆಂಬರ್ ತಿಂಗಳ ವೇಳೆಗೆ ಪರಮಾವಧಿಯನ್ನು ತಲುಪುವುದು. ವರ್ಷಾ ಋತುವಿನಲ್ಲಿ ತಪ್ಪಿಸಲಾಗದ ವಾತಾವರಣ ವಿಷಮತೆ, ಹೆಚ್ಚುತ್ತಿರುವ ಕೆಮ್ಮು, ನೆಗಡಿ, ಕರುಳುರೋಗ, ನಿರ್ಮಲತೆಯ ಮಟ್ಟದಲ್ಲಿಯ ಇಳಿತ, ನೊಣಗಳ ಹಾವಳಿ ಇತ್ಯಾದಿಗಳು ಈ ರೋಗದ ಸಾಂದ್ರತೆ ದಟ್ಟವಾಗುವಂತೆ ಮಾಡುತ್ತವೆ. ಬಡಜನರಲ್ಲಿ, ರೋಗನಿರೋಧಕ ಶಕ್ತಿ ಕುಗ್ಗಿದವರಲ್ಲಿ, ನಿರ್ಮಲತೆಯ ಅಭಾವವಿದ್ದಲ್ಲಿ ಜನನಿಬಿಡ ವಸತಿಗಳಲ್ಲಿ ಈ ರೋಗದ ಚೆಲ್ಲಾಟ ಹೆಚ್ಚು.

ಸಾಮಾನ್ಯವಾಗಿ ಸಮಶೀತೋಷ್ಣ ಪ್ರದೇಶಗಳಲ್ಲಿ ಈ ರೋಗದ ಉಪಟಳ ಹೆಚ್ಚು. ಅನೇಕರಲ್ಲಿ ಈ ರೋಗ ಸೌಮ್ಯ ಸ್ವರೂಪದಲ್ಲಿ ಕಂಡು ಮಾಯವಾಗುತ್ತದೆ. ಉಗ್ರ ಸ್ವರೂಪಕ್ಕೆ ತುತ್ತಾಗಿ ತತ್ತರಿಸಿ ಊನಗೊಂಡ ಅಥವಾ ವಕ್ರತೆಯನ್ನು ಪಡೆದ ಕೆಲ ಜನರ ಸಂಖ್ಯೆಯನ್ನು ಗಮನಿಸಿ ಅದೇ ರೋಗದ ಪ್ರಮಾಣ ಎಂದರೆ ಅಕ್ಷಮ್ಯ ಅಪರಾಧವಾದೀತು! ಏಕೆಂದರೆ ಪ್ರತಿ ೧೦೦ ರಿಂದ ೭೫೦ ಪೋಲಿಯೋ ರೋಗಿಗಳಲ್ಲಿ ಒಬ್ಬನು ಮಾತ್ರ ರೋಗದ ದುಷ್ಪರಿಣಾಮದ ಬಳುವಳಿ ಪಡೆಯುತ್ತಾನೆ. ಇಂದು ಸುಮಾರಾಗಿ ಪ್ರತಿ ಲಕ್ಷ ಜನರಲ್ಲಿ ೨ ರಿಂದ ೧೦ ಜನರು ಈ ರೋಗದ ವಕ್ರತೆಯನ್ನು ತೋರಿಸುತ್ತಾರೆ. ಮುಂಬಯಿಯ ಪ್ರಸಿಗ್ಧ ವೈದ್ಯರಾದ ಘರಪುರೆಯವರ ಅಧ್ಯಯನದಂತೆ (ಪ್ರತಿ ಲಕ್ಷ

ಜನಸಂಖ್ಯೆಗೆ ೧೦ ಜನರು ಪೋಲಿಯೋ ಕಾಯಿಲೆಯ ಕುರುಹುಗಳ ಕಾಣಿಕೆಗಳನ್ನು ಪಡೆದಿರುವರು. ಅಂದರೆ ರೋಗದಿಂದ ಬಳಲಿದವರ ಅಥವಾ ಬಳಲುವವರ ಸಂಖ್ಯೆ ಪ್ರತಿಶತ ೧ ರಿಂದ ೮ ರಂತೆ ಆಗುವದು. ಇದರಿಂದ ರೋಗದ ವ್ಯಾಪಕತೆಯನ್ನು ಯಾರಾದರೂ ಊಹಿಸಬಹುದಾಗಿದೆ.

ಪೋಲಿಯೋದಿಂದ ಸಾಯುವವರ ಸಂಖ್ಯೆಯನ್ನು ನಿಖರವಾಗಿ ಹೇಳಲು ಬಾರದು. ಯಾಕೆಂದರೆ ರೋಗವು ವಿರಳವಾಗಿದ್ದಾಗ, ಸಂಭವಿಸುವ ಮರಣಗಳು ಪೋಲಿಯೋ ಬೇನೆಯಿಂದ ಆದರೂ ಅವು ಇದರಿಂದಲೇ ಆದವು ಎಂಬುದನ್ನು ಹೇಳಲು ಯಾವ ಆಧಾರಗಳೂ ಸಿಕ್ಕವು. ಬೇನೆಯು ಸಾಂಕ್ರಾಮಿಕವಾದಾಗ ಸಂಭವಿಸಬಹುದಾದ ಮರಣ ಪ್ರಮಾಣವನ್ನು ಅಳೆದರೆ ಅದು ಪ್ರತಿಶತ ೧೦ ರಿಂದ ೧೫ ರಷ್ಟಾಗುವದು. ಹಲವಾರು ಅಧ್ಯಯನಗಳಿಂದ ಬೆಳಕಿಗೆ ಬಂದ ವಿಷಯವೆಂದರೆ ಮಕ್ಕಳಲ್ಲಿ ರೋಗದ ಪ್ರಮಾಣ ಹೆಚ್ಚು. ಆದರೆ ರೋಗದಿಂದ ಸಂಭವಿಸಬಹುದಾದ ಮರಣ ಪ್ರಮಾಣಗಳು ವಯಸ್ಕರಲ್ಲಿ ಹೆಚ್ಚು.

ಪ್ರಾರಂಭದಲ್ಲಿ ಪೋಲಿಯೋ ಪ್ರಪಂಚದ ಮೂಲೆಮೂಲೆಯಲ್ಲಿಯೂ ಇತ್ತು. ಇಂದು ಅದು ಸುಧಾರಿಸಿದ ಮುಂದುವರಿದ ದೇಶಗಳಿಂದ ಕಾಲು ತೆಗೆದಿದೆ. ಉಷ್ಣವಲಯಗಳಲ್ಲಿ ಅದು ದಟ್ಟವಾಗುತ್ತಿದೆ; ಗಟ್ಟಿಗೊಳ್ಳುತ್ತಿದೆ. ಭಾರತದಲ್ಲಿ ಎಲ್ಲ ಋತುಗಳಲ್ಲಿ ಇದರ ಹಾವಳಿ ಕಂಡುಬಂದರೂ ಮಳೆಗಾಲದಲ್ಲಿ ಹೆಚ್ಚು ಎಂಬುದನ್ನು ಮರೆಯುವಂತಿಲ್ಲ.

## ರೋಗಕಾರಕ

ಪೋಲಿಯೋ ರೋಗಕ್ಕೆ ಒಂದು ವೈರಸ್ ಕಾರಣ. ಇದರ ಗಾತ್ರವು ಸುಮಾರು ೩೦ ಮಿಲಿ ಮೈಕ್ರಾನ್‌ಗಳಷ್ಟು. ರೋಗಾಣು ನೋಡಲು ಗೋಲಾಕಾರವಾಗಿರುತ್ತದೆ. ಆದರೆ ಕೂಲಂಕಷವಾಗಿ ಪರೀಕ್ಷಿಸಲು ಇದರ ಆಕಾರವು ಇಪ್ಪತ್ತು ಮುಖದ ವಜ್ರದ ಹರಳಿನಂತೆ ಕಾಣುವುದು. ಮಾನವ, ಕಪಿ, ಮತ್ತು ಚಿಂಪಾಂಜಿಗಳಲ್ಲಿ ಕಾಯಿಲೆಯನ್ನುಂಟು ಮಾಡಬಲ್ಲದು.

ಪ್ರತಿಕಾಯಜನಕಗಳ ಆಧಾರದ ಮೇಲೆ ಈ ವೈರಸ್‌ಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಲಾಗಿದೆ. ಒಂದನೆಯ ವಿಧ ಬ್ರನ್‌ಹಿಲ್ಡ್, ಎರಡನೆಯ ವಿಧ ಲ್ಯಾನ್‌ಸಿಂಗ್ ಮತ್ತು ಮೂರನೆಯ ವಿಧ ಲಿಯೋನ್‌ಗಳೆಂದು ವಿಭಾಗಿಸಲಾಗಿದೆ. ಹೊಸ ನಿಯಮಗಳ ಪ್ರಕಾರ ಇವುಗಳಿಗೆ ಒಂದನೆಯ, ಎರಡನೆಯ ಹಾಗೂ ಮೂರನೆಯ ಪ್ರಕಾರದ ಜೀವಿಗಳೆಂದು ಕರೆಯುತ್ತಿರುವರು. ಒಂದನೆಯ ಪ್ರಕಾರದ ಜೀವಿ ಪೋಲಿಯೋ ಪಿಡುಗುಗಳಿಗೆ ಕಾರಣವಾಗಿವೆ. ಈ ರೋಗಾಣು ವ್ಯಕ್ತಿಗಳಲ್ಲಿ ಸ್ನಾಯು ನಿರ್ಬಲತೆಯನ್ನು ಹೆಚ್ಚು ಪ್ರಮಾಣದಲ್ಲಿ ಉಂಟುಮಾಡುತ್ತದೆ. ಎರಡನೆಯ ಪ್ರಕಾರದ ಜೀವಿಗಳು ಅತಿ ವಿರಳವಾಗಿ ರೋಗವನ್ನುಂಟುಮಾಡುತ್ತವೆ. ಮೂರನೆಯ ಪ್ರಕಾರದ ರೋಗಾಣುಗಳು ಅಲ್ಲಿ ಇಲ್ಲಿ ಸ್ಥಳಜನ್ಯ ಕಾಯಿಲೆಗೆ ಕಾರಣವಾಗುವವು. ಕ್ವಚ್ಚಿತ್ತಾಗಿ ಇವು ಪೋಲಿಯೊ ಪಿಡುಗನ್ನುಂಟು ಮಾಡಬಹುದು.

ಮಾನವರಲ್ಲಿ ಒಂದು ವಿಧದ ವೈರಸ್‌ನಿಂದ ಸೋಂಕು ತಗಲಿದರೆ, ಇದರಿಂದ ಬೇರೆ ವಿಧಗಳ ವೈರಸ್‌ಗಳಿಂದ ಸೋಂಕಿಗೆ ರಕ್ಷಣೆ ದೊರೆಯುವುದಿಲ್ಲ. ಅಂದರೆ ತಾತ್ವಿಕವಾಗಿ ಒಬ್ಬ ರೋಗಿ ಮೂರು ಬಾರಿ ಪೋಲಿಯೊದಿಂದ ನರಳಬಹುದು.

ಪೋಲಿಯೊ ರೋಗಾಣುವಿನ ರಚನೆಯು ಎರಡು ಮುಖ್ಯ ಭಾಗಗಳನ್ನು ಒಳಗೊಂ

ಡಿದೆ. ಒಂದನೆಯದಾಗಿ ಹೊರಪದರ ಅಥವಾ ತೊಗಟೆ. ಇದು ಪ್ರೋಟೀನ್ ಪದಾರ್ಥಗಳಿಂದ ರಚಿಸಲ್ಪಟ್ಟಿರುತ್ತದೆ. ಹೊರಪದರದ ಕಾರ್ಯವು ಮಹತ್ವದ್ದು. ಅದು ಜೀವಿಯ ಒಳಭಾಗವನ್ನು ಅಥವಾ ಕಾಂಡವನ್ನು ರಕ್ಷಿಸುವುದು. ಹೊರಕೋಶದ ಸಹಾಯದಿಂದ ಮಾನವನ ಜೀವಕೋಶದೊಳಗಡೆ ನುಗ್ಗುವುದು. ಸೂಕ್ಷ್ಮ ರಸಕ್ರಿಯೆಯಿಂದ ತೊಗಟೆಯನ್ನು ಬೇರ್ಪಡಿಸಿದಾಗ ವೈರಸ್ ಜೀವ ಹಿಡಿದಿರುತ್ತದೆ. ಆದರೆ ಅದರ ಸೋಂಕುಗುಣ ನಾಶವಾಗುತ್ತದೆ ಮತ್ತು ಮಾನವನ ಜೀವಕೋಶದೊಳಗಡೆ ನುಸುಳುವುದು ಸಾಧ್ಯವಾಗುವುದಿಲ್ಲ. ಹೊರಪದರಿಗೆ ನಿಶ್ಚಿತ ಆಕಾರವಿದೆ. ಪ್ರೊಟೀನ್ ಕಣಗಳು ಪ್ರಾಥಮಿಕವಾಗಿ ಸಣ್ಣ ಸಣ್ಣ ಸಮಭುಜ ತ್ರಿಕೋನಾಕಾರದ ಇಟ್ಟಿಗೆಗಳ ರೂಪದಲ್ಲಿ ತೋರುವುದು. ಇವು ಒಂದಕ್ಕೊಂದು ಹೊಂದಿಕೊಂಡು ಪೂರ್ಣ ಹೊರಪದರವನ್ನು ರಚಿಸುತ್ತವೆ. ಈ ಕಾರಣದಿಂದಾಗಿಯೇ ಪೋಲಿಯೋ ವೈರಸ್ ಇಪ್ಪತ್ತು ಮುಖದ ವಜ್ರದ ಹರಳಿನ ರೂಪ ಪಡೆದಿರುತ್ತದೆ.

ವೈರಸ್ಸಿನ ಕೇಂದ್ರಭಾಗ ರೈಬೋ ನ್ಯೂಕ್ಲಿಯಿಕ್ ಆಮ್ಲದಿಂದ ರಚಿತವಾಗಿದ್ದು, ರೋಗಾಣುವಿನ ಸಂಖ್ಯಾಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸುವುದು. ಇದರ ರಕ್ಷಣೆಯನ್ನು ಹೊರಕವಚ ಮಾಡುವುದು. ಗಾತ್ರದಲ್ಲಿ ಈ ರೋಗಾಣು ಚಿಕ್ಕದಾದರೂ, ಸಾಮರ್ಥ್ಯದಲ್ಲಿ ಹಿರಿದು. ಇದು ಬಹು ಕಟುಜೀವಿ. ಶೀತದಲ್ಲಿ ಇವು ಹೆಚ್ಚು ದಿನಗಳ ವರೆಗೆ ಜೀವಿಸುವವು. ರೋಗಾಣುಗಳು - ೭೦ ಡಿಗ್ರಿ ಸೆಂ. ದಿಂದ - ೨೦ ಡಿಗ್ರಿ ಸೆಂ. ಉಷ್ಣತಾಮಾನದಲ್ಲಿ ಅನೇಕ ವರ್ಷಗಳವರೆಗೆ ಜೀವಿಸಬಲ್ಲವು. ಜಲಮಿಶ್ರಿತ ಮಲದಲ್ಲಿಯ ರೋಗಾಣುಗಳು ೪ ಡಿಗ್ರಿ ಸೆಂ.ನಲ್ಲಿದ್ದರೆ ಅವು ಅನೇಕ ತಿಂಗಳುಗಳವರೆಗೆ ಜೀವಿಸಬಲ್ಲವು. ಬೆನ್ನುಹುರಿಯಲ್ಲಿ ಸೇರಿಕೊಂಡ ಜೀವಿಗಳು ಗ್ಲಿಸೆರೋಲ್ ನೀರಿನಲ್ಲಿ ಅನೇಕ ವರ್ಷಗಳವರೆಗೆ ಬದುಕಿರಬಲ್ಲವು. ರೋಗಿಯ ಮಲದಲ್ಲಿ ವಿಸರ್ಜಿಸಲ್ಪಟ್ಟ ಪೋಲಿಯೋ ಜೀವಿಯು ಹೊರಗಿನ ಸಾಮಾನ್ಯ ಉಷ್ಣತಾಮಾನದಲ್ಲಿ ಒಂದು ದಿನದಿಂದ ಅನೇಕ ವಾರಗಳವರೆಗೆ ಜೀವಿಸುತ್ತವೆ. ಜೀವಿಸುವ ಅವಧಿಯು ಮಲದಲ್ಲಿಯ ಪೋಲಿಯೊ ಜೀವಿಗಳ ಪ್ರಮಾಣ, ನೀರಿನ ಅಂಶ ಹಾಗೂ ಆಮ್ಲತೆಯನ್ನು ಅವಲಂಬಿಸಿರುವುದು.

ತೀಕ್ಷ್ಣವಾದ ಆಮ್ಲ ಅಥವಾ ಕ್ಷಾರಗಳನ್ನು ಬಳಸಿ ಈ ವೈರಸ್‌ಗಳನ್ನು ನಾಶಪಡಿಸಬಹುದು. ಇವುಗಳನ್ನು ೫೫ ಡಿಗ್ರಿ ಸೆಂ. ಉಷ್ಣತಾಮಾನದಲ್ಲಿ ಅರ್ಧ ತಾಸಿನ ವರೆಗೆ ಇಟ್ಟರೂ ಅವು ನಾಶವಾಗುವವು. ಹೈಡ್ರೋಜನ್ ಪೆರೋಕ್ಸೈಡ್ ಹಾಗೂ ಪೊಟ್ಯಾಶಿಯಂ ಪರಮಾಂಗನೇಟ್‌ದಂಥ ಉತ್ಕರ್ಷಕ ವಸ್ತುಗಳು ಇವುಗಳನ್ನು ತ್ವರಿತವಾಗಿ ನಾಶಪಡಿಸುವವು. ನೀರನ್ನು ಶುದ್ಧೀಕರಿಸಲು ಬಳಸುವ ಬ್ಲೀಚಿಂಗ್ ಪೌಡರ್ ಪೋಲಿಯೋ ವೈರಸ್ಸನ್ನು ಸಂವಹರಿಸಲು ಅರ್ಧ ತಾಸು ತೆಗೆದುಕೊಳ್ಳುವುದು. ಸೂರ್ಯನ ಅತಿ ನೇರಳೆ ಕಿರಣಗಳು ಈ ಜೀವಿಗಳನ್ನು ನಾಶಪಡಿಸುವಲ್ಲಿ ವಿಫಲವಾಗುವುದೇ ಹೆಚ್ಚು.

## ರೋಗ ಪ್ರಸಾರ

ಈ ರೋಗವು ಪಿಡುಗು ರೂಪದಲ್ಲಿ ಸ್ಥಳಜನ್ಯವಾಗಿ, ವಿರಳವಾಗಿ ತೋರಿಬರಬಹುದಾದರೂ, ಮಾನವ ಮಾತ್ರ ಈ ರೋಗಾಣುಗಳ ಮೂಲವಾಗಿರುವುದರಿಂದ ಬಳಲುತ್ತಿರುವ ರೋಗಿ ಮತ್ತು ರೋಗವಾಹಕರು ಈ ರೋಗಪ್ರಸಾರದಲ್ಲಿ ಪ್ರಮುಖ ಪಾತ್ರ ವಹಿಸುತ್ತಾರೆ. ವ್ಯಕ್ತಿಯು ಈ ರೋಗದಿಂದ ಬಳಲುತ್ತಿದ್ದಾಗ ರೋಗಾಣುಗಳು ರೋಗಿಯ ಕೇಂದ್ರ ನರಮಂಡಲದಲ್ಲಿ ಅಲ್ಲದೆ ಕಣಜಾಲಗಳಲ್ಲೂ ಬೆಳೆಯುತ್ತಿರುತ್ತವೆ. ಇಂಥ

ಕಣಜಾಲದಲ್ಲಿ ಮೂಗು, ಗಂಟಲುಗಳ ಲೋಳ್ಪರೆ, ಕರುಳಿನ ಲೋಳ್ಪರೆಗಳು ಮುಖ್ಯವಾಗಿದ್ದು ಅಲ್ಲಿಂದ ರೋಗಾಣುಗಳು ವಿಸರ್ಜಿಸಲ್ಪಡುತ್ತವೆ.

ಪ್ರಾರಂಭದ ಹಂತದಲ್ಲಿ ರೋಗಾಣುಗಳು ಮೂಗು, ಗಂಟಲುಗಳು ಸ್ರವಿಕೆಗಳಲ್ಲಿಂದ ಹೆಚ್ಚಿನ ಪ್ರಮಾಣದಲ್ಲಿ ಹೊರಹಾಕಲ್ಪಡುತ್ತಿರುತ್ತವೆ. ಕೆಮ್ಮುವುದು, ಸೀನುವುದು, ಜೋರಾಗಿ ಉಗುಳುವುದು, ಮಾತನಾಡುವುದು, ಶ್ವಾಸ ಬಿಡುವುದು, ಆಕಳಿಸುವುದು ಮುಂತಾದ ಚಟುವಟಿಕೆಗಳಿಂದ ಪೋಲಿಯೋ ವೈರಸ್‌ಗಳು ಹೊರಗಿನ ಪರಿಸರಕ್ಕೆ ಪಾದಾರ್ಪಣೆ ಮಾಡುತ್ತವೆ. ಇವೆಲ್ಲವುಗಳಲ್ಲಿ ಸೀನುವುದು ಬಹಳ ಅಪಾಯಕರವಾದ ಕ್ರಿಯೆ; ಒಮ್ಮೆ ಸೀನಿದರೆ ಸುಮಾರು ೨೦,೦೦೦ ತುಂತುರುಗಳು ಹೊರಬರುತ್ತವೆ. ಕೆಮ್ಮಿದಾಗ ಇದಕ್ಕಿಂತ ಕಡಿಮೆ ಸಂಖ್ಯೆಯಲ್ಲಿ ತುಂತುರುಗಳು ಹೊರಬರುತ್ತವೆ.

ಸೀನಿದಾಗ ಅಥವಾ ಕೆಮ್ಮಿದಾಗ ಹೊರಬೀಳುವ ತುಂತುರುಗಳಲ್ಲಿ ೦.೧ ಮಿಮಿ ಗಾತ್ರದ ತುಂತುರುಗಳು ರೋಗಿಯಿಂದ ಕನಿಷ್ಠ ೫ ರಿಂದ ೧೫ ಅಡಿಗಳವರೆಗೆ ಹೋಗುತ್ತವೆ. ವಾತಾವರಣದಲ್ಲಿ ಬಹಳ ಕಾಲದ ವರೆಗೆ ಇವು ತೇಲುತ್ತ ನಿಲ್ಲಲಾರವು; ರೋಗಿಯ ನಿಕಟವರ್ತಿಗಳ ಶ್ವಾಸದಲ್ಲಿ ಸೇರಲು ಮಾತ್ರ ಸಾಧ್ಯ. ಇಲ್ಲದೆ ಹೋದಲ್ಲಿ ಅವು ತಮ್ಮ ಭಾರದಿಂದಾಗಿ ನೆಲಕ್ಕೆ, ಹಾಸಿಗೆ ಹೊದಿಕೆಗಳ ಮೇಲೆ ಬೀಳುವವು. ತುಂತುರದ ನೀರು ಆವಿಯಾಗಿ ಹೋದಮೇಲೆ ಅದರಲ್ಲಿಯ ರೋಗಾಣುಗಳು ಧೂಳೀಕಣಗಳ ಮೇಲೆ ಕುಳಿತು ಪರಿಸರದಲ್ಲಿ ತೇಲುತ್ತವೆ. ಶ್ವಾಸದ ಮೂಲಕ ಉಳಿದವರಲ್ಲಿ ಸೇರುತ್ತವೆ. ಚಳಿಗಾಲದ ಒಣಹವೆಯು ಈ ತರದ ರೋಗ ಪ್ರಸಾರಕ್ಕೆ ಹೆಚ್ಚು ಅನುಕೂಲ.

ತುಂತುರು ಹನಿಗಳ ಗಾತ್ರ ೦.೧ ಮಿ.ಮಿ. ಗಿಂತ ಚಿಕ್ಕದಾಗಿದ್ದರೆ, ರೋಗಿಯು ಸೀನಿದಾಗ ಇಲ್ಲವೆ, ಕೆಮ್ಮಿದಾಗ ೨ ರಿಂದ ೩ ಅಡಿ ದೂರು ಸಿಡಿಯುತ್ತವೆ. ಇವು ತುಂಬಾ ಹಸಿಯಾಗಿದ್ದು ಹವೆಯಲ್ಲಿ ತೇಲುತ್ತಿರುತ್ತವೆ. ಈ ಸಂದರ್ಭದಲ್ಲಿ ರೋಗಾಣುಗಳ ಸುತ್ತ ಆವೃತ್ತವಾಗಿರುವ ನೀರಿನ ಅಂಶ ಆವಿಯಾಗಿ ಹೋಗುವುದು. ಆಗ ಅವುಗಳ ಗಾತ್ರ ಮತ್ತಷ್ಟು ಕುಗ್ಗುವುದು. ಈ ಗಾತ್ರದ ಕಣಗಳು ಪರಿಸರದಲ್ಲಿ ತೇಲುತ್ತಲೇ ಉಳಿಯುವವು. ಗಾಳಿಯೊಡನೆ ಪ್ರಯಾಣ ಬೆಳೆಸುವವು. ರೋಗದ ಪ್ರಾರಂಭದಿಂದ ಮಧ್ಯಭಾಗದವರೆಗೂ ರೋಗಾಣುಗಳು ರೋಗಿಯ ಗಂಟಲು ಮತ್ತು ಮೂಗಿನಿಂದ ವಿಸರ್ಜಿಸಲ್ಪಡುತ್ತಿರುತ್ತವೆ. ಹೀಗಾಗಿ ರೋಗ, ಸಾಂಕ್ರಾಮಿಕ ಸ್ವರೂಪ ತಾಳುವಲ್ಲಿ ಪ್ರಮುಖ ಪಾತ್ರ ವಹಿಸುವವು.

ಕರುಳಿನ ಲೋಳ್ಪರೆಯಲ್ಲಿ ಬೆಳೆದ ರೋಗಾಣುಗಳು ಮಲದ ಮೂಲಕ ವಿಸರ್ಜಿಸಲ್ಪಡುತ್ತವೆ. ಈ ಕಾರ್ಯವು ರೋಗದ ಆದಿಯಿಂದ ಅಂತ್ಯದ ವರೆಗೂ ಹಾಗೂ ರೋಗವು ಗುಣವಾದ ಅನೇಕ ದಿನಗಳ ವರೆಗೂ ನಡೆಯುತ್ತದೆ. ಮಲದ ಕಶ್ಮಲತೆಯಿಂದ ಆಗುವ ರೋಗಪ್ರಸಾರವು ಅತಿ ಮುಖ್ಯವಾದುದು. ರೋಗಿಯ ಮಲವನ್ನು ತೋಟಪಟ್ಟಿಗಳಲ್ಲಿ ಗೊಬ್ಬರದಂತೆ ಉಪಯೋಗಿಸಿದರೆ ಅಲ್ಲಿ ಬೆಳೆಯುವ ಕಾಯಿಪಲ್ಲೆ, ಗಜ್ಜರಿ, ಗೆಣಸುಗಳು ಕಶ್ಮಲಗೊಂಡು ರೋಗ ಹರಡಲು ಸಹಕರಿಸುತ್ತವೆ. ಮಲದಿಂದ ಆಕಸ್ಮಾತ್ ಕುಡಿಯುವ ನೀರು ಕಲುಷಿತಗೊಂಡಲ್ಲಿ ಈ ರೋಗವು ಸಾಂಕ್ರಾಮಿಕವಾಗಿ ಮಾರ್ಪಡುವುದು. ಡಿಕ್ ಎಂಬ ತಜ್ಞರ ಸಂಶೋಧನೆಯ ಫಲವಾಗಿ ಕೆಲವೊಂದು ಮಹತ್ವದ ಸಂಗತಿಗಳು ಬೆಳಕಿಗೆ ಬಂದಿವೆ. ಕೆಲವೊಂದು ಕುಟುಂಬಗಳ ಜನರು ಪೋಲಿಯೊ ರೋಗಾಣುಗಳನ್ನು ಹೆಚ್ಚು ಸಂಖ್ಯೆಯಲ್ಲಿ ವಿಸರ್ಜಿಸುವುದು ಕಂಡುಬಂದಿದೆ. ಇಂಥ ಕುಟುಂಬಗಳಿಗೆ "ಬಿಸಿ ಕುಟುಂಬಗಳು" ಎಂದು ಕರೆಯುವರು. ಈ ಜನರು ರೋಗಪ್ರಸಾರದಲ್ಲಿ ಮುಖ್ಯ ಪಾತ್ರ ವಹಿಸುವರು.

ಮಲದಿಂದ ರೋಗಾಣುಗಳನ್ನು ನೊಣಗಳು ತಮ್ಮ ಕಾಲಿನಲ್ಲಾಗಲಿ ಸೊಂಡಿಲಲ್ಲಾಗಲಿ, ಹೊತ್ತು ತಂದು ತಿಂಡಿ ತೀರ್ಥಗಳ ಮೇಲೆ ಕುಳಿತು ಕೊಳ್ಳುವುದರಿಂದ ಅವುಗಳಿಗೆ ರೋಗಾಣುಗಳ ಬಳುವಳಿ ಧಾರಾಳವಾಗಿ ಸಿಗುತ್ತದೆ. ಅಂತಹ ಪದಾರ್ಥಗಳ ಸೇವನೆಯಿಂದ ರೋಗ ಪ್ರಸಾರವಾಗುವದು. ಮಳೆಗಾಲದಲ್ಲಿ ಕೆರೆಕಟ್ಟುಗಳು, ಹೊಳೆ ಹಳ್ಳಗಳು ತುಂಬಿ ಹರಿಯುವುದರಿಂದ ರೋಗಿಯ ಮಲದಲ್ಲಿ ವಿಸರ್ಜಿಸಲ್ಪಟ್ಟ ರೋಗಾಣುಗಳನ್ನು ಹೊತ್ತು ಒಯ್ಯಲು ಸಾಧ್ಯವಾಗುವುದು. ಹೀಗಾಗಿ ರೋಗ ಪ್ರಸಾರದ ಬಿಸಿ ದೂರದ ಊರಿಗೂ ಮುಟ್ಟಬಹುದು. ಹಾಲಿನಲ್ಲಿ ನೀರನ್ನು ಬೆರೆಸಿ ಮಾರುವುದು ಸರ್ವಸಾಮಾನ್ಯ ಒಂದು ವೇಳೆ ನೀರು ಕಶ್ಮಲಗೊಂಡಿದ್ದರೆ ಹಾಲಿನ ಮೂಲಕ ಈ ರೋಗ ಹರಡುವ ಸಾಧ್ಯತೆ ಇದೆ.

ಗರ್ಭಿಣಿಯಿಂದ ಶಿಶುವಿಗೆ ಆಗುವ ರೋಗಪ್ರಸಾರ ಅತ್ಯಂತ ವಿರಳ. ಗರ್ಭಿಣಿಯು ಒಂದು ವೇಳೆ ಪೋಲಿಯೋ ಪೀಡೆಗೆ ತುತ್ತಾದಲ್ಲಿ ರೋಗದ ಒಂದು ಹಂತದಲ್ಲಿ ಪೋಲಿಯೋ ವೈರಸ್‌ಗಳು ರಕ್ತದಲ್ಲಿ ಸಂಚರಿಸುತ್ತಿರುತ್ತವೆ. ರಕ್ತ ಸಂಚಾರದ ಮೂಲಕ ವೈರಸ್ ಉಡುಗೊರೆ ಪಿಂಡಕ್ಕೂ ಸಿಗುವುದು. ಗರ್ಭದಲ್ಲಿಯ ಪಿಂಡ ಆರು ತಿಂಗಳೊಳಗಿನದಾಗಿದ್ದರೆ ಪೋಲಿಯೊ ಪೀಡೆಯಿಂದ ಪಾರಾಗುವುದು. ಒಂದು ವೇಳೆ ಗರ್ಭದಲ್ಲಿಯ ಶಿಶು ಆರು ತಿಂಗಳಿಗಿಂತ ಹೆಚ್ಚಾಗಿದ್ದಲ್ಲಿ ಪೋಲಿಯೊ ಅಪಾಯ ಹೆಚ್ಚಾಗಿರುತ್ತದೆ. ತಾಯಿಯಿಂದ ರಕ್ತದ ಮೂಲಕ ಶಿಶುವು ಪೋಲಿಯೊ ವೈರಸ್‌ಅನ್ನು ಬಳುವಳಿಯಾಗಿ ಪಡೆಯುವುದು. ಪಿಂಡದ ರಕ್ತದಲ್ಲಿ ಹರಿದಾಡುವ ವೈರಸ್‌ಗಳು ನರಮಂಡಲಕ್ಕೆ ನುಗ್ಗುವವು. ನರಕೋಶಗಳನ್ನು ನಾಶಪಡಿಸುವವು. ಸಂಜಾತ ಪೋಲಿಯೊ ಕಾಣಿಕೆಯನ್ನು ಕೂಸಿಗೆ ಕೊಡುವವು. ಮಗುವು ಹುಟ್ಟಿದ ತಕ್ಷಣ ಈ ಸಂಗತಿಯು ಅಸ್ಪಷ್ಟವಾಗಿದ್ದರೂ ಮಗುವು ಚಲಿಸಲು ಪ್ರಾರಂಭಿಸಿದಾಗ ಸ್ನಾಯು ದುರ್ಬಲತೆಯು ಪ್ರಕಟಗೊಳ್ಳುವುದು.

ರೋಗಿಯ ಎಂಜಲು, ಪಾತ್ರೆ ಪಗಡೆಗಳು, ಆಟಿಗೆ ವಸ್ತುಗಳು, ಒಸ್ತ್ರ ವಡವೆಗಳು ಸಹ ರೋಗ ಪ್ರಸಾರದಲ್ಲಿ ಕೆಲಮಟ್ಟಿಗೆ ಸಹಾಯಕವಾಗುವವು. ಒಟ್ಟಿನಲ್ಲಿ ಪೋಲಿಯೊ ರೋಗ ಪ್ರಸಾರವು ಆಹಾರ ವಿಹಾರ ಮತ್ತು ಪೇಯಗಳ ಕಶ್ಮಲತೆಯಿಂದ ಹೆಚ್ಚಾಗಿ ನಡೆಯುವುದು ಎಂದು ಘಂಟಾಘೋಷವಾಗಿ ಹೇಳಬಹುದು.

ಮಾನವನ ದೇಹವನ್ನು ಪೋಲಿಯೋ ವೈರಸ್‌ಗಳು ಗಂಟಲು ಇಲ್ಲವೆ ಕರುಳಿನ ಮೂಲಕ ಸೇರಿಕೊಂಡು, ಅಲ್ಲಿಯ ಲೋಳ್ಪರೆಯ ಜೀವಕೋಶಗಳಲ್ಲಿ ಸ್ವಲ್ಪ ಮಟ್ಟಿಗೆ ವೃದ್ಧಿಗೊಂಡು, ಹಾಲ್ರಸ ವಾಹಿನಿಯ ಮಾರ್ಗವಾಗಿ ಆಯಾ ಭಾಗದ ಹಾಲ್ರಸ ಗ್ರಂಥಿಗಳನ್ನು ತಲುಪಿ, ಎಲ್ಲ ರೀತಿಯ ಅನುಕೂಲಗಳನ್ನು ಪಡೆದು ಅವಿರತವಾಗಿ ಬೆಳೆಯುತ್ತವೆ. ಇಲ್ಲಿಂದ ಹಾಲ್ರಸವಾಹಿನಿಗಳ ಮೂಲಕ ರಕ್ತದಲ್ಲಿ ಮಿಶ್ರಿತವಾಗುತ್ತವೆ. ಇದರಿಂದ ವ್ಯಕ್ತಿಯಲ್ಲಿ 'ವೈರೇಮಿಯಾ' ಉಂಟಾಗುವುದು. ರಕ್ತ ಸಂಚಾರದ ಮುಖಾಂತರ ದೇಹದ ವಿವಿಧ ಕಣಜಾಲಗಳಲ್ಲಿ ಸೇರುವವು. ಎರಡನೆಯ ಹಂತವಾಗಿ ಅಲ್ಲಿ ಅಸಂಖ್ಯಾತವಾಗಿ ಅಭಿವೃದ್ಧಿಗೊಳ್ಳುವವು ಹಾಗೂ ರಕ್ತದಲ್ಲಿ ಮತ್ತೆ ಸೇರುವವು. ನರಮಂಡಲವನ್ನು ಕಂಡರೆ ಇವಕ್ಕೆ ವಿಶೇಷ ಆಕರ್ಷಣೆ. ರಕ್ತ, ದುಗ್ಧ ಹಾಗೂ ನರಜಾಲಗಳ ಮುಖಾಂತರ ಮಿದುಳುಬಳ್ಳಿ, ಮಿದುಳು, ಹಿಮ್ಮಿದುಳುಗಳಿಗೆ ಲೀಲಾಜಾಲವಾಗಿ ಹಬ್ಬುತ್ತವೆ. ಮಿದುಳುಬಳ್ಳಿಯಿಂದ ಹೊರಡುವ ಪ್ರತಿನರದ ಮುಂಬೇರುಗಳಲ್ಲಿಯ ಅಣುಕೋಶಗಳನ್ನು ಆಕ್ರಮಿಸಿ ರೋಗಿ ತಬ್ಬಿಬ್ಬಾಗುವಂತೆ ಮಾಡುತ್ತವೆ.

ಪೋಲಿಯೋ ವೈರಸ್ ನರಮಂಡಲವನ್ನು ತಲುಪಲು ಇನ್ನೊಂದು ಮಾರ್ಗವಿದೆ.

ಗಾಯಗೊಂಡ ನರಗಳ ಸಂಪರ್ಕದಲ್ಲಿ ರೋಗಾಣುಗಳು ಬಂದರೆ ಸುಲಭವಾಗಿ ಅವು ಅಲ್ಲಿ ಸೇರಿಕೊಂಡು ಅಲ್ಲಿಂದ ಅವು ನೇರವಾಗಿ ನರಮಂಡಲವನ್ನು ಮುತ್ತುವವು. ಈ ವಿಧವಾದ ರೋಗಾಣುವಿನ ಪ್ರಸಾರವನ್ನು ಕೆಲವರು ಪ್ರಶ್ನಿಸಿದ್ದಾರೆ. ಆದರೆ ಈ ವಿಧಾನವನ್ನು ಬೆಂಬಲಿಸಲು ಅನೇಕ ಉದಾಹರಣೆಗಳು ಸಿಗುತ್ತವೆ. ಪೋಲಿಯೊ ಸಾಂಕ್ರಾಮಿಕದಲ್ಲಿ ಮಕ್ಕಳ ಮೆಂಡಿಕೆ (Tonsil)ಗಳನ್ನು ಶಸ್ತ್ರಕ್ರಿಯೆಯಿಂದ ತೆಗೆದುಹಾಕಿದರೆ ಆ ಮಗುವಿನಲ್ಲಿ ಪೋಲಿಯೊದ ದುಷ್ಪರಿಣಾಮಗಳು ಬಹು ಬೇಗನೆ ತೋರುತ್ತವೆ. ಇದೇ ರೀತಿಯಾಗಿ ದೇಹದಲ್ಲಿಯ ಯಾವುದಾದರೂ ನರಗಳು ಗಾಯಗೊಂಡರೆ ಆ ಭಾಗದಲ್ಲಿ ಸ್ನಾಯು ದುರ್ಬಲತೆ ತೋರುವುದು ಹೆಚ್ಚು. ನರಗಳು ಪೆಟ್ಟಿನಿಂದ, ಶಸ್ತ್ರಕ್ರಿಯೆಯಿಂದ, ಚುಚ್ಚುಮದ್ದುಗಳಿಂದ ಗಾಸಿಗೊಳ್ಳುವವು. ಗಾಯಗೊಂಡ ನರಗಳು ನೇರ ದಾರಿಗಳಂತೆ ವರ್ತಿಸಿ ರೋಗಾಣುಗಳು ಕೇಂದ್ರ ನರಮಂಡಲ ತಲುಪುವಂತೆ ಮಾಡುವವು.

## ರೋಗದ ಲಕ್ಷಣಗಳು

ಈ ರೋಗದ ಅಧಿಶಯನ ಕಾಲ ಏಳರಿಂದ ಹದಿನಾಲ್ಕು ದಿನಗಳು. ಒಮ್ಮೆಲೇ ಕಾಣಿಸಿಕೊಳ್ಳುವ ಜ್ವರದ ಮೂಲಕ ಈ ರೋಗವು ತನ್ನ ಪ್ರಥಮ ಸುಳಿವನ್ನು ಹೊರಗೆಡಹುವುದು. ಜ್ವರದ ಮಟ್ಟ ಸುಮಾರು ೧೦೨ ಡಿಗ್ರಿ ಯಿಂದ ೧೦೪ ಡಿಗ್ರಿಯವರೆಗೆ ಇರಬಹುದು. ಜ್ವರದ ಸಂಗಾತಿಯಾಗಿ ಮೈಕೈ ನೋವು, ತಲೆಸಿಡಿತ, ಉಬ್ಬಳಿಕೆ, ವಾಂತಿ ಮತ್ತು ಗಂಟಲು ಬೇನೆಗಳು ತಲೆಯೆತ್ತುವವು. ೨೪ ಗಂಟೆಗಳ ನಂತರ ಕೈಕಾಲುಗಳ ಸ್ನಾಯುಗಳ ಸೆಳೆತ, ಜಗಿತ ಹಾಗೂ ಬಂಧನಕ್ಕೆ ತುತ್ತಾಗಬಹುದು. ಆದರೆ ಕೆಲವು ದಿನಗಳ ನಂತರ ಮಗು ಮತ್ತೆ ಮೊದಲಿನಂತೆ ಓಡಾಡುತ್ತದೆ. ರೋಗಿಯಲ್ಲಿ ರೋಗದ ಅವಶೇಷಗಳು ಯಾವವೂ ಉಳಿಯುವುದಿಲ್ಲ. ಇವೆಲ್ಲಾ ನಿರರ್ಥಕ ಪೋಲಿಯೊ ಲಕ್ಷಣಗಳು. ಶೇಕಡಾ ೯೦ ರಿಂದ ೯೫ ಭಾಗದ ಪೋಲಿಯೊ ರೋಗಿಗಳು ಅವ್ಯಕ್ತ ಅಥವಾ ಸೌಮ್ಯ ಸೋಂಕನ್ನು ಹೊಂದಿರುವುದರಿಂದ ಅವುಗಳ ರೋಗ ನಿರ್ಣಯ ಆಗದೆ ಹೋಗುವ ಸಂಭವೇ ಹೆಚ್ಚು. ಇವು ಮರುಸೋಂಕನ್ನು ತಡೆಗಟ್ಟುತ್ತವೆ. ಬಹುಶಃ ವಯಸ್ಕರಲ್ಲಿ ಈ ಕಾಯಿಲೆ ಅಪರೂಪವಾಗಿ ಕಂಡುಬರುವುದಕ್ಕೆ ಇದೇ ಮುಖ್ಯ ಕಾರಣವಾಗಿರಬಹುದು.

ಅಲಕ್ವ ಪೋಲಿಯೊ (Non-paralytic poliomyelitis)ದಲ್ಲಿ ಪೂರ್ವಭಾವಿ ಚಿಹ್ನಗಳಾಗಿ ಮಿದುಳಿನ ಪೊರೆಯುರಿತ, ಬೆನ್ನುಹುರಿಯ ದ್ರವದಲ್ಲಿ ಅಸಹಜ ಲಕ್ಷಣಗಳು ಕಂಡುಬರುತ್ತವೆ. ಕುತ್ತಿಗೆಯ ಮತ್ತು ಬೆನ್ನಿನ ಬಿಗಿತ, ನಿರ್ದಿಷ್ಟವಾದ ಕರ್ನಿಂಗರನ ಚಿಹ್ನಗಳು, ಮಿದುಳಿನ ಪೊರೆಯ ಕೆರಳುವಿಕೆಯುಂಟಾದಾಗ ಕಾಲು ಮತ್ತು ಕತ್ತುಗಳಲ್ಲಿ ಸಕಾರಾತ್ಮಕ ಬ್ರುಡ್‌ಝಿನ್‌ಸ್ಕಿಯವರ ಚಿಹ್ನಗಳು ಕಂಡು ಬರುತ್ತವೆ. ತ್ರಿಪಾದ ಚಿಹ್ನದ ರೋಗಿ ಕುಳಿತುಕೊಳ್ಳುವಾಗ ತನ್ನ ಎರಡೂ ಕೈಗಳನ್ನು ಹಿಂದಕ್ಕೆ ಚಾಚಿ ಹಸ್ತವನ್ನು ಹಾಸಿಗೆಯ ಮೇಲೆ ಆಸರೆಗಾಗಿ ಇಟ್ಟುಕೊಳ್ಳುತ್ತಾನೆ. ಮತ್ತು ಹೋಯ್ನಯವರ ಚಿಹ್ನವಿರುವ ರೋಗಿ ಅಂಗಾತಾಗಿ ಮಲಗಿರುವಾಗ ಅವನ ಭುಜವನ್ನು ಮೇಲಕ್ಕೆತ್ತಲು ಕತ್ತು ಹಿಂದಕ್ಕೆ ಬೀಳುತ್ತದೆ. ಇವು ಲಕ್ವ ಹಾಗೂ ಲಕ್ವ ಪೋಲಿಯೊಗಳಲ್ಲಿ ಕಂಡುಬಂದರೂ ಇವು ರೋಗಸೂಚಕಗಳಲ್ಲ ಎಂಬುದನ್ನು ಮರೆಯಬಾರದು. ಕೇವಲ ರೋಗದ ಲಕ್ಷಣಗಳ ಆಧಾರದ ಮೇಲೆ ಅಲಕ್ವ ಪೋಲಿಯೊ ರೋಗದ ನಿದಾನ ಅಸಾಧ್ಯ. ಏಕೆಂದರೆ ಈ ಕಾಯಿಲೆಯಲ್ಲಿ ಕಂಡು ಬರುವ ಲಕ್ಷಣಗಳು, ಚಿಹ್ನಗಳು ಮತ್ತು ಪ್ರಯೋಗಶಾಲೆಯ ಪರೀಕ್ಷೆಗಳ ಫಲಿತಾಂಶಗಳು ತುಂಬಾ ಅನಿರ್ದಿಷ್ಟವಾಗಿರುತ್ತವೆ.

ಉಗ್ರಸ್ವರೂಪದ ಪೋಲಿಯೋದಲ್ಲಿ ತಲೆನೋವು, ಉಬ್ಬಳಿಕೆ, ವಾಂತಿಗಳು ಸಹಿಸಲ ಸಾಧ್ಯವಾಗುತ್ತದೆ. ಕತ್ತು, ಬೆನ್ನುಹುರಿ ಮತ್ತು ಅಂಗಾಂಗಗಳ ಸ್ನಾಯುಗಳು ಬಿಗಿಯುವುದ ರಿಂದಾಗಿ ಕುತ್ತಿಗೆ, ಬೆನ್ನು ಸೆಟೆದಂತೆ ತೋರಬಹುದು. ಕಾರಣ ಬೆನ್ನು ಬಾಗಿಸಲು ಬರುವುದಿಲ್ಲ. ಈ ಹಂತದಲ್ಲಿ ರೋಗಿಯ ಮನದ ಸಹನೆಯ ಸೀಮೋಲ್ಲಂಘನವಾಗಿ ತಳಮಳಗೊಳ್ಳುತ್ತಾನೆ. ಕೆಲವು ರೋಗಿಗಳಲ್ಲಿ ರೋಗವು ಈ ಮಟ್ಟಕ್ಕೆ ನಿಂತು, ದಿನಗಳುರುಳಿದಂತೆ ಎಲ್ಲ ಲಕ್ಷಣಗಳೂ ಒಂದೊಂದಾಗಿ ಮಾಯವಾಗಿ ಮೊದಲಿನಂತಾ ದರೆ ಕೆಲವು ದುರ್ದೈವಿಗಳಲ್ಲಿ ರೋಗವು ತನ್ನ ಬಲವಾದ ಬಾಹುಗಳನ್ನು ಮುಂದೆ ಚಾಚಿ, ತಬ್ಬಿ ತಲ್ಲಣಗೊಳಿಸುತ್ತದೆ. ಸ್ನಾಯುಗಳಲ್ಲಿ ನೋವು ಹೆಚ್ಚುತ್ತದೆ. ಸ್ನಾಯುಗಳು ಸ್ವಾಧೀನ ಕಳೆದುಕೊಳ್ಳುತ್ತವೆ.

ಸಾಮಾನ್ಯವಾಗಿ ರೋಗಿಯ ತೋಳುಗಳ ಇಲ್ಲವೆ ಕಾಲುಗಳ ಸ್ನಾಯುಗಳ ನಿರ್ಬಲ ತೆಯಿಂದಾಗಿ ಆ ಭಾಗದ ಹಿಡಿತ ತಪ್ಪುತ್ತದೆ. ಇದರಂತೆ ಬೇರೆ ಬೇರೆ ರೋಗಿಗಳಲ್ಲಿ ಬೇರೆ ಬೇರೆ ಸ್ನಾಯುಗಳು ಸಮೂಹ ಬಳಕೆಗೆ ತುತ್ತಾಗಿ ಆ ಭಾಗದ ದೌರ್ಬಲ್ಯ, ಸ್ವಾಧೀನ ತಪ್ಪುವಿಕೆ ತಲೆದೋರುತ್ತದೆ.

ಐದು ವರ್ಷದೊಳಗಿನ ಮಕ್ಕಳಲ್ಲಿ ಒಂದೇ ಕಾಲಿನಲ್ಲಿ ನಿಶ್ಶಕ್ತಿ ಕಾಣುವುದು ಸರ್ವೆ ಸಾಮಾನ್ಯ. ೫ ರಿಂದ ೧೫ ವರ್ಷದ ರೋಗಿಗಳಲ್ಲಿ ಒಂದೇ ರಟ್ಟೆಯಲ್ಲಿ ನಿಶ್ಶಕ್ತಿ ಕಾಣಬಹುದು. ಇಲ್ಲವೆ ಮುಂಡದ ಕೆಳಭಾಗ ಮತ್ತು ಎರಡು ಕಾಲುಗಳಿಗೂ ಲಕ್ವ ಹೊಡೆಯುವುದು ಕಂಡುಬರುತ್ತದೆ. ದೊಡ್ಡವರಲ್ಲಿ ೧೬ ರಿಂದ ೬೫ ವರ್ಷದ ವರೆಗೆ ಎರಡು ಕಾಲು ಮತ್ತು ಎರಡು ತೋಳುಗಳಿಗೂ ಲಕ್ವ ಹೊಡೆಯುವುದು ಅನೇಕ ವೇಳೆ ಕಾಣಬರುತ್ತದೆ. ಮೂತ್ರಕೋಶದ ಕ್ರಮಹೀನ ಕ್ರಿಯೆ ತಲೆದೋರಬಹುದು. ದೊಡ್ಡವರಲ್ಲಿ ಮಕ್ಕಳಿಗಿಂತ ಹತ್ತುಪಟ್ಟು ಹೆಚ್ಚಾಗಿ ಇದು ಕಾಣಿಸಿಕೊಳ್ಳುತ್ತದೆ. ವಯಸ್ಸಾದವರಲ್ಲಿ ಉಸಿರಾಟದ ಸ್ನಾಯುಗಳಿಗೆ ಲಕ್ವ ಹೊಡೆಯುವುದು ಸಾಮಾನ್ಯ.

ಮಾಂಸಖಂಡಗಳಿಗೆ ನಿಶ್ಶಕ್ತಿಯುಂಟಾಗುವ ಸ್ಥಳ ಬೆನ್ನುಹುರಿಗೆ ತೊಂದರೆಯಾದ ಭಾಗಕ್ಕೆ ಅನುಗುಣವಾಗಿರುತ್ತದೆ. ಕತ್ತು, ಎದೆ, ಟೊಂಕದ ಭಾಗಗಳ ಬೆನ್ನುಹುರಿಗೆ ಪ್ರತ್ಯೇಕವಾಗಿ ಸೋಂಕು ತಗಲಬಹುದು. ಇಲ್ಲವೆ ಒಂದಾದ ಮೇಲೊಂದರಂತೆ ಸೋಂಕು ತಗಲಬಹುದು. ಸಾಮಾನ್ಯವಾಗಿ ಟೊಂಕದ ಭಾಗದ ಬೆನ್ನುಹುರಿಗೆ ಹೆಚ್ಚಾಗಿ ಅಪಾಯ ವುಂಟಾಗುತ್ತದೆ. ಆಗ ಬೆನ್ನಿನ, ಹೊಟ್ಟೆಯ ಕೆಳಭಾಗದ ಮತ್ತು ಕಾಲುಗಳ ಮಾಂಸಖಂ ಡಗಳಲ್ಲಿ ನಿಶ್ಶಕ್ತಿ ಕಾಣಿಸಿಕೊಳ್ಳುತ್ತದೆ. ಮೂತ್ರಕೋಶದ ಲಕ್ವ ಸಾಮಾನ್ಯವಾಗಿ ತಾತ್ಕಾಲಿಕ ವಾಗಿರುತ್ತದೆ. ಮಲಬದ್ಧತೆ ಸಾಮಾನ್ಯ ತೊಂದರೆಯಾಗಿರುತ್ತದೆ. ಹೊಟ್ಟೆಯ ಸ್ನಾಯುಗಳ ಲ್ಲಿಯ ನಿಶ್ಶಕ್ತಿಯಿಂದಾಗಿ, ಮಗು ಅಳುವಾಗ ಆ ಭಾಗ ಉಬ್ಬಿಕೊಳ್ಳುವುದು. ಇದಕ್ಕೆ 'ಫ್ಯಾಂಟಮ್ ಹರ್ನಿಯಾ' ಅನ್ನುವರು. ಲಕ್ವದ ಪೋಲಿಯೋದಲ್ಲಿ ಮಾಂಸಖಂಡಗಳಲ್ಲಿ ನಿಶ್ಶಕ್ತಿ ಪ್ರಧಾನವಾಗಿ ಕಾಣುವ ವೇಳೆಗೆ ಹೊಟ್ಟೆಯ ಮತ್ತು ವೃಷಣ ಮಾಂಸ ಖಂಡಗಳ ಪ್ರಕ್ರಿಯೆಗಳು ಅಳಿದುಹೋಗುತ್ತವೆ.

ಚರ್ಮದಲ್ಲಿ ನೋವಿನ ಅತಿ ಸೂಕ್ಷ್ಮತೆ ಸಾಮಾನ್ಯವಾಗಿ ಕಂಡುಬರುತ್ತದೆ. ಸಂವೇದನಾ ಶೂನ್ಯತೆ ಕಾಣಬರುವುದಿಲ್ಲ. ಮಲಬದ್ಧತೆ, ಹೊಟ್ಟೆ ಸೆಡೆತ ಮತ್ತು ಕರುಳುಗಳಲ್ಲಿ ಗಾಳಿ ತುಂಬಿಕೊಂಡು ಹೊಟ್ಟೆ ಉಬ್ಬರಿಸುವುದು ಕಂಡುಬರುವುದು.

ಕತ್ತಿನ ಭಾಗದ ಬೆನ್ನುಹುರಿಗೆ ಅಪಾಯವಾದಾಗ ಭುಜಗಳು, ರಟ್ಟೆಗಳು, ಕತ್ತು ಮತ್ತು ವಪೆಯ ಮಾಂಸಖಂಡಗಳಲ್ಲಿ ನಿಶ್ಶಕ್ತಿ ಅಥವಾ ಲಕ್ವ ಕಾಣಿಸಿಕೊಳ್ಳಬಹುದು. ಎದೆಯ

ಭಾಗದ ಬೆನ್ನುಹುರಿಗೆ ತೊಂದರೆಯುಂಟಾದಾಗ ಎದೆಯ ಮಾಂಸಖಂಡಗಳು ಮತ್ತು ಬೆನ್ನು ಮೂಳೆಯ ಮಾಂಸಖಂಡಗಳು ಅಲ್ಲದೆ ಹೊಟ್ಟೆಯ ಮೇಲು ಭಾಗದ ಮಾಂಸಖಂಡಗಳಲ್ಲಿ ನಿಶ್ಯಕ್ತಿ ಕಾಣಿಸಿಕೊಳ್ಳುವುದು ಪಕ್ಕೆಲುಬುಗಳ ನಡುವಿನ ಮಾಂಸ ಖಂಡಗಳ ಕ್ರಮಹೀನ ಕ್ರಿಯೆಯಿಂದ ಉಸಿರಾಟದ ತೊಂದರೆಗಳು ತಲೆದೋರಬಹುದು.

ಕಶೇರುಕ ರಜ್ಜುವಿನ ಪೋಲಿಯೋದಲ್ಲಿ ಕಪಾಲ ನರಗಳ ಕೇಂದ್ರಗಳು ನಾಶ ಹೊಂದಿ ಅವುಗಳಿಂದ ಆದೇಶ ಪಡೆಯುತ್ತಿದ್ದ ಸ್ನಾಯುಗಳು ನಿಶ್ಯಕ್ತವಾಗುವುವು. ಉಸಿರಾಟದ ಮತ್ತು ಹೃದಯಕ್ರಿಯೆಗಳನ್ನು ನಡೆಸುವ ಸ್ನಾಯುಗಳು ತಮ್ಮ ಕಾರ್ಯವನ್ನು ನಿಲ್ಲಿಸಿಬಿಡುವ ಸಂಭವವುಂಟು.

ರೋಗಿಯ ಕಿರುನಾಲಿಗೆಗೆ ನಿಶ್ಶಕ್ತಿಯ ಉಡುಗೊರೆ ದೊರೆತಾಗ ಕೆಲವು ವಿಶಿಷ್ಟ ಲಕ್ಷಣಗಳು ಕಂಡುಬರುವುವು. ರೋಗಿಯು ಮಾತನಾಡಿದಾಗ ಮೂಗಿನಿಂದ ಮಾತನಾಡಿದಂತಾಗುವುದು. ಪಾನೀಯಗಳನ್ನು ಕುಡಿದಾಗ ಅಥವಾ ಪದಾರ್ಥಗಳನ್ನು ನುಂಗುವಾಗ ಅವು ನೇರವಾಗಿ ಗಂಟಲಕ್ಕಿಳಿಯದೇ ಮೂಗಿನಿಂದ ಹೊರಬರತೊಡಗುತ್ತವೆ. ಧ್ವನಿಪೆಟ್ಟಿಗೆಯ ಸ್ನಾಯುಗಳು ನಿಶ್ಶಕ್ತವಾದರೆ ಮಾತನಾಡುವಾಗ ಧ್ವನಿಯು ಬರಬರುತ್ತ ಕ್ಷೀಣಿಸುವುದು. ಕೊನೆಕೊನೆಗೆ ಧ್ವನಿಯೇ ಅಡಗುವುದು.

ಪೋಲಿಯೊ ಮಿದುಳಿನ ಪೊರೆಯುರಿತ (Polio Encephalitis) ಪ್ರತ್ಯೇಕವಾಗಿ ಪ್ರಕಟಗೊಳ್ಳಬಹುದು. ಇಲ್ಲವೆ ಇತರ ಪ್ರಕಾರಗಳೊಡನೆ ಕಾಣಿಸಿಕೊಳ್ಳಬಹುದು. ಇದು ವ್ಯಾಪಕವಾಗಿರಬಹುದು ಅಥವಾ ನಾಭಿ ಪ್ರದೇಶಕ್ಕೆ ಮಾತ್ರ ಸೀಮಿತವಾಗಿರಬಹುದು. ಮಿದುಳಿನ ಪೊರೆಯುರಿತ ವ್ಯಾಪಕವಾಗಿರುವಾಗ ಮಾನಸಿಕ ಗೊಂದಲ, ಉದ್ರೇಕ, ಕಳವಳ, ಒಡನೆಯೇ ಸಾವು ಸಂಭವಿಸುವುದೆಂಬ ಭೀತಿಯ ಭಾವನೆ ರೋಗಿಯಲ್ಲಿ ಹೆಪ್ಪುಗಟ್ಟಿರುತ್ತದೆ. ಇಲ್ಲವೆ ರೋಗಿಗೆ ಮಂಪರು ಉಂಟಾಗಬಹುದು. ಮುಖದ ಮಾಂಸಖಂಡಗಳು ಮತ್ತು ಕೈಕಾಲುಗಳಲ್ಲಿ ನಡುಕ, ಕಂಪನ ಮತ್ತು ಥಟ್ಟನೆ ಸೆಳವುಗಳ ಸುಳಿಗೆ ಸಿಕ್ಕು ಮುಖ ಕೆಂಪೇರುತ್ತದೆ. ಕೈಗಳು ಕಂಪಿಸುತ್ತವೆ ಮತ್ತು ಅಸ್ಥಿರಚಲನೆ ಹಣುಕಿಹಾಕುವುವು. ನಿದ್ರಾಹೀನತೆ ತುಂಬಾ ಉಗ್ರವಾಗಿರಬಹುದು. ರೋಗ ಉತ್ತುಂಗದ ಸ್ಥಿತಿಗೆ ಮುಟ್ಟಿದಾಗ ಮಾನಸಿಕ ಗೊಂದಲ ತುಂಬಾ ಇರುತ್ತದೆ. ದೀರ್ಘಕಾಲದ ನಿದ್ದೆಯಲ್ಲಿಯೇ ಸಾವು ಸಂಭವಿಸಬಹುದು.

ನಾಭಿಯ ಪೋಲಿಯೋ ಮಿದುಳಿನ ಪೊರೆಯುರಿತದಲ್ಲಿ ಮಿದುಳಿಗೆ ಅಪಾಯವಾಗಿರುವುದಕ್ಕೆ ಆಧಾರಗಳು ದೊರೆಯುತ್ತವೆ. ಪ್ರಕ್ರಿಯೆಯ ಅರಿವಿನ ನಾಶ, ಮರುಕಳಿಸುವ ಮಾಂಸ ಖಂಡಗಳ ಥಟ್ಟನೆಯ ಸೆಳವು, ಅಪಸ್ಮಾರ ಸೆಟೆಗಳು ಕಾಯಿಲೆಯಿಂದ ಗುಣಮುಖವಾದ ಮೇಲೂ ಕೆಲವು ಕಾಲ ಉಳಿದಿರುತ್ತವೆ.' ಸೆಳೆತದ ಪಾರ್ಶ್ವವಾಯು, ಒಂದು ಕೈ ಅಥವಾ ಕಾಲಿನ ಅಸ್ಥಿರ ನಿಲುವು ಮತ್ತು ನೀರ್ದಲೆ (Hydrocephalus)ಗಳನ್ನು ಈ ಕಾಯಿಲೆಯಲ್ಲಿ ಕಾಣಬಹುದು. ಸ್ನಾಯುಗಳ ದೌರ್ಬಲ್ಯ, ಕಪಾಲ ನರಗಳ ಲಕ್ವ ರೋಗ ನಿರ್ಣಯಿಸುವಲ್ಲಿ ಅನುಕೂಲವಾಗುವವು.

## ರೋಗ ನಿದಾನ

ಪೋಲಿಯೋ ಸಾಂಕ್ರಾಮಿಕ ಸ್ವರೂಪದಲ್ಲಿ ಹರಡುತ್ತಿರುವಾಗ ರೋಗದ ಲಕ್ಷಣಗಳ ಮೇಲಿಂದ ಅದನ್ನು ಗುರುತಿಸಲು ಸಾಧ್ಯವಾಗಬಹುದು. ಅವ್ಯಕ್ತ ಪೋಲಿಯೊ, ಸೌಮ್ಯಸ್ವರೂಪದ ಪೋಲಿಯೊಗಳನ್ನು ಗುರುತಿಸುವುದು ಅಸಾಧ್ಯ. ರೋಗಿಯಲ್ಲಿ ಪ್ರಾರಂಭಿಕ

ಲಕ್ಷಣಗಳು ಕಂಡುಬಂದಾಗ ಪೋಲಿಯೊ ಇರಬಹುದೆಂಬ ಸಂಶಯ ಸಹ ವೈದ್ಯರ ಮನದಲ್ಲಿ ಒಮ್ಮೊಮ್ಮೆ ಸುಳಿಯುವುದಿಲ್ಲ. ಏಕೆಂದರೆ ಅದು ವಿಶೇಷ ಲಕ್ಷಣಗಳನ್ನೇನೂ ಹೊಂದಿಲ್ಲ. ಅಂತಹ ರೋಗಿಗಳು ಯಾವುದಾದರೊಂದು ಅವಯವದ ಶಕ್ತಿಹೀನತೆಗೆ ತುತ್ತಾದಾಗ ಬಂದುಹೋದ ಬೇನೆ ಪೋಲಿಯೊ ಎಂದು ಸ್ಪಷ್ಟವಾಗಿ ಹೇಳಬಹುದು. ಇದು ಅತ್ಯಂತ ಸುಲಭವಾದರೂ ನಿರುಪಯುಕ್ತ. ಏಕೆಂದರೆ ಇದರಿಂದ ರೋಗಿಯ ಉಪಚಾರಕ್ಕೆ ಯಾವ ವಿಧದ ಅನುಕೂಲವೂ ಆಗುವುದಿಲ್ಲ.

ಪೋಲಿಯೊ ರೋಗವನ್ನು ದೃಢಪಡಿಸಲು ಕೆಲವು ಪರೀಕ್ಷೆಗಳು ಇವೆ. ಇವುಗಳಲ್ಲಿ ರೋಗಿಯ ಗಂಟಲಿನಿಂದ ಅಥವಾ ಮಲದಿಂದ ಪೋಲಿಯೊ ರೋಗಾಣುಗಳನ್ನು ಸಾಕಣೆಗೊಳಿಸುವುದು ಒಂದು. ಸಂಶಯಾತ್ಮಕ ರೋಗಿಗಳ ರಕ್ತಸಾರದಲ್ಲಿ ರೋಗಾಣುಗಳ ಪ್ರತಿರೋಧಕ ವಸ್ತುಗಳ ಸಾಂದ್ರತೆಯ ಪ್ರಮಾಣವನ್ನು ಪತ್ತೆಹಚ್ಚುವುದು ಎರಡನೆಯದು. ಇವೆರಡೂ ಅಥವಾ ಇವುಗಳಲ್ಲೊಂದು ಪದ್ಧತಿಯಿಂದ ರೋಗವನ್ನು ಖಂಡಿತವಾಗಿ ಖಚಿತಪಡಿಸಬಹುದು. ಆದರೆ ಈ ಎರಡೂ ವಿಧಾನಗಳಿಂದ ರೋಗವನ್ನು ನಿದಾನಿಸಲು ಬೇಕಾಗುವ ಅವಧಿ ಸಾಕಷ್ಟು ಹೆಚ್ಚಿಗಿರುವ ಕಾರಣ ಉಪಚಾರದಲ್ಲಿ ಯಾವ ಪ್ರಯೋಜನವೂ ಆಗಲಿಕ್ಕಿಲ್ಲ. ಇಲ್ಲವೆ ಈ ಪರೀಕ್ಷೆಗಳ ಫಲಿತಾಂಶ ಪ್ರಕಟಗೊಳ್ಳುವ ಮೊದಲೇ ರೋಗಿ ಊನತೆಯ ಉಡುಗೊರೆ ಪಡೆದುಕೊಳ್ಳಬಹುದು.

ಮಿದುಳಿನ ಬೆನ್ನುಹುರಿಯ ದ್ರವಪರೀಕ್ಷೆ ಮಾಡಿ, ಕೆಲವೊಮ್ಮೆ ಈ ರೋಗವನ್ನು ಪತ್ತೆ ಹಚ್ಚಬಹುದು. ಮಿದುಳು ಪೊರೆಯುರಿತದ ಲಕ್ಷಣಗಳು ಪ್ರಕಟಗೊಂಡಾಗ ಈ ಪರೀಕ್ಷೆ ಪ್ರಯೋಜನಕಾರಿ. ಆಗ ಮಿದುಳು ಬೆನ್ನುಹುರಿಯ ದ್ರವದ ಒತ್ತಡ ಹೆಚ್ಚಿರುತ್ತದೆ. ಪ್ರೋಟೀನು ಹೆಚ್ಚಿರುವುದು. ಪ್ರಾರಂಭದಲ್ಲಿ ಹಲರೂಪಕಣ ಹಾಗೂ ಹಾಲ್ರಸಕಣಗಳ ಮಿಶ್ರಣವು ತೋರಿದರೂ, ನಂತರ ಹಾಲ್ರಸಕಣಗಳ ಸಂಖ್ಯೆ ಗಮನಾರ್ಹವಾಗಿ ಹೆಚ್ಚುತ್ತದೆ. ರೋಗದ ಲಕ್ಷಣಗಳ ಜೊತೆಗೆ ಇಂಥ ಫಲಿತಾಂಶಗಳು ಸಿಕ್ಕಾಗ ರೋಗವನ್ನು ಗುರುತಿಸಲು ಸಹಾಯಕವಾಗುವುದು.

ಒಟ್ಟಿನಲ್ಲಿ ಪೋಲಿಯೋ ರೋಗ ನಿದಾನ ಬಹು ಕಷ್ಟಸಾಧ್ಯ ಎಂಬುದರಲ್ಲಿ ಎರಡು ಮಾತಿಲ್ಲ. ಒಂದು ವೇಳೆ ಸಾಧ್ಯವಾದರೆ, ಆ ವೇಳೆಗಾಗಲೇ ರೋಗಿ ರೋಗದಿಂದ ಮುಕ್ತನಾಗಿರುತ್ತಾನೆ. ಅಂಗವಿಕಲತೆಯ ಬಳುವಳಿ ಪಡೆದಿರುತ್ತಾನೆ. ರೋಗಿ ರೋಗದಿಂದ ಬಳಲುತ್ತಿರುವಾಗ ರೋಗ ನಿದಾನ ಆಗುವುದಿಲ್ಲ. ಇದಲ್ಲದೆ ಇದೇ ರೀತಿಯ ರೋಗ ಲಕ್ಷಣಗಳನ್ನು ತೋರ್ಪಡಿಸುವ ಇತರ ರೋಗಗಳಿಂದ ಇದನ್ನು ಬೇರ್ಪಡಿಸಬೇಕಾಗುತ್ತದೆ. ಹೀಗಾಗಿ ಪೋಲಿಯೊ ರೋಗ ನಿದಾನ ತಜ್ಞರಿಗೂ ಸವಾಲಾಗಿಯೇ ಉಳಿದಿದೆ.

## ರೋಗ ರಕ್ಷಣೆ

ಒಂದು ಮಗು ಒಮ್ಮೆ ಪೋಲಿಯೊದಿಂದ ಬಳಲಿದರೆ ಅದೇ ತಳಿಯ ಸೋಂಕಿಗೆ ಜೀವನ ಪರ್ಯಂತ ರಕ್ಷಣೆ ಪಡೆಯುತ್ತದೆ. ತಾತ್ವಿಕವಾಗಿ ಒಂದು ಮಗು ಮೂರು ಸಾರಿ ಪೋಲಿಯೋ ರೋಗದಿಂದ ನರಳಬಹುದು. ಏಕೆಂದರೆ ಪೋಲಿಯೊ ವೈರಸ್ ಮೂರು ತಳಿಗಳನ್ನು ಹೊಂದಿದೆ. ಒಮ್ಮೆ ಪೋಲಿಯೊದಿಂದ ಬಳಲಿದಾಗ ನಿರ್ದಿಷ್ಟ ತಳಿಗೆ ಮಾತ್ರ ರೋಗ ರಕ್ಷಣೆ ದೊರೆಯುತ್ತದೆ. ರೋಗಾಂತರ ರಕ್ಷಣೆ ಮಾನವರಲ್ಲಿ ಕಂಡುಬರುವುದಿಲ್ಲ. ವೈದ್ಯರ ಗಮನಕ್ಕೆ ಬಾರದಂತೆ ಹೆಚ್ಚಿನ ಸಂಖ್ಯೆಯಲ್ಲಿ ದೊಡ್ಡವರು ಮತ್ತು ಅನೇಕ ಮಕ್ಕಳು ಅಲಕ್ಷ್ಯ ಪೋಲಿಯೋ ಅಥವಾ ನಿರರ್ಥಕ ಪೋಲಿಯೋಗಳ

ಬಾಹುಬಂಧನದಲ್ಲಿ ಎರಡು ಮೂರು ಬಾರಿ ಬಂಧಿತರಾಗಿರುತ್ತಾರೆ. ಹೀಗಾಗಿ ಅಂಥವರ ರಕ್ತದಲ್ಲಿ ಒಂದಕ್ಕಿಂತ ಹೆಚ್ಚಿನ ಪೋಲಿಯೊ ವೈರಸ್ ತಳಿಗಳನ್ನು ನಿಷ್ಕ್ರಿಯಗೊಳಿಸಬಲ್ಲ ಪ್ರತಿಕಾಯಗಳಿರುತ್ತವೆ. ಬಹುಶಃ ವಯಸ್ಸು ಹೆಚ್ಚಾದಂತೆಲ್ಲ ಪೋಲಿಯೊ ರೋಗದ ಹಾವಳಿ, ಹಾಹಾಕಾರ ಕಡಿಮೆಯಾಗಲು ಇದೇ ಕಾರಣವಿರಬೇಕು.

ಒಂದೇ ವ್ಯಕ್ತಿಯಲ್ಲಿ ಅನೇಕ ವರ್ಷಗಳ ಅಂತರದಲ್ಲಿ ಲಕ್ವದ ಪೋಲಿಯೊ (Paralytic polio) ಮೂರು ಬಾರಿ ಬಂದದ್ದು ವರದಿಯಾಗಿದೆ. ಆದ್ದರಿಂದ ಒಮ್ಮೆ ಪೋಲಿಯೊ ರೋಗದಿಂದ ಬಳಲಿ ಬೆಂಡಾದ ಪುಟಾಣಿಗೆ ಪೋಲಿಯೋ ಲಸಿಕೆ ಅನವಶ್ಯಕ ಎಂದು ತೀರ್ಮಾನಿಸುವುದು ತಪ್ಪು. ಮಗು ಯಾವುದಾದರೂ ಒಂದು ತಳಿಯ ಪೋಲಿಯೊ ರೋಗಕ್ಕೆ ತುತ್ತಾಗಿರಬಹುದು. ಹೀಗಾಗಿ ಉಳಿದೆರಡು ಪೋಲಿಯೊ ತಳಿಗಳ ಸೋಂಕಿನ ಸುಳಿಯಲ್ಲಿ ಗಿರಕಿ ಹೊಡೆಯುವ ಅವಕಾಶ ಇದ್ದೇ ಇರುತ್ತದೆ. ಅವುಗಳನ್ನು ತಪ್ಪಿಸುವ ಸಲುವಾಗಿಯಾದರೂ ಆ ಮಗುವಿಗೆ ಪೋಲಿಯೊ ಲಸಿಕೆ ಅಗತ್ಯವೆಂಬುದನ್ನು ನೆನಪಿನಲ್ಲಿಡಬೇಕು. ಈ ದಿಶೆಯಲ್ಲಿ ಸುಮುದಾಯ ಶಿಕ್ಷಣ ಅತ್ಯವಶ್ಯ.

ಮಕ್ಕಳಲ್ಲಿ-ಹುಡುಗರಲ್ಲಿ ಇದರ ಹಾವಳಿ ಹುಡುಗಿಯರಿಗಿಂತ ಹೆಚ್ಚು. ಆದರೆ ದೊಡ್ಡವರಲ್ಲಿ ಗಂಡಸರಿಗಿಂತ, ಹೆಂಗಸರಲ್ಲಿ ಇದರ ಉಪಟಳ ಜಾಸ್ತಿ. ಗರ್ಭಿಣಿಯರಲ್ಲಿ ರೋಗದ ಅಪಾಯ ಹೆಚ್ಚಾಗಿಯೇ ಇರುತ್ತದೆ. ಚೊಚ್ಚಲು ಬಸಿರಿಯರಿಗಿಂತ ಹೆಚ್ಚಿಗೆ ಹೆತ್ತವರಲ್ಲಿ ಇದರ ಹಾವಳಿ ಹೆಚ್ಚು. ಗರ್ಭಿಣಿಯರಲ್ಲಿ ಮೊದಲ ಹಾಗೂ ಕೊನೆಯ ಮೂರು ತಿಂಗಳಿಗಿಂತ ಮಧ್ಯದ ಮೂರು ತಿಂಗಳ ಅವಧಿಯಲ್ಲಿ ಹೆಚ್ಚಾಗಿ ಹಣಿಕಿ ಹಾಕುತ್ತದೆ. ಮುಟ್ಟಾಗುವಾಗ ಅಥವಾ ಅಂಡ ಬಿಡುಗಡೆಯಾಗುವ ಸಮಯದಲ್ಲಿ ಈ ರೋಗ ತಗಲುವ ಸಂಭವ ಹೆಚ್ಚು. ಕ್ಷಿಪ್ರವಾದ ಪೋಲಿಯೊ ರೋಗದಿಂದ ಬಳಲುತ್ತಿರುವ ಸಂದರ್ಭದಲ್ಲಿ ಹೆರಿಗೆಯಾದರೆ ಹುಟ್ಟಿದ ಮಗು ಸ್ವಲ್ಪ ಕಾಲದಲ್ಲಿಯೇ ಪೋಲಿಯೊ



ಪೋಲಿಯೋ
ಈ ಪುಟಾಣಿಗೆ
ಬದುಕಿಡೀ
ಬಾಧೆ ಕೊಡುವಂಥದ್ದು

ರೋಗದ ಬಾಹುಬಂಧನದಲ್ಲಿ ಬಂಧಿತವಾಗುತ್ತದೆ.

## ರೋಗದ ಮುನ್ನೋಟ

ಪೋಲಿಯೊ ಕಾಣಿಸಿಕೊಳ್ಳಬಹುದಾದ ಎಲ್ಲ ವಿಧಾನಗಳನ್ನು ಒಟ್ಟಾಗಿ ಪರಿಗಣಿಸಿದಲ್ಲಿ ಶೇಕಡಾ ೫ರಷ್ಟು ರೋಗಿಗಳು ಅಸುನೀಗುತ್ತಾರೆ. ನಿರರ್ಥಕ ಪೋಲಿಯೊ ಮತ್ತು ಅಲಕ್ವ ಪೋಲಿಯೊಕ್ಕೆ ತುತ್ತಾದವರು ಸಂಪೂರ್ಣ ಗುಣಮುಖರಾಗುತ್ತಾರೆ. ಲಕ್ವದ ಪೋಲಿಯೊ ದಿಂದ ನರಳುವ ಮಕ್ಕಳಲ್ಲಿ ಶೇಕಡಾ ೨ ರಿಂದ ೫ ಜನ, ದೊಡ್ಡವರಲ್ಲಿ ವಯಸ್ಸು ಹೆಚ್ಚಾದಂತೆ ಶೇಕಡಾ ೧೫ ರಿಂದ ೩೦ ಜನ ಸಾವನ್ನಪ್ಪುತ್ತಾರೆ. ನಿಶ್ಶಕ್ತ ಅಂಗಗಳು ಶೇಕಡಾ ೬೦ರಷ್ಟು ಶಕ್ತಿಯನ್ನು ಮೂರು ತಿಂಗಳಲ್ಲಿಯೂ ಶೇಕಡಾ ೮೦ರಷ್ಟು ಶಕ್ತಿಯನ್ನು ಆರು ತಿಂಗಳಲ್ಲಿಯೂ ಮರಳಿ ಪಡೆಯುತ್ತವೆ. ಆದರೆ ಎರಡು ವರ್ಷಗಳವರೆಗೂ ಗುಣಮುಖ ವಾಗುವ ಒಂದಿಲ್ಲೊಂದು ಲಕ್ಷಣಗಳು ಕಾಣುತ್ತಲೇ ಇರುತ್ತವೆ. ಸಂಪೂರ್ಣವಾಗಿ ಮೊದ ಲಿನ ಮಟ್ಟಕ್ಕೆ ಬರುವ ಕಾಲಾವಧಿಯು ನಾಶವಾಗಿರುವ ನರಕೋಶಗಳ ಸಂಖ್ಯೆಯನ್ನು ಅವಲಂಬಿಸಿರುತ್ತದೆ. ಕಶೇರುಕ ರಜ್ಜು ಮತ್ತು ಬೆನ್ನು ಹುರಿಯ ತೊಂದರೆಗಳಲ್ಲಿ ವಪೆ ಮತ್ತು ಅಂತರ ಪಕ್ಕೆಲುಬುಗಳ ನರಗಳ ಕ್ರಿಯಾಹೀನ ಕ್ರಿಯೆ ಕಾಣಿಸಿಕೊಂಡಾಗ ಸಾವಿನ ಪ್ರಮಾಣ ಶೇಕಡಾ ೨೫ ರಿಂದ ೭೫ರ ವರೆಗೆ ಏರುತ್ತದೆ. ವಯಸ್ಸು, ಪುಪ್ಪುಸಗಳ ಉರಿಯೂತ, ಮೇಲು ಸೋಂಕು ಅಥವಾ ಪೋಲಿಯೊ ರೋಗದ ದುಷ್ಪರಿಣಾಮದಿಂದ ಉದ್ಭವವಾಗುವ ತೊಂದರೆಗಳು ಸಾವಿನ ಪ್ರಮಾಣದ ಮೇಲೆ ಪ್ರಬಲ ಪರಿಣಾಮ ಬೀರುತ್ತವೆ.

## ದುಷ್ಪರಿಣಾಮಗಳು

೧) ಮೂತ್ರಕೋಶದ ಮೇಲಿನ ಹತೋಟಿ ತಪ್ಪುವುದು.

೨) ಮಲಬದ್ಧತೆ.

೩) ಬುದ್ಧಿಮಾಂದ್ಯ.

೪) ದೃಷ್ಟಿಮಾಂದ್ಯ.

೫) ಉಸಿರಾಟದ ಸ್ನಾಯುಗಳಲ್ಲಿಯ ಅರನಾರಿಯಿಂದ ಉಸಿರಾಟದ ತೊಂದರೆ.

೬) ರಕ್ತದ ಒತ್ತಡ ಹೆಚ್ಚುವಿಕೆ.

೭) ಧ್ವನಿಪೆಟ್ಟಿಗೆಯ ಸ್ನಾಯುಗಳ ನಿಶ್ಯಕ್ತಿಯಿಂದ ಧ್ವನಿಯು ಕ್ಷೀಣವಾಗಬಹುದು. ಕೊನೆಗೆ ಧ್ವನಿಯೇ ಹೊರಡದು.

೮) ಅಪರೂಪವಾಗಿ ಕರುಳಿನಲ್ಲಿ ಹುಣ್ಣುಗಳು ತಲೆದೋರಬಹುದು. ಕರುಳಲ್ಲಿ ರಕ್ತಸ್ರಾವವಾಗಬಹುದು. ಕ್ಷಿಪ್ರವಾದ ಮತ್ತು ಗಮನಾರ್ಹವಾದ ಹೊಟ್ಟೆಯುಬ್ಬರ ಮತ್ತು ದೊಡ್ಡ ಕರುಳಿನ ಉಬ್ಬರ, ಅಂಧಾಂತ್ರ ತೂತು ಬೀಳುವಿಕೆ ಮತ್ತು ಕರುಳಿನ ಲಕ್ವಗಳು ಕಂಡುಬರುತ್ತವೆ.

೯) ಪೋಲಿಯೊ ರೋಗದಲ್ಲಿ ಹೃದಯ ಸ್ನಾಯುವಿನ ಉರಿಯೂತ ಅಸಹಜವೇನಲ್ಲ. ಬಹುಶಃ ಇದು ಹೃದಯವನ್ನು ವೈರಸ್‌ಗಳು ನೇರವಾಗಿ ಆಕ್ರಮಿಸಿಕೊಳ್ಳುವುದರಿಂದ ಉಂಟಾಗಿರುತ್ತದೆ. ಹೃದಯ ಸ್ನಾಯುವಿನ ತಂತುಗಳಲ್ಲಿ ಅಂಗವಿಕಲತೆಯ ಬದಲಾವಣೆಗಳ ಜೊತೆಗೆ ನರೂಲೆಯಂತಹ ಹೃದಯದ ಒಳಪೊರೆಯ ಉರಿಯೂತ ಕಂಡುಬರಬಹುದು. ಅದು ಹೃದಯದ ದ್ವಿಪಕ್ಷ ಕವಾಟಗಳಿಗೆ ಮುತ್ತಿಗೆ ಹಾಕಿ ಮೆತ್ತಗೆ ಮಾಡಬಹುದು. ಉಗ್ರವಾದ ಹೃದಯ ಸ್ನಾಯುವಿನ ವ್ಯಾಧಿಯೇ ಕೆಲವು ರೋಗಿಗಳ ಸಾವಿಗೆ ಸಂಚಕಾರ

ತರಬಹುದು.

೧೦) ಪೋಲಿಯೊದಲ್ಲಿ ಸಾಮಾನ್ಯವಾಗಿ ಸೋಂಕಿಗೆ ತುತ್ತಾಗಬಹುದಾದ ಇತರ ತಾಣವೆಂದರೆ ಮೂತ್ರ ಪಥ. ಏಕೆಂದರೆ ಮೂತ್ರಕೋಶಕ್ಕೆ ಲಕ್ವ ಹೊಡೆದ ರೋಗಿಗಳಲ್ಲಿ ಮೂತ್ರವನ್ನು ಹೊರತೆಗೆಯಲಿಕ್ಕೆ ಪದೇ ಪದೇ ನಳಿಕೆಯನ್ನು ಮೂತ್ರಕೋಶದೊಳಗೆ ತೂರಿಸಬೇಕಾಗುತ್ತದೆ.

೧೧) ಮನೋವಿಕಾರದ ಸಮಸ್ಯೆಗಳು ಉಂಟಾಗಬಹುದು. ದಿಗ್ಭ್ರಮೆ, ಕ್ಷಿಪ್ರವಾದ ತೀವ್ರ ಭಯದ ಸ್ಥಿತಿ, ಕಾರ್‌ಸಕಾಫ್‌ರವರ ತರಹದ ಲಕ್ಷಣಕೂಟ, ಕ್ಷಿಪ್ರವಾದ ಬುದ್ಧಿವಿಕಲ್ಪಗಳು ಕಾಣುವವು. ದೀರ್ಘಕಾಲದ ತಳಮಳ ಮತ್ತು ಖಿನ್ನತೆಗಳು ಸಾಮಾನ್ಯವಾಗಿ ಉಗ್ರ ಹಾನಿಗೊಳಗಾದ ದೊಡ್ಡವರಲ್ಲಿ ಕಂಡು ಬರುತ್ತದೆ.

೧೨) ಸಂಧಿವಾತದಂತಹ ಕೀಲುರಿಯೂತದ ಲಕ್ಷಣಕೂಟ ಕಾಣಬಹುದು. ಈ ಲಕ್ಷಣ ಕೂಟದಲ್ಲಿ ದೊಡ್ಡ ಕೀಲುಗಳು ಕೆಂಪಾಗುವಿಕೆ, ಊತ, ನೋವು ಮತ್ತು ಸ್ಪರ್ಶ ವೇದನೆಗಳು ಲಕ್ವದ ಪೋಲಿಯೊ ರೋಗಿಗಳ ಚೇತನಕಾಲದಲ್ಲಿ ಅಪರೂಪವಾಗಿ ಕಾಣುತ್ತವೆ. ಅನೇಕ ವಿಧವಾದ ಬೊಕ್ಕೆಗಳು ಕಾಣಿಸಿಕೊಳ್ಳಬಹುದು. ಬೆವರು ಗ್ರಂಥಿಯ ಗುಳ್ಳೆಗಳು, ಮೇದೋಜ್ಜೀರಕ ಗ್ರಂಥಿಗಳ ಅತಿಸ್ರಾವದ ಬೊಕ್ಕೆಗಳು ಮತ್ತು ಕಿರು ರಕ್ತ ಸ್ರಾವದ ಬೊಕ್ಕೆಗಳು, ದಡಾರದಂತಹ ಅಥವಾ ಸಿಪ್ಪೆ ಸುಲಿಯುವ ಬೊಕ್ಕೆಗಳು ಕಂಡುಬರಬಹುದು. ದೀರ್ಘಕಾಲ ಹಾಸಿಗೆ ಹಿಡಿದ ರೋಗಿಗಳಲ್ಲಿ ಶಯ್ಯಾವ್ರಣಗಳ ಹಾವಳಿ ತಲೆದೋರಬಹುದು.

## ಚಿಕಿತ್ಸೆ ಮತ್ತು ಪ್ರತಿಬಂಧಕೋಪಾಯಗಳು

೧) ವಿಶ್ರಾಂತಿ: ಪ್ರಾರಂಭಿಕ ಹಂತದಲ್ಲಿದ್ದಾಗ ಸಂಪೂರ್ಣ ದೈಹಿಕ ಹಾಗೂ ಮಾನಸಿಕ ವಿಶ್ರಾಂತಿ ಅತ್ಯವಶ್ಯ. ಯಾಕೆಂದರೆ ಯಾವುದೇ ಪ್ರಕಾರದ ಪರಿಶ್ರಮ ಅರನಾರಿಯ ವ್ಯಾಪಕತೆಯನ್ನು ಹೆಚ್ಚಿಸಲು ಸಹಾಯಕವಾಗುತ್ತದೆ.

೨) ಗುದ ಮತ್ತು ಮೂತ್ರಾಶಯದ ಆರೈಕೆ: ಹತೋಟಿ ತಪ್ಪಿದ ಮೂತ್ರಕೋಶದ ಆರೈಕೆ, ಮಲಬದ್ಧತೆಯ ನಿವಾರಣೆಗಳತ್ತ ವಿಶೇಷ ಗಮನಕೊಡುವದರಿಂದ ಅವು ಮೊದಲಿನಂತೆ ತಮ್ಮ ಕಾರ್ಯವನ್ನು ಚಾಚೂ ತಪ್ಪದೇ ನಡೆಸಿಕೊಂಡು ಹೋಗುತ್ತವೆ.

೩) ಸ್ನಾಯುಗಳ ಜಿಗಿತ ಹಾಗೂ ನೋವುಗಳ ನಿವಾರಣೆ ಮಾಡುವುದು.

೪)ಆಹಾರ: ರೋಗವು ಉಗ್ರಸ್ವರೂಪದಲ್ಲಿದ್ದಾಗ ರೋಗಿಗೆ ಕೇವಲ ದ್ರವರೂಪದ ಆಹಾರ ಕೊಡುವುದು ಸೂಕ್ತ.

೫) ಔಷಧೋಪಚಾರ: ಈ ರೋಗದ ಹಿಡಿತಕ್ಕೆ ನಿರ್ದಿಷ್ಟ ಔಷಧಿಯಿಲ್ಲ. ಆದರೂ ದ್ವಿತೀಯ ಸೋಂಕಿನಿಂದಾಗಬಹುದಾದ ತೊಡಕು ತೊಂದರೆಗಳ ಹತೋಟಿಗಾಗಲಿ ನಿವಾರಣೆಗಾಗಲಿ ತಕ್ಕ ಜೀವಿರೋಧಕಗಳನ್ನು ಉಪಯೋಗಿಸುವುದು ರೋಗಿಯ ಹಿತದೃಷ್ಟಿಯಿಂದ ಒಳ್ಳೆಯದು. ಯಾವ ಔಷಧವನ್ನು ಕೊಟ್ಟರೂ ಸೂಜಿ ಹಾಕುವುದನ್ನು ರೋಗದ ಉಲ್ಬಣತೆಗೆ ಕಡಿವಾಣ ಹಾಕುವ ದೃಷ್ಟಿಯಿಂದ ತಡೆಯಲೇಬೇಕು.

೬) ದ್ರವ ಉಪಚಾರ: ರೋಗಿಯು ಕೆಲವೊಂದು ಸಲ ವಾಂತಿ ಭೇದಿಗಳಿಂದ ಬಳಲುವುದರಿಂದ, ನೀರನ್ನು ಸೇವಿಸಲು ನಿರಾಕರಿಸುವುದರಿಂದ ದೇಹದಲ್ಲಿಯ ನೀರಿನ ಅಂಶ ಕಡಿಮೆಯಾಗುವದು. ರೋಗಿಯ ಆರೈಕೆಯಲ್ಲಿ ಬಳಸುವ ಶಾಖದ ಉಪಚಾರ ಹಾಗೂ ಜ್ವರ ದೇಹದಲ್ಲಿ ನೀರಿನ ಅಂಶವನ್ನು ಕಡಿಮೆಯಾಗಿಸಲು ಕಾರಣವಾಗುವವು. ಒಟ್ಟಿನಲ್ಲಿ ಈ ಎಲ್ಲ ಪರಿಣಾಮಗಳಿಂದ ರೋಗಿಯು ನಿರ್ಜಲೀಕರಣದ ಲಕ್ಷಣಗಳನ್ನು ತೋರಿಸಬಹುದು. ಆದರೆ ದೇಹದಲ್ಲಿಯ ನೀರಿನ ಪ್ರಮಾಣ ಕಡಿಮೆ

ಮಾಡಗೊಡಬಾರದು. ಈ ನಷ್ಟವನ್ನು ಸರಿಪಡಿಸಲು ಸಾಧ್ಯವಾದಷ್ಟು ರೋಗಿಗೆ ಬಾಯಿಯಿಂದಲೇ ದ್ರವದ ಉಪಚಾರ ಮಾಡಬೇಕು. ಅದು ಸಾಧ್ಯವಾಗದಾಗ, ನರಗಳ ಮೂಲಕ ಉಪ್ಪು ನೀರನ್ನಾಗಲಿ ಅಥವಾ ದ್ರಾಕ್ಷಾ ಸಕ್ಕರೆ ದ್ರವವನ್ನಾಗಲಿ ಕೊಡಬೇಕು.

೭) ನುಂಗುವ ಸ್ನಾಯುಗಳು ಅರನಾರಿಗೆ ತುತ್ತಾದಾಗ ಗಂಟಲಿನಲ್ಲಿ ಸ್ರವಿಕೆಗಳು ಶೇಖರಗೊಳ್ಳುವವು. ಇದು ಜೀವಕ್ಕೆ ಅಪಾಯಕಾರಿ. ಇಂಥ ಪ್ರಸಂಗದಲ್ಲಿ ರೋಗಿಯ ಮಂಚವನ್ನು ಕಾಲಿನಕಡೆ ಎತ್ತರಿಸಬೇಕು. ರೋಗಿಯನ್ನು ಒಂದು ಮಗ್ಗಲು ಮಲಗಿಸಬೇಕು. ಸಂಗ್ರಹಗೊಂಡ ಸ್ರವಿಕೆಗಳನ್ನು ತೆಗೆಯಬೇಕು. ವಾಂತಿಯ ತೊಂದರೆ ತಲೆದೋರಿದಲ್ಲಿ ರೋಗಿಯನ್ನು ಎಬ್ಬಿಸಿ ಕೂಡಿಸಬಾರದು. ಹಾಗೆ ಮಾಡಿದಲ್ಲಿ ವಾಂತಿಯ ಪದಾರ್ಥಗಳು ಮರಳಿ ಶ್ವಾಸನಾಳ ಸೇರುವ ಸಾಧ್ಯತೆ ಇರುತ್ತದೆ. ಇದರಿಂದ ಪುಪ್ಪುಸದುರಿಯೂತ ಕಾಣಿಸಿಕೊಳ್ಳಬಹುದು. ಇವೆಲ್ಲವುಗಳಿಗೆ ಅವಕಾಶ ನೀಡಬಾರದೆಂದು ರೋಗಿಯ ಶ್ವಾಸನಾಳ ಸ್ವಚ್ಛವಾಗಿರುವಂತೆ ಎಲ್ಲ ಕ್ರಮಗಳನ್ನೂ ಸಕಾಲದಲ್ಲಿ ತೆಗೆದುಕೊಳ್ಳಬೇಕು.

೮) ಲಕ್ವದ ಪೋಲಿಯೊ ಬಂದಾಗ ಮರ್ಮಕೇಂದ್ರಗಳು ಅಪಾಯಕ್ಕೊಳಗಾದರೆ ರೋಗಿಯ ಪ್ರಾಣ ರಕ್ಷಿಸಲು ಎಲ್ಲಾ ಸಾಧ್ಯವಾದ ಕ್ರಮಗಳನ್ನು ಕೈಕೊಳ್ಳಬೇಕು. ರೋಗಿಯನ್ನು ತೊಂದರೆಗಳಿಂದ ಮುಕ್ತರನ್ನಾಗಿಸಬೇಕು. ನರಕೋಶಗಳ ಕ್ರಿಯೆ ಸಹಜ ಸ್ಥಿತಿಗೆ ಬರುವವರೆಗೆ ನಿಶ್ಶಕ್ತಿಗೊಂಡ ಮಾಂಸಖಂಡಗಳನ್ನು ಒಳ್ಳೆಯ ಸ್ಥಿತಿಯಲ್ಲಿ ಕಾಪಾಡಿಕೊಂಡು ಬರಬೇಕು. ವೈದ್ಯಕೀಯ ದುಷ್ಪರಿಣಾಮಗಳನ್ನು ತಕ್ಷಣ ಗುರುತಿಸಿ ಅವುಗಳಿಗೆ ತಕ್ಕ ಚಿಕಿತ್ಸೆ ನೀಡಬೇಕು. ಮನೋವಿಕಾರದ ಸಾಧ್ಯತೆಗಳನ್ನು ತಡೆಗಟ್ಟಬೇಕು. ಅಕಸ್ಮಾತ್ ಮನೋವಿಕಾರ ಉಂಟಾದರೆ ಸೂಕ್ತ ಸಕಾಲಿಕ ಚಿಕಿತ್ಸೆಯನ್ನು ನೀಡಬೇಕು. ಸರಿಪಡಿಸಬಹುದಾದ ನ್ಯೂನತೆಗಳನ್ನು ಶಸ್ತ್ರಚಿಕಿತ್ಸೆಯಿಂದ ಸರಿಪಡಿಸಬೇಕು. ರೋಗಿಯನ್ನು ಸಾಮಾಜಿಕವಾಗಿ, ಆರ್ಥಿಕವಾಗಿ, ಔದ್ಯೋಗಿಕವಾಗಿ ಮತ್ತು ಭೌತಿಕವಾಗಿ ಮೊದಲಿನ ಹಾಗೆ ಸಜ್ಜುಗೊಳಿಸಬೇಕು. ಸೂಕ್ತ, ಕ್ರಮಬದ್ಧ ವ್ಯಾಯಾಮ ಮಾಡಿಸಬೇಕು.

೯) ಉಸಿರಾಟದ ಸ್ನಾಯುಗಳ ಲಕ್ವವನ್ನು ಅತಿ ಜಾಗ್ರತೆಯಿಂದ ಗುರುತಿಸಿ ತಕ್ಕ ಚಿಕಿತ್ಸೆಯನ್ನು ತಡಮಾಡದೆ ಕೊಡಬೇಕು. ಅವಶ್ಯವಿದ್ದಾಗ ಶ್ವಾಸನಾಳ ಛೇದನ (Tracheostomy) ಮಾಡಬೇಕು. ವಪೆ ಅಥವಾ ಅಂತರ ಪಕ್ಕೆಲುಬುಗಳ ಸ್ನಾಯುಗಳ ಅಥವಾ ಇವೆರಡರ ಚಲನೆ ಕುಂಠಿತಗೊಂಡಾಗ ಶ್ವಾಸಕೋಶಗಳ ಧಾರಣ ಶಕ್ತಿಯನ್ನು ನಿರ್ಧರಿಸಬೇಕು. ಈ ಧಾರಣ ಶಕ್ತಿಯು ಸಹಜ ಪ್ರಮಾಣದ ಶೇಕಡಾ ೫೦ ಭಾಗ ಅಥವಾ ಅದಕ್ಕಿಂತಲೂ ಕಡಿಮೆಯಾದಾಗ ವಯಸ್ಸು ಮತ್ತು ತೂಕದ ಆಧಾರದ ಮೇಲೆ ಕೃತಕ ಉಸಿರಾಟವನ್ನು ಪ್ರಾರಂಭಿಸಬೇಕು.

೧೦) ಪ್ರತಿಬಂಧಕೋಪಾಯಗಳು: ಅ) ರೋಗಿಯನ್ನು ಇತರರಿಂದ ಪ್ರತ್ಯೇಕಿಸುವುದು ಹಾಗೂ ಸಂಪೂರ್ಣ ಔಷಧೋಪಚಾರ ನೀಡುವುದು. ಬ) ಹುಟ್ಟಿದ ತಕ್ಷಣ ಎಲ್ಲ ಮಕ್ಕಳಿಗೆ ಪೋಲಿಯೊ ಹನಿಗಳನ್ನು ಹಾಕುವುದು ಮತ್ತು ಮಗುವಿಗೆ ಆರು ವಾರಗಳಾದೊಡನೆ ಪೋಲಿಯೊ ಹನಿಗಳನ್ನು ೪-೬ ವಾರಗಳ ಅಂತರದಲ್ಲಿ ಐದು ಬಾರಿ ಹಾಕಿಸುವುದು. ಕ) ನೀರು ಹಾಗೂ ಆಹಾರವಿಹಾರಗಳ ಶುಚಿತ್ವದತ್ತ ಗಮನ ಕೊಡುವುದು ಡ) ರೋಗದ ಬಗ್ಗೆ- ಅದರಲ್ಲೂ ಮುಖ್ಯವಾಗಿ ರೋಗ ಹರಡುವ ವಿಧಾನದ ಬಗ್ಗೆ- ಜನಸಾಮಾನ್ಯರಿಗೆ ತಿಳಿಯುವಂತೆ ಮಾಹಿತಿಕೊಡುವುದು.

Printed and Published by S.K. KATOTE on behalf of Loka Shikshana Trust at Samyukta Karnataka Press, Koppikar Road, Hubli-580 020. (Phone: 364303): No. 2, Residency Road, Bangalore-560 025. (Phone: 2213265).

**Managing Editor: K. SHAMARAO**
**Registered with the Registrar of Newspaper for India under No. 3633/57.**




# ಲೋಕ ಶಿಕ್ಷಣ ಟ್ರಸ್ಟ್
# ಗ್ರಂಥಮಾಲೆಯ ಪ್ರಕಟಣೆಗಳು

## ಹುಬ್ಬಳ್ಳಿ-ಬೆಂಗಳೂರು

| | ಪುಸ್ತಕದ ಹೆಸರು | ಲೇಖಕರ ಹೆಸರು | ಬೆಲೆ |
|---|---|---|---|
| ೧. | ನನಗೆ ನಾನೇ ಮಾದರಿ | ಶ್ರೀ ಬಿ.ಡಿ. ಜತ್ತಿ | ರೂ. ೪೦-೦೦ |
| ೨. | ಶ್ರೀ ರಾಮದಾಸರು ಹೇಳಿದ ಕಥೆಗಳು | ಶ್ರೀ ಬಿ.ಡಿ. ಜತ್ತಿ | ,, ೧೫-೦೦ |
| ೩. | ಕೃಷ್ಣಾವತಾರ ಭಾಗ-೧ | ಮೂಲ: ಶ್ರೀ ಕೆ.ಎಂ. ಮುನ್ಶಿ ಅನುವಾದ: ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ | ,, ೨೦-೦೦ |
| ೪. | ಕೃಷ್ಣಾವತಾರ ಭಾಗ-೨ | -"- | ,, ೨೫-೦೦ |
| ೫. | ಕೃಷ್ಣಾವತಾರ ಭಾಗ-೩ | -"- | ,, ೨೦-೦೦ |
| ೬. | ಕೃಷ್ಣಾವತಾರ ಭಾಗ-೪ | -"- | ,, ೨೦-೦೦ |
| ೭. | ಕೃಷ್ಣಾವತಾರ ಭಾಗ-೫ | -"- | ,, ೨೫-೦೦ |
| ೮. | ಕೃಷ್ಣಾವತಾರ ಭಾಗ-೬ | -"- | ,, ೨೦-೦೦ |
| ೯. | ಕೃಷ್ಣಾವತಾರ ಭಾಗ-೭ | -"- | ,, ೨೦-೦೦ |
| ೧೦. | ಕೃಷ್ಣಾವತಾರ ಭಾಗ-೮ | -"- | ,, ೨೫-೦೦ |
| ೧೧. | ಕೃಷ್ಣಾವತಾರ ಭಾಗ-೯, ೧೦ | -"- | ,, ೨೦-೦೦ |
| ೧೨. | ಕರ್ನಾಟಕದಲ್ಲಿ ಕ್ವಿಟ್ ಇಂಡಿಯಾ ಚಳವಳಿ | ಡಾ. ಸೂರ್ಯನಾಥ ಕಾಮತ | ,, ೪೫-೦೦ |
| ೧೩. | ವಂದೇಮಾತರಂದಿಂದ ಜನಗಣಮನದವರೆಗೆ | ಶ್ರೀ ವಿ.ಎಚ್. ದೇಸಾಯಿ | ,, ೫೦-೦೦ |
| ೧೪. | ಗೀತಾ ನಿತ್ಯಪಾಠ | ಶ್ರೀ ರಂಗನಾಥ ದಿವಾಕರ | ,, ೩-೦೦ |
| ೧೫. | ಶ್ರೀ ಕೃಷ್ಣಾವತಾರದ ಕೊನೆಯ ಗಳಿಗೆಗಳು | ಪ್ರೊ. ಕೆ.ಎಸ್. ನಾರಾಯಣಾಚಾರ್ಯ | ,, ೨೦-೦೦ |
| ೧೬. | ಗಾಂಧೀಜಿ ನಾನು ಕಂಡಂತೆ | ಶ್ರೀ ರಂಗನಾಥ ದಿವಾಕರ | ,, ೧೦-೦೦ |
| ೧೭. | ನೆನಪಿನಂಗಳದಲ್ಲಿ | ಶ್ರೀ ಜಿ.ಎಂ. ಪಾಟೀಲ | ,, ೨೦-೦೦ |

ವಿ.ಸೂ. ಪುಸ್ತಕ ಮಾರಾಟಗಾರರಿಗೆ ಕನಿಷ್ಠ ೧೦ ಪ್ರತಿಗಳನ್ನು ತರಿಸಿದರೆ ಶೇ. ೨೫ರಷ್ಟು ಕಮೀಷನ್ ಕೊಡಲಾಗುವದು. ಪುಸ್ತಕಗಳು ಬೇಕಾದಲ್ಲಿ ತಕ್ಷಣ ಕೆಳಕಂಡ ವಿಳಾಸಕ್ಕೆ ಎಲ್ಲ ವಿವರಗಳೊಂದಿಗೆ ಡಿ.ಡಿ. ಅಥವಾ ಮನಿಯಾರ್ಡರ್ ಮೂಲಕ ಬರೆದು ತಿಳಿಸುವುದು. ಅಂಚೆ ವೆಚ್ಚ ಪ್ರತ್ಯೇಕ. ವಿ.ಪಿ.ಪಿ. ಸೌಲಭ್ಯ ಇರುವುದಿಲ್ಲ.

ಪ್ರಸಾರಾಂಗ ವ್ಯವಸ್ಥಾಪಕರು

ಸಂಯುಕ್ತ ಕರ್ನಾಟಕ, ಕೊಪ್ಪೀಕರ ರಸ್ತೆ, ಹುಬ್ಬಳ್ಳಿ-೨೦.

ಸಂಯುಕ್ತ ಕರ್ನಾಟಕ, ನಂ. ೨, ರೆಸಿಡೆನ್ಸಿ ರಸ್ತೆ, ಬೆಂಗಳೂರು-೨೫.

Cover Printed at: Bharat Photo Offset Works, Dharwad. Ph: 40545

